

# ಶ್ರೀ ಪಂಚಾಕ್ಷರ ಪ್ರಕಾಶ





ಸುವರ್ಣ ಮಹೋತ್ಸವ ಸಮಿತಿ,
**ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ.**



೧೯೬೪

# ಶ್ರೀ ಪಂಚಾಕ್ಷರ ಪ್ರಕಾಶ

ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ-ಸಾಹಿತ್ಯ ವಿದ್ಯಾಲಯದ
ಸುವರ್ಣಮಹೋತ್ಸವ ಸ್ಮಾರಕ ಸಂಪುಟ

ಪ್ರಕಾಶಕರು:
ಶ್ರೀ ಪಂ. ಪುಟ್ಟರಾಜ ಗವಾಯಿಗಳು

ಸಂಪಾದಕರು:
ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳು, ಎಂ. ಎ.

ಸುವರ್ಣ ಮಹೋತ್ಸವ ಸಮಿತಿ,
ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ.

೧೯೬೪

ಪ್ರಕಾಶಕರು
ಶ್ರೀ ಎ. ಬಿ. ಹಿರೇಮಠ,
ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ.



(೧೦೦೦ ಪ್ರತಿಗಳು)
ದಿನಾಂಕ ೩೦—೬—೧೯೬೪



ಮುದ್ರಕರು
ಶ್ರೀ ಶಿವಪ್ಪ ಲಿಂಗಪ್ಪ ವೀಣೆಕರ
ಶ್ರೀ ಶಿವಾನಂದ ಪ್ರಿಂಟಿಂಗ ಪ್ರೆಸ್, ಗದಗ.

# ಪ್ರಕಾಶಕರ ಮಾತು

ಪರಮ ಗುರುವರ್ಯ ಲಿ. ಪಂಚಾಕ್ಷರ ಗವಾಯಿಗಳವರು ಸ್ಥಾಪಿಸಿದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ-ಸಾಹಿತ್ಯ ಮಹಾ ಸಂಸ್ಥೆಯ ಸುವರ್ಣ ಮಹೋತ್ಸವವನ್ನು ಆಚರಿಸಬೇಕೆಂದು ಎಲ್ಲರ ಆಶೆಯಾಗಿದ್ದಿತು. ಆದರ ಪುಣ್ಯ ಸ್ಮರಣೆಗಾಗಿ ಸ್ಮಾರಕ ಗ್ರಂಥ ಮತ್ತು ಗುರುವರ್ಯರ ಅಮೃತ ಶಿಲಾಮೂರ್ತಿಯ ಪ್ರತಿಷ್ಠೆ ಇವೆರಡನ್ನು ನೆರವೇರಿಸಬೇಕೆಂದು ಉತ್ಸವ ಸಮಿತಿಯವರ ಉದ್ದೇಶ ವಾಗಿತ್ತು. ಶಿಲಾಮೂರ್ತಿಯ ನಿರ್ಮಾಣ-ಪ್ರತಿಷ್ಠೆಯ ಹೊಣೆಗಾರಿಕೆಯನ್ನು ಶ್ರೀ ಚಿತ್ತರಗಿ ಗಂಗಾಧರ ಶಾಸ್ತ್ರಿಗಳವರು ಹೊತ್ತರು. ಗ್ರಂಥ ಪ್ರಕಟನೆಯ ಭಾರ ಪಂ. ಪುಟ್ಟರಾಜರ ಪಾಲಿನದಾಯಿತು. ಈ ಗ್ರಂಥವನ್ನು ಸರಿಯಾದ ರೀತಿ ಯಲ್ಲಿ ಸಂಪಾದಿಸಿ ಅಚ್ಚು ಮಾಡಿಸುವ ಭಾರ ಹೇಗೆ ಹಗುರಾದೀತು ಎಂದು ಚಿಂತಿಸುವಷ್ಟರಲ್ಲಿ ಹಾನಗಲ್ಲ ಪೂಜ್ಯ ಶ್ರೀ ನಿ ಪ್ರ. ಸದಾಶಿವ ಮಹಾಸ್ವಾಮಿಗಳವರು ಕೃಪೆಮಾಡಿದರು, ಪ್ರಕಾಶನ ಮಾಡಿಸುವ ಅಭಯವಿತ್ತರು. ಪೂಜ್ಯರು ಈ ಕಾರ್ಯ ವನ್ನು ಅನುಭವಿಗಳೂ, ಸಂಸ್ಥೆಯ ಅಭಿಮಾನಿಗಳೂ, ಆದ ಪ್ರೊ. ಜಿ. ಎಂ. ಶಾಸ್ತ್ರಿಗಳವರಿಗೆ ಒಪ್ಪಿಸಿದರು. ಶ್ರೀ ಶಾಸ್ತ್ರಿಗಳವರು ಸಕಾಲಕ್ಕೆ ಈ ಗ್ರಂಥವನ್ನು ಸಮರ್ಪಕವಾದ ರೀತಿಯಲ್ಲಿ ಸಂಪಾದಿಸಿ ಕೊಟ್ಟಿದ್ದಾರೆ. ಈ ಕಾರ್ಯಕ್ಕೆ ದೊರೆ ಯುವ ಶ್ರೇಯಸ್ಸಿನಲ್ಲಿ ಅಧಿಕಾಂಶವು ಪ್ರೊ. ಉಮಾಪತಿ ಶಾಸ್ತ್ರಿಗಳವರಿಗೆ ಸಲ್ಲ ಬೇಕಾಗಿದೆ. ಸಂಕಲ್ಪ ಮಾಡುವದು ಸುಲಭ. ಅದನ್ನು ಪೂರ್ಣಗೊಳಿಸುವದು ಮಾತ್ರ ಕಠಿಣ. ಈ ಮಹಾ ಸಂಸ್ಥೆಯ ಸಂಕಲ್ಪವನ್ನು ಪ್ರೊ. ಶಾಸ್ತ್ರಿಗಳವರು ಸಮರ್ಥ ರೀತಿಯಿಂದ ಕಾರ್ಯಗತ ಮಾಡಿಕೊಟ್ಟಿರುವರು. ಅದಕ್ಕಾಗಿ ಅವರಿಗೆ ನಾವು ಆಭಾರಿಯಾಗಿದ್ದೇವೆ. 'ಶ್ರೀ ಪಂಚಾಕ್ಷರ ಪ್ರಕಾಶ'ವೆಂಬ ಈ ಸುವರ್ಣ ಸಂಪುಟವು ಕನ್ನಡಿಗರ ಕೈಸೇರುತ್ತಿದೆ. ನಮ್ಮ ಸಂಕಲ್ಪವು ಹಾನಗಲ್ಲ ಶ್ರೀಗಳವರ ಕೃಪೆ ಮತ್ತು ಪ್ರೊ. ಶಾಸ್ತ್ರಿಗಳವರ ಪರಿಶ್ರಮದ ಫಲವಾಗಿ ಈಡೇರಿದಂತಾಗಿದೆ. ಅದಕ್ಕಾಗಿ ಹಾನಗಲ್ಲ ಶ್ರೀಗಳವರಿಗೆ ನಮ್ಮ ಉತ್ಸವ ಸಮಿತಿಯು ಹೃತ್ಪೂರ್ವಕ ವಾಗಿ ಆದರದ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಈ ಗ್ರಂಥಕ್ಕೆ ಬೇಕಾದ ಸಾಹಿತ್ಯವನ್ನು ಗುರುವರ್ಯರ ಅಭಿಮಾನಿಗಳು

ಶಿಷ್ಯರೂ ಸಕಾಲಕ್ಕೆ ಒದಗಿಸಿಕೊಟ್ಟು ಕೃತಕೃತ್ಯರಾಗಿದ್ದಾರೆ. ಅವರೆಲ್ಲರನ್ನೂ ಹೃದಯಾರೆ ನೆನೆಯುತ್ತೇವೆ.

ನಮ್ಮ ಸಂಸ್ಥೆಯು ಹೊತ್ತುಕೊಂಡ ಈ ಹೊಣೆಯನ್ನು ನಿತ್ತರಿಸುವಾಗ ಅನೇಕ ಮಹನೀಯರು ಉದಾರ ಬುದ್ಧಿಯಿಂದ ಆರ್ಥಿಕ ನೆರವು ನೀಡಿ ನಮ್ಮ ಭಾರವನ್ನು ಹಗುರಾಗಿಸಿದ್ದಾರೆ. ಈ ಸ್ಮಾರಕ ಸಂಪುಟವನ್ನು ಹೊತ್ತಿಗೆ ಸರಿಯಾಗಿ ಮುದ್ರಿಸಿಕೊಟ್ಟ ಗದಗಿನ ಶಾಬಾದಿ ಮುದ್ರಣಾಲಯ, ಶಂಕರನಾರಾಯಣ ಪ್ರೆಸ್ಸು ಮತ್ತು ಶಿವಾನಂದ ಮುದ್ರಣ ಮಂದಿರಗಳ ಸಂಚಾಲಕರ ಸಹಕಾರವನ್ನು ನಾವಿಲ್ಲಿ ಸ್ಮರಿಸದಿರಲಾರೆವು. ಎಲ್ಲರಿಗೂ ಗುರುವರ್ಯ ಶ್ರೀ ಪಂಚಾಕ್ಷರಿಯು ಸನ್ಮಂಗಲವನ್ನುಂಟು ಮಾಡಲಿ.

ಎ. ಬಿ. ಹಿರೇಮಠ

ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ

# ಸಂಪಾದಕರ ಮಾತು

ಪರಮ ಶಿವಗಾನಯೋಗಿ ಲಿಂ. ಪಂಚಾಕ್ಷರ ಗವಾಯಿಗಳವರ ಪುಣ್ಯ-ಸ್ಮರಣೆಯು ಈ ರೂಪದಲ್ಲಿ ಪ್ರಕಾಶಗೊಳ್ಳುತ್ತಿದೆ. ಈ 'ಪಂಚಾಕ್ಷರ ಪ್ರಕಾಶ'ದ ಪ್ರಕಾಶನ ಕಾರ್ಯದಲ್ಲಿ ನನ್ನ ಪಾತ್ರ ನಿಮಿತ್ತ ಮಾತ್ರ. ಕೇವಲ ಎರಡು ವಾರಗಳಲ್ಲಿ ಮುನ್ನೂರು ಪುಟಗಳ ಹೊತ್ತಿಗೆಯನ್ನು ಸಂಪಾದಿಸುವೆನೆಂಬ ಧೈರ್ಯ ನನಗೂ ಸಾಲದಾಗಿತ್ತು. ಅದೆಲ್ಲವೂ ಗುರು ಕುಮಾರೇಶನ ಕೃಪೆಯ ಬಲವೆಂದು ಬಗೆದಿರುವೆನು. ಪೂಜ್ಯ ಶ್ರೀ ನಿ. ಪ್ರ. ಸದಾಶಿವ ಮಹಾಸ್ವಾಮಿಗಳವರು ಹಾನಗಲ್ಲ ಅವರು ' ಈ ಗ್ರಂಥವನ್ನು ಸಂಪಾದಿಸಿ ಅಚ್ಚಿಗೆ ಕೊಟ್ಟಿರುವೆನೆಂದು ತಿಳಿಸಬೇಕು. ಆಗ ನಮಗೆ ಸಂತೋಷ ' ಎಂದು ಬರೆದಾಗ ಎಚ್ಚರವಾಯಿತು. ಉಳಿದೆಲ್ಲ ಕೆಲಸಗಳನ್ನು ಬಿಟ್ಟು ಈ ಸೇವೆಗೆ ನಿಂತೆ. ಶ್ರೀ ಶಾಬಾದಿ, ಮತ್ತು ಶ್ರೀ ಶಿವಾನಂದ ಶ್ರೀ ಶಂಕರನಾರಾಯಣ ಮುದ್ರಣಾಲಯಗಳ ಒಡೆಯರು ಸಹಕರಿಸಿ ಈ ಗ್ರಂಥದ ಮೂರು ಭಾಗಗಳನ್ನೂ ಸಕಾಲಕ್ಕೆ ಮುದ್ದಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರ ನೆರವನ್ನು ನಾನಿಲ್ಲಿ ನೆನೆಯದಿರಲಾರೆ.

ಶ್ರೀ ಶಿವಯೋಗಮಂದಿರದ ಸುವರ್ಣಮಹೋತ್ಸವದ ಸ್ಮಾರಕ-ಸಂಪುಟ ' ಬೆಳಗ ' ನ್ನು ಸಂಪಾದಿಸಿದ ಅನುಭವ ಈ ಕೃತಿಗೂ ಸಹಾಯಕವಾಯಿತು. 'ಶ್ರೀ ಪಂಚಾಕ್ಷರ ಪ್ರಕಾಶ'ದ ಮೂರು ಕಿರಣಗಳಲ್ಲಿಯ ಕಿರಣ ಒಂದರಲ್ಲಿ 'ಗುರು ವರ್ಯ ಪಂಚಾಕ್ಷರಾರ್ಯರ ಸಂಸ್ಮೃತಿ', ಎರಡರಲ್ಲಿ 'ಶಿಷ್ಯಪ್ರವರ ಪುಟ್ಟರಾಜರ ಪ್ರಶಸ್ತಿ', ಮೂರರಲ್ಲಿ ' ಶಿಷ್ಯ-ಪ್ರಶಿಷ್ಯ ಪರಿಚಯ ' ವಿಷಯಗಳನ್ನು ವಿಂಗಡಿಸಿ ಸಂಗ್ರಹಿಸಿರುವೆನು ಈ ಕಾರ್ಯದಲ್ಲಿ ಸಹಕರಿಸಿದ ಲೇಖಕರಿಗೆ ನಾನು ಚಿರಋಣಿ. ಉತ್ತರಾದಿ-ದಕ್ಷಿಣಾದಿ ಸಂಗೀತಗಳ ಬಗೆಗೆ ಉತ್ತಮ ಸಾಹಿತ್ಯವನ್ನು ಸಂಪಾದಿಸುವ ನನ್ನ ಬಯಕೆಯೊಂದು ಅರಕೆಯಾಗಿ ಉಳಿಯಿತು.

ನಾನು ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ಪಂ. ಪುಟ್ಟರಾಜರ ಶಿಷ್ಯರ ಸ್ನೇಹದ ಅತಿಥ್ಯದಲ್ಲಿ ಎರಡು ವಾರವಿದ್ದು ಈ ಅಳಿಲು ಸೇವೆಯನ್ನು ಮಾಡಿದ್ದೇನೆ. ನಾನಿಲ್ಲಿ ಸಂಗೀತ ಲೋಕದಲ್ಲಿಯೇ ವಾಸವಾದಂತಿತ್ತು. ತಂಬೂರಿ, ವಾಯಿಲಿನ್, ತಬಲಾ

ಗಳ ನಿನಾದ ಸಂಗೀತ ವಿದ್ಯಾರ್ಥಿಗಳ ಆಲಾಪ, ಶ್ರೀ ಪಂಚಾಕ್ಷರ ಗುರುವರ್ಯರ ಗದ್ದುಗೆಯ ಮುಂದೆ ಬ್ರಾಹ್ಮಿ ಮುಹೂರ್ತದಲ್ಲಿ ವಿದ್ಯಾರ್ಥಿಗಳು ಮಾಡುವ ಸಂಗೀತಮಯ ಪ್ರಾರ್ಥನೆ, ಕುರುಡ ಶಿಷ್ಯರು ಹಾಡುವ ಶ್ರೀ ಪಂಚಾಕ್ಷರೇಶ್ವರ ಲಾವಣಿ ಎಲ್ಲವೂ ನನಗೆ ಸಂಗೀತ ಕಲಾವಿಹಾರದಂತೆ ಮನೋಹಾರಿಯಾಗಿದ್ದವು. ಸಂಗೀತ ಶಿಕ್ಷಕ ಶ್ರೀ ಗುರುಸ್ವಾಮಿ ಕಲಕೇರಿ ಅವರ ಆತ್ಮೀಯ ಭಾವವನ್ನೂ ನಾನು ಮರೆಯಲಾರೆ.

ಈ ಗ್ರಂಥವನ್ನು ಸಂಪಾದಿಸಲು ಅನೇಕ ಬಗೆಯಾಗಿ ಸಹಾಯ ನೀಡಿದ ಪಂ. ಪುಟ್ಟರಾಜರನ್ನೂ ಆಶ್ರಮದ ಕಾರ್ಯಕರ್ತರನ್ನೂ ಪುನಃ ಸ್ಮರಿಸಿ ನೆನೆದು ವಿರಮಿಸುವೆ.

ಗೌ. ಮ. ಉಮಾಪತಿ ಶಾಸ್ತ್ರಿ

ಶ್ರೀಮದ್ಭೂಲಶಾಪುರಸ್ಥ ತ್ರಿಸಹಸ್ರ ಮಠಾಧ್ಯಕ್ಷ
ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ

# ಆಶೀರ್ವಚನ

ಶ್ರೀಮನ್ನಿರಂಜನ ಪುಣ್ಯಸ್ವರೂಪಿಗಳಾದ ಶ್ರೀ ಕುಮಾರ ಸ್ವಾಮಿಗಳವರು ಹಾನಗಲ್ಲ ಅವರ ದೃಷ್ಟಿಯಲ್ಲಿ ಗೋಚರರಾದ ಪ್ರತಿಯೊಬ್ಬರೂ ಒಂದಿಲ್ಲೊಂದು ಬಗೆಯಿಂದ ಉನ್ನತ ಮಟ್ಟವನ್ನೇರಿದ್ದಾರೆ. ನಮ್ಮ ಪಂಚಾಕ್ಷರ ಗವಾಯಿಗಳು ಶ್ರೀಗಳವರ ಪ್ರೀತಿಯ ಶಿಷ್ಯರಾಗಿದ್ದರು. ಅಂತೆಯೇ ಅವರು ಜನ್ಮಾಂಧರಾಗಿದ್ದರೂ ಶ್ರೀಗಳವರ ಕೃಪೆಯಿಂದ ಜ್ಞಾನನೇತ್ರ ಪಡೆದರು. 'ಜ್ಞಾನನೇತ್ರದ ಘನವನೇನೆಂಬೆನಹಹ' ಎಂದು ಆದ್ಯರು ಉದ್ಗರಿಸಿದ್ದಾರೆ. ಈ ಜ್ಞಾನನೇತ್ರದ ಘನತೆಯೇ ಇಂದು ಈ ಸಂಸ್ಥೆಯನ್ನು ಇಷ್ಟು ಮುಂದುವರಿಸಿದೆ; ಇಂದು ಈ ಸಂಗೀತ ಪಾಠಶಾಲೆಯ ಸುವರ್ಣಮಹೋತ್ಸವವೂ ಪುಟ್ಟರಾಜ ಕವಿಗಳ ೫೦ ನೆಯ ವರುಷದ ವರ್ಧಂತಿಯೂ ಕುಮಾರೇಶ್ವರ ನಾಟ್ಯ ಸಂಘದ ರಜತೋತ್ಸವವೂ ನೆರವೇರುವಂತೆ ಮಾಡಿದೆ. ಪುಟ್ಟರಾಜರು ಹೆಸರಿನಿಂದ ಪುಟ್ಟರಾಗಿದ್ದರೂ ಸಾಹಿತ್ಯ ಸಂಗೀತ ಕಲೆಗಳಿಂದ ಸಂಶೋಭಿತರಾಗಿದ್ದಾರೆ. ಅವರು ರಚಿಸಿದ ಕೃತಿಗಳೇ ಅವರ ಈ ಗಟ್ಟಿತನಕ್ಕೆ ನಿದರ್ಶನವಾಗಿವೆ. ಅವರ ನಾಟ್ಯ ಸಂಘವು ಗದುಗಿನಲ್ಲಿ ೩೦೫ ಪ್ರಯೋಗಗಳನ್ನು ಬಿಡದಲೆ ಮಾಡಿದ್ದು ಅವರ ಕಲಾಪ್ರದರ್ಶನದ ದ್ಯೋತಕವಾಗಿದೆ. ಈ ರೀತಿಯಾಗಿ ಈ ಸಂಗೀತಶಾಲಾ ಸಂಸ್ಥೆಯು ಅಭಿವೃದ್ಧಿಯನ್ನು ಹೊಂದಲಿ. ಪಂ. ಪುಟ್ಟರಾಜ ಕವಿಗಳು ಬಹುಕಾಲ ಬಾಳಿ ಬೆಳಗಲಿ. ಅವರ ಈ ನಾಟ್ಯಸಂಘವು ಜನತೆಗೆ ಹೆಚ್ಚಾಗಿ ಕಲಾಸೇವೆಯನ್ನು ಸಲ್ಲಿಸುವಂತಾಗಲಿ. ಈ ಎಲ್ಲ ವಿಚಾರವನ್ನೊಳಗೊಂಡು ಜನರ ಕಣ್ಮುಂದೆ ಬರಲಿರುವ ಈ 'ಪಂಚಾಕ್ಷರ ಪ್ರಕಾಶ'ವು ತನ್ನ ಪ್ರಕಾಶವನ್ನು ಎಲ್ಲೆಡೆಯಲ್ಲಿಯೂ ಬೆಳಗುವಂತಾಗಲಿ ಎಂದು ಆಶೀರ್ವದಿಸಲಾಗಿದೆ.

इत्याशिषः

# ಪರಿವಿಡಿ

## ಕಿರಣ ಒಂದು

### [ ಗುರುವರ್ಯ ಪಂಚಾಕ್ಷರಾರ್ಯ ಸಂಸ್ಮೃತಿ ]



## ಕಿರಣ ಎರಡು

### ( ಶಿಷ್ಯ ಪ್ರವರ ಶ್ರೀ ಪುಟ್ಟರಾಜರ ಪ್ರಶಸ್ತಿ )

## ಕಿರಣ ಮೂರು

## (ಶಿಷ್ಯ-ಪ್ರಶಿಷ್ಯ ಪರಿಚಯ)





# ಪರಿವಿಡಿ

## ಕಿರಣ ಒಂದು

### [ ಗುರುವರ್ಯ ಪಂಚಾಕ್ಷರಾರ್ಯ ಸಂಸ್ಮೃತಿ ]



## ಕಿರಣ ಎರಡು

### (ಶಿಷ್ಯ ಪ್ರವರ ಶ್ರೀ ಪುಟ್ಟರಾಜರ ಪ್ರಶಸ್ತಿ)

# ಕಿರಣ ಮೂರು

## ( ಶಿಷ್ಯ-ಪ್ರಶಿಷ್ಯ ಪರಿಚಯ )





೧



ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು
ಶ್ರೀ ಮದ್ವೀರಶೈವ ಶಿವಯೋಗ ಮಂದಿರ ಸಂಸ್ಥೆಗಳ ಸಂಸ್ಥಾಪಕರಾದ
ಲಿಂ. ಶ್ರೀ ನಿ. ಪ್ರ. ಕುಮಾರ ಮಹಾಸ್ವಾಮಿಗಳು, ಹಾನಗಲ್ಲ.



ಪರಮಪೂಜ್ಯ

ಲಿಂ. ಶ್ರೀ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳು, ಹುಕ್ಕೇರಿಮಠ, ಹಾವೇರಿ.



ಗಾನಯೋಗಿ ಲಿಂ. ಶ್ರೀ ಪಂಚಾಕ್ಷರ ಗವಾಯಿಗಳು



ಪರಮಪೂಜ್ಯ ಲಿಂ. ಪಂಚಾಕ್ಷರ ಗವಾಯಿಗಳವರ ಅಮೃತ ಶಿಲಾ ಮೂರ್ತಿ
( ಜಯಪುರದ ಶಿಲ್ಪಿಗಳಿಂದ ರೂಪಿತವಾದ ಈ ಮೂರ್ತಿಯನ್ನು
ಗದಗಿನಲ್ಲಿರುವ ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ಪ್ರತಿಷ್ಠಾಪಿಸಲಾಗಿದೆ. )

# ' ಉಭಯ ಗಾಯನವಿಶಾರದ '

# ಶ್ರೀ ಪಂಚಾಕ್ಷರ ಗವಾಯಿಗಳವರು

ಶ್ರೀ ಮ. ನಿ. ಪ್ರ. ಸದಾಶಿವ ಮಹಾಸ್ವಾಮಿಗಳು, ಹಾನಗಲ್ಲ

" ಕೊರಡು ಕೊನರುವದು ಬಲು ಬರಡು ಹಯನಾಗುವದು
ಕುರುಡಂಗೆ ಕಣ್ಣು ಬಹುದು ನಿನ್ನೊಲುಮೆಯಿಂ
ದರಿದೆನ್ಯೆ ಗುರುವೆ ಕೃಪೆಯಾಗು "

ಎಂಬ **ಮೈಲಾರ ಶ್ರೀ ಬಸವಲಿಂಗ** ಶರಣರ ಉಕ್ತಿಯಂತೆ ಸದ್ಗುರುವಿನ ಕೃಪೆಯಿಂದ ಜಗತ್ತಿನಲ್ಲಿ ಯಾವುದೂ ಅಸಾಧ್ಯವಿಲ್ಲ. ಕೊರಡು ಚಿಗುರುವದು, ಬರಡಾದ ಆಕಳು ಕರೆಯುವದು. ಕುರುಡನಿಗೆ ಕಣ್ಣು ದೊರೆಯುವದು, ಪಾಷಾಣವು ಪರುಷವಾಗುವಧು. ಅದರಂತೆ **ಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಗಳು** ಎಲ್ಲಿಯೋ ಹಳ್ಳಿಯಲ್ಲಿ ಹುಟ್ಟಿ ಅಂಧಕನಾಗಿ ಅಜ್ಞಾನದಲ್ಲಿ ಅಲೆದಾಡುತ್ತಿರುವ **ಗದಿಗೆಯ್ಯ**ನೆಂಬ ಕುರುಡ ಬಾಲಕನನ್ನು ತಂದು ಅವನಿಗೆ ಉತ್ತಮ ಸಂಗೀತ ಶಿಕ್ಷಣವನ್ನು ಕೊಡಿಸಲಾಗಿ ಮತ್ತು ಮಹಾಸ್ವಾಮಿಗಳವರ ದಿವ್ಯಾನುಭವದಿಂದ ಅವನ ಜ್ಞಾನನೇತ್ರವು ತೆರೆಯಿತು ಹಾಗೂ ಅವನು ಗಾನಯೋಗಿಯಾದನು. ಪೂಜ್ಯ ಮಹಾಸ್ವಾಮಿಗಳವರಲ್ಲಿ ಕೀಳಾದ ವಸ್ತುವನ್ನು ಉಚ್ಚಸ್ಥಿತಿಗೆ ತರುವ ಒಂದು ದಿವ್ಯವಾದ ಶಕ್ತಿಯಿತ್ತು. ಅಂತೆಯೇ ಮಹಾಸ್ವಾಮಿಗಳವರು ಹೀನಸ್ಥಿತಿಗೆ ಬಂದಿರುವ ವೀರಶೈವ ಸಮಾಜವನ್ನು ನೋಡಿ ಪತಿತವಾಗುತ್ತಿರುವ ಸಮಾಜವನ್ನು ಭಗವಾನ್ ಬಸವೇಶ್ವರನಂತೆ ಉದ್ಧರಿಸಿದರು. ಅವರು ಪ್ರಯತ್ನಮಾಡದಿದ್ದರೆ ವೀರಶೈವ ಸಮಾಜ ಸ್ಥಿತಿಯು ಅಧೋಗತಿಗೆ ಹೋಗುತ್ತಿತ್ತು. ವೀರಶೈವ ಸಮಾಜವು ತಿಳಿಗಣ್ಣಿನಿಂದ ವಿಚಾರಿಸಬೇಕು. ಮಹಾಸ್ವಾಮಿಗಳವರಲ್ಲಿ ಎಂಥ ವ್ಯಕ್ತಿಯೇ ಹೋಗಲಿ ಅವನಲ್ಲಿ ಯಾವ ಶಕ್ತಿಯಿದೆ ಎಂದು ಅಂತರ್ಮುಖದಿಂದ ತಿಳಿದು ಅಂಥ ಶಿಕ್ಷಣವನ್ನು ಕೊಟ್ಟು ಸಮಾಜದ ಒಂದು ಒಳ್ಳೆಯ ವ್ಯಕ್ತಿಯನ್ನು ಮಾಡತಕ್ಕ ವಿಚಕ್ಷಣ ಶಕ್ತಿಯಿತ್ತು. ಹಾಗೆ ಗದಿಗಯ್ಯ ಗವಾಯಿಯನ್ನು ತಮ್ಮ ದಿವ್ಯನೇತ್ರದಿಂದ ಈಕ್ಷಿಸಿ ಆ ಹುಡುಗನಲ್ಲಿ ಅಗಾಧವಾದ ಒಂದು ಶಕ್ತಿ ಹುದುಗಿಕೊಂಡಿದೆ ಎಂದರಿತು ಅವನು ನಿಜವಾಗಿ ಗಾನಯೋಗಿಯಾಗುವನೆಂದು ಭಾವಿಸಿ, ಅವನನ್ನು ಸಂಗೀತ ಶಿಕ್ಷಣಕ್ಕಾಗಿ ಮೈಸೂರಿಗೆ ಕಳಿಸಿ, ಅಲ್ಲಿ ದಕ್ಷಿಣಾದಿ ಗಾನವಿದ್ಯೆಯನ್ನು ಕಲಿಸಿದರು. ನಂತರ ಅವರು **ನೀಲಕಂಠ**

**ಗವಾಯಿಗಳಲ್ಲಿ** ಹಿಂದುಸ್ತಾನಿ ಗಾನವಿದ್ಯೆಯನ್ನು ಕಲಿತು "**ಉಭಯಗಾನ ವಿಶಾರದ**" ಪಂಚಾಕ್ಷರಿ ಗವಾಯಿಗಳೆಂದು ಹೆಸರುವಾಸಿಗಳಾದರು. ಗವಾಯಿಗಳು ದಕ್ಷಿಣಾದಿ ಹಿಂದುಸ್ತಾನಿ ಎರಡೂ ಗಾನವಿದ್ಯೆಗಳಲ್ಲಿ ಅತ್ಯಂತ ಪಳಗಿದವರಾಗಿದ್ದರು. ಎರಡೂ ವಿದ್ಯೆಗಳೂ ಒಂದು ವ್ಯಕ್ತಿಯಲ್ಲಿ ಬರುವದು ಅಪರೂಪ. ಅವರಲ್ಲಿ ಇದು ದೇವರ ದೇಣಿಗೆಯಾಗಿತ್ತೆಂದು ಹೇಳಬಹುದು. ಹೀಗೆ ಅವರು ಸಂಗೀತ ಶಿಕ್ಷಣದಲ್ಲಿ ಅತ್ಯಂತ ಪ್ರವೀಣತೆಯನ್ನು ಪಡೆದರು; ಉಭಯಗಾನ ವಿಶಾರದ ಪಂಚಾಕ್ಷರ ಗವಾಯಿಗಳಾದರು.

ಪಂಚಾಕ್ಷರಿ ಗವಾಯಿಗಳು ಸಂಗೀತ ಸಾಮ್ರಾಜ್ಯ ಸೌಧದ ಅಂತಸ್ತನ್ನು ಹತ್ತಲು ಪ್ರಾರಂಭಿಸಿದರು. ಅವರ ಕಂಠವು ವಿದ್ಯೆಗೆ ತಕ್ಕಂತೆ ಕೋಗಿಲೆಯಂತೆ ಒಳ್ಳೆ ಮಧುರವಾಗಿತ್ತು. ಹಾಗೂ ಅವರಿಗೆ ತಬಲಾವಾದನದಲ್ಲಿ ಮಹತ್ತರವಾದ ಕಲೆ ಕರಗತವಾಗಿದ್ದಿತು. ಅವರಿಂದ ಅನೇಕ ಸಂಘಸಂಸ್ಥೆಯವರು ಗವಾಯಿಗಳನ್ನು ಆಹ್ವಾನಿಸಿ ಅವರ ಗಾನಕಲೆಯ ಮಾಧುರ್ಯದ ಪ್ರತಿಭೆಯನ್ನು ಕಂಡು ಕೇಳಿ ಅತ್ಯಂತ ಮೆಚ್ಚುಗೆಯನ್ನು ವ್ಯಕ್ತಮಾಡುತ್ತಿದ್ದರು. ಅಲ್ಲದೆ ಅನೇಕ ಪದವಿಗಳನ್ನು ಕೊಟ್ಟು ವಿದ್ವಾಂಸರು, ಕಲಾಪ್ರೇಮಿಗಳು ಸತ್ಕರಿಸುತ್ತಿದ್ದರು. ಹುಬ್ಬಳ್ಳಿಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಂಗವಾದ ಸಂಗೀತ ಪರಿಷತ್ತಿಗೆ ಅವರು ಅಧ್ಯಕ್ಷ ಸ್ಥಾನವನ್ನು ವಹಿಸಿದ್ದರು. ಕರ್ನಾಟಕದಲ್ಲಿ ಸಂಗೀತ ಕಲೆಯು ಅವನತಿಯನ್ನು ಹೊಂದಿದಾಗ ಅದನ್ನು ಪ್ರಚಾರಮಾಡಿ ಅದಕ್ಕೊಂದು ಹೊಸ ಬೆಳಕನ್ನು ತಂದುಕೊಟ್ಟ ಕೀರ್ತಿಯು ಪಂಚಾಕ್ಷರ ಗವಾಯಿಗಳಿಗೆ ಸಲ್ಲುವದೆಂದು ನಿಸ್ಸಂದೇಹವಾಗಿ ಹೇಳಬಹುದು. ಅದು ಪೂಜ್ಯ ಮಹಾಸ್ವಾಮಿಗಳವರ ಅನುಗ್ರಹವು. ಪಂಚಾಕ್ಷರ ಗವಾಯಿಗಳು ಗಾಯನ ವಿದ್ಯೆಯಲ್ಲಿ ಪ್ರವೀಣತೆಯನ್ನು ಪಡೆಯುವದಲ್ಲದೆ ಸಮಾಜದ ಸೇವೆಗಾಗಿ ಕೀರ್ತನ ಕಲೆಯನ್ನು ಕಲಿತು ನಾಡಿನಲ್ಲಿ ಅದರ ಪ್ರಚಾರಮಾಡಿದರು. ಅವರು ಉದರಂಭರಣಕ್ಕಾಗಿ ವಿದ್ಯಾರ್ಜನೆ ಮಾಡದೆ ಸಂಗೀತ ಪ್ರಚಾರಕ್ಕಾಗಿ ಮಹಾಸ್ವಾಮಿಗಳ ಅಪ್ಪಣೆಯಂತೆ ಸಂಗೀತ ಶಾಲೆಯನ್ನು ಸ್ಥಾಪಿಸಿದರು. ಆದರಿಂದ ಅನೇಕ ವಿದ್ಯಾರ್ಥಿಗಳಿಗೆ ಸಂಗೀತ ಶಿಕ್ಷಣವನ್ನು ಕೊಟ್ಟರು. ಅದರಲ್ಲಿ ಕುರುಡು ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡಿ ಅವರ ಜನ್ಮವನ್ನು ಸಾರ್ಥಕ ಮಾಡಿದರು. ಅವರ ಸಂಸ್ಥೆಯಲ್ಲಿ ಕೀರ್ತನಕಾರರು, ಗವಾಯಿಗಳು, ಹಾರ್ಮೋನಿಯಂ ಬಾರಿಸುವವರು, ತಬಲಾವಾದಕರು, ವೀಣಾ ನುಡಿಸುವವರೂ ಹೀಗೆ ಸುಮಾರು ೩೦೦ ಜನ ವಿದ್ಯಾರ್ಥಿಗಳು ಶಿಕ್ಷಣ ಪಡೆದು ತಯಾರಾಗಿ ಹೋಗಿರುವರು.

ಪಂಚಾಕ್ಷರ ಗವಾಯಿಗಳು ವಿಶಾಲ ಭಾವನೆಯುಳ್ಳವರಾಗಿದ್ದರು. ಅಂತೆಯೇ ಜಾತಿಭೇದವಿಲ್ಲದೆ ಯಾವತ್ತೂ ಮಾನವರೂ ಬಂಧುಗಳೆಂದು ತಿಳಿದು ಅವರಿಗೆ ಗಾನವಿದ್ಯಾದಾನ ಮಾಡಿದರು. 'ಬ್ರಾಹ್ಮಣ ಮೊದಲು ಮಾಡಿ ಯಾವತ್ತೂ ಜಾತಿಯ ವಿದ್ಯಾರ್ಥಿಗಳು ಅವರ ಸಂಸ್ಥೆಯಲ್ಲಿ ಕಲಿತುಹೋಗಿದ್ದು ಪ್ರಸಿದ್ಧವಿದೆ. ಅವರು ಉತ್ತಮ ತರಗತಿಯ ನಾಟಕ ಕಲೆಯನ್ನು ಅಭಿನಯ ಕಲೆಗಾರರಿಗೆ ಕಲಿಸಿ ಅದರಿಂದ ಸಮಾಜದಲ್ಲಿ ನೈತಿಕ ವೃತ್ತಿಯನ್ನು ಬೆಳಸಬೇಕೆಂಬ ಧ್ಯೇಯದಿಂದ ನಾಟಕ ಸಂಸ್ಥೆಯನ್ನು ಪ್ರಾರಂಭಿಸಿದರು. ಅವರ ಯೋಗ್ಯ ಶಿಷ್ಯರಾದ ಪುಟ್ಟರಾಜ ಗವಾಯಿಗಳು ಆ ನಾಟಕ ಸಂಸ್ಥೆಯ ಅಂತಸ್ತನ್ನು ಬೆಳಸಿಕೊಂಡು ಬಂದಿರುವರು. ಪೂಜ್ಯ ಹಾನಗಲ್ಲ ಮಹಾಸ್ವಾಮಿಗಳವರ ಕೃಪೆಗೆ ಪಾತ್ರರಾಗಿ ಯೋಗ್ಯಶಿಷ್ಯರೆ-ನಿಸಿಕೊಂಡು ಅನೇಕ ಸಮಾಜ ಕಾರ್ಯಗಳನ್ನು ಜರುಗಿಸಿ, ತಮ್ಮ ಆತ್ಮೋ-ದ್ಧಾರಮಾಡಿಕೊಂಡು ತಮ್ಮ ಅನುರೂಪ ಶಿಷ್ಯರಾದ ಪುಟ್ಟಯ್ಯಗವಾಯಿಗಳಲ್ಲಿ ತಮ್ಮ ಅಂತಃಶಕ್ತಿಯನ್ನು ಇಟ್ಟು ಬಯಲಾದರು. ಅವರು ಅಂತ್ಯಕಾಲದಲ್ಲಿ ಕೇವಲ ಲಿಂಗಪೂಜೆಯಲ್ಲಿ ಆಸಕ್ತರಾಗಿದ್ದರು. ಬಾಹ್ಯದ ಸ್ಮೃತಿ ತಪ್ಪಿದರೂ ಅಂತರದಲ್ಲಿ ಲಿಂಗಪೂಜೆಯ ಕಾರ್ಯ ನಡೆದಿತ್ತೆಂದು ಕೇಳಿದ್ದೇನೆ. ಅಂದಮೇಲೆ ಅವರು ನಿಜ-ವಾಗಿಯೂ ಪ್ರಪಂಚದಿಂದ ಮುಕ್ತರಾಗಿ ಶಿವನಲ್ಲಿ ಬೆರೆದಿರುವರೆಂದು ಹೇಳಬಹುದು. ಅವರ ನಂತರ ಅವರ ಸಚ್ಛಿಷ್ಯರಾದ ಪುಟ್ಟರಾಜ ಗವಾಯಿಗಳು ಗುರುಗಳು ಹಾಕಿದ ಸಂಗೀತ ವೃಕ್ಷವನ್ನು ಬೆಳೆಸಿ ಪೋಷಿಸಿ ಫಲವನ್ನು ಕೊಡುವಂತೆ ಮಾಡಿದ್ದಾರೆ. ಆ ಫಲದ ಗಾನ ರಸವನ್ನು ಈಗ ಕನ್ನಡಿಗರು ಸವಿಯುತ್ತಲಿದ್ದಾರೆಂದು ತಿಳಿಸಲು ಸಂತೋಷವಾಗುತ್ತದೆ. ಪುಟ್ಟರಾಜ ಗವಾಯುಗಳ ಬುದ್ಧಿಯು ಬಹಳ ವಿಚಕ್ಷಣವಾಗಿದೆ. ಅವರು ತ್ರಿಭಾಷಾ ಪಂಡಿತರಾಗಿದ್ದಾರೆ. ಕನ್ನಡ, ಸಂಸ್ಕೃತ, ಹಿಂದಿ ಈ ಮೂರು ಭಾಷೆಗಳಲ್ಲಿ ಕಾವ್ಯಗಳನ್ನು ರಚಿಸಿ ಹೆಸರು ಗಳಿಸಿದ್ದಾರೆ. ಗುರುಗಳ ಹೆಸರನ್ನೂ ಪ್ರಸಿದ್ಧಮಾಡಿದ್ದಾರೆ. ಪುಟ್ಟರಾಜ ಗವಾಯಿಗಳಾದರೂ ಗುರುಗಳಂತೆ ಪೂಜ್ಯ ಕುಮಾರ ಯೋಗಿಗಳವರ ಶಿಷ್ಯರಾಗಿ ಆಚಾರನಿಷ್ಠರಾಗಿ ಸಮಾಜ ಸೇವೆಯನ್ನು ಮಾಡುತ್ತಲಿ-ದ್ದಾರೆ. ಇದೊಂದು ಶಿವಯೋಗಮಂದಿರಕ್ಕೆ ಭೂಷಣಪ್ರಾಯವಾಗಿದೆ ಎಂದು ಹೇಳಲು ಸಂತೋಷವಾಗುವುದು.

ಶ್ರೀ ಪಂಚಾಕ್ಷರ ಗವಾಯಿಗಳು ಶ್ರೀ ಕುಮಾರೇಶ್ವರ ಸಂಗೀತ ಸಂಸ್ಥೆಯನ್ನು ಸ್ಥಾಪಿಸಿ ಇಂದಿಗೆ ೫೦ ವರ್ಷಗಳು ಗತಿಸಿದವು. ಅಂದಮೇಲೆ ಈ ಸಂಸ್ಥೆಯ ಸುವರ್ಣ ಮಹೋತ್ಸವವನ್ನು ಮಾಡಬೇಕೆಂಬ ಹೆಬ್ಬಯಕೆಯು ಈ ಸ್ಮಾರಕ ಗ್ರಂಥರೂಪದಲ್ಲಿಯೂ ಚಿರವಾಗಿ ಉಳಿದು ಅದು ಅವರ ಶಿಷ್ಯಕೋಟಿಗೆ ಕೈದೀವಿಗೆಯಾಗಿ ಬೆಳಗಲೆಂದು ಹಾರೈಸುವೆವು

# ಇರುಳಿನ ಇಮ್ಮು

**ಸೂರ್ಯ ಸಿಂಹಾಸನಾಧೀಶ್ವರ ಶ್ರೀ. ಜ. ಚ. ನಿ.**

ಇರುಳು ಹಗಲು ಕಾಲಪ್ರವಾಹದ ಎರಡು ತೆರೆಗಳು. ಆಯುಃಪ್ರಮಾಣಮಾನಗಳು. ಚಲಾಚಲ ಅಥವಾ ಚರಾಚರ ಕ್ರಿಯಾಶಕ್ತಿಪ್ರದಗಳು; ವಿಶ್ರಾಂತಿ ವ್ಯವಹಾರ ಕಾರಣಗಳು. ಜಗಕ್ಕೆ ಇವೆರಡು ಅನಿವಾರ್ಯಗಳು; ಆವಶ್ಯಕಗಳು. ಹೀಗಿದ್ದರೂ ಉಪನಿಷತ್ಕಾರರು "ತಮಸೋ ಮಾ ಜ್ಯೋತಿರ್ಗಮಯ" ಕತ್ತಲೆಯಿಂದ ಬೆಳಕಿಗೆ ಎನ್ನನು ಬರಿಸು ಎಂದು ಬೇಡಿದಾರೆ. ಈ ಬೇಡಿಕೆಗೆ ಬಾಹ್ಯಾರ್ಥ ಗೌಣ; ಅಂತರಾರ್ಥ ಮುಖ್ಯ. ಬಾಹ್ಯಾರ್ಥವನ್ನು ಮಾಡುವವಾದದಲ್ಲಿಯೂ ಇರುಳನ್ನು ತೀರ ಅಲ್ಲಗಳೆಯುವಂತಿಲ್ಲ; ಅಲ್ಲಗಳೆದಿಲ್ಲ. ಈ ಮಾತು ಹಾಗಿರಲಿ. ಅಜ್ಞಾನ ರಾತ್ರಿಯಿಂದ ಜ್ಞಾನಪ್ರಭೆಗೆ ಬರಿಸೆಂಬುದೇ ಅದರ ಅಂತರಾರ್ಥ. ಈ ದೃಷ್ಟಿಯಲ್ಲಿ ಇದು ದಿವ್ಯವಾಣಿ. ಇಲ್ಲಿ ಅಜ್ಞಾನವೆಂದರೆ ಅವಿದ್ಯೆ. ಅವಿದ್ಯಾತಮವು ಅಪಾಯಕಾರಿ; ಅನರ್ಥಕಾರಿ. ಅವಿದ್ಯೆಯನ್ನು ದಾಟಿ ವಿದ್ಯಾಜ್ಯೋತಿಯ ಪಡೆವುದೇ ಪ್ರಗತಿಸಾಧನ; ಸುಗತಿ ಕಾರಣ. ಇರುಳಿನ ಮಾತು ಹೀಗಿಲ್ಲ. ಇದರ ಇಂಗಿತವೆ ಬೇರೆಯಿದೆ. ಇರುಳಿನಲ್ಲಿ ಇಮ್ಮಿದೆ. ಇರುಳನ್ನು ಬೇಡವೆನ್ನುವಂತಿಲ್ಲ. ಹಸಿವಿನಷ್ಟೇ ಇರುಳು ಅವಶ್ಯ.

ಇರುಳು ಹಗಲಾಗಿ ಹಗಲು ಇರುಳಾಗಿ ಇರುವವರೂ ಇದ್ದಾರೆ. ಅವರ ದೃಷ್ಟಿಯಲ್ಲಿ

" ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ || "

ಎಂದಿದೆ ಗೀತೆ. ಎನಿತು ಇನಿವಾತು; ಇದರಲ್ಲಿರುವ ಇಮ್ಮೆನಿತು ? ಸಂಯಮಿಯ ಆ ಇರುಳಿನಲ್ಲಿ ಅದೆಂತಹ ಜ್ಯೋತಿಯಿದೆ ! ಅದೆನಿತು ಜಾಗ್ರತತೆಯಿದೆ! ಆತನಿಗೆ ದಿಟವಾಗಿ ಈ ಇರುಳು ಇರುಳಲ್ಲ; ಇಂಗೋಲು. ಎಚ್ಚರಿಕೆಯಿಂದಿರಲು ಹಗಲಿಗಿಂತ ಇರುಳು ಇಮ್ಮಿಗಿಲು. ಜಾಗರತೆಯ ಜೇಂಗೊಡ. ಇರುಳಿನ ಹಿರಿಮೆಗೆ ಇದಕ್ಕಿಂತ ಮಿಗಿಲು ಮಾತಿಲ್ಲ.

ಬಾಳಿಗೆ ಹಗಲಿರುಳುಗಳೆರಡೂ ಬೇಕು. ಎರಡರಿಂದಲೂ ಸಕಲಜೀವಿಗಳ ಜೀವನವು ರೂಪುಗೊಳ್ಳುತ್ತದೆ; ಮಾನವ ಜೀವನ ಮುಂದುವರಿಯುತ್ತದೆ. ಇವೆರಡೂ

ಪರಶಿವನು ಪ್ರಪಂಚಕ್ಕಿತ್ತ ಪರಮಪ್ರಸಾದ. ಈ ದೃಷ್ಟಿಯಿಂದ ದಿಟ್ಟಿಸಿದಾಗ ಇವೆರಡರಲ್ಲಿ ಯಾವುದು ಹೆಚ್ಚು, ಯಾವುದು ಕಮ್ಮಿ; ಯಾವುದು ಮೆಚ್ಚು, ಯಾವುದು ಮೆಚ್ಚಲ್ಲ-ಎಂಬುದನ್ನು ಬಿಚ್ಚಿ ಹೇಳಲು ಬಾರದಂತಿದೆಯಲ್ಲವೆ? ಮತ್ತೊಂದು ಮುಖದಲ್ಲಿ ನೋಡಿದರೆ ಇರುಳಿನ ಇಮ್ಮು ಮನದಟ್ಟಾಗುವಂತಿದೆ.

ಹಗಲು ಪ್ರವೃತ್ತಿಮುಖ. ಇರುಳು ನಿವೃತ್ತಿಮುಖ; ನಿಷ್ಪತ್ತಿ ಸುಖ. ಲೋಕದ ಚೇಷ್ಟೆಗೆ ಮೀಸಲು ಹಗಲು. ಲೋಕದ ವಿಶ್ರಾಂತಿಗೆ ಮೀಸಲು ಇರುಳು. ಮಾನವನ ದುಡಿಮೆಯ ದಂದುಗವನ್ನು, ಕಾಹಿಲೆಯ ಕಷ್ಟವನ್ನು, ಚಿಂತೆ-ಕೊರತೆಗಳನ್ನು ಅಡಗಿಸಬಲ್ಲುದು ಅಂಧಕಾರದೊಳಗಿನ ನಿದ್ದೆ. ದೃಶ್ಯ ಜಗತ್ತಿನ ವಿಕಾರ-ವಿಚಾರ-ಆಕರ್ಷಣಾದಿಗಳನ್ನು ಅಣಗಿಸಬಲ್ಲುದು ಅಂಧಕಾರ. ನಿಶೆಯ ನಿಧಿಧ್ಯಾಸದಲ್ಲಿ ಜಗದ ಜಂಜಡ ಹರಿದು ಬಹಿರಂಗ ದೃಷ್ಟಿಯ ಚಪಲತೆ ಉಡುಗಿ ಅಂತರಂಗ ಜಾಗ್ರತವಾಗುತ್ತದೆ. ಆ ಅಂತರಂಗ ಜಾಗ್ರತೆಯ ಬಯಸುವವರಿಗೆ ಬಹಿರಂಗದ ಬೆಳಕಿನ ಅಗತ್ಯ ಅಷ್ಟೇನು ಇರುವುದಿಲ್ಲ. ಇವನು ಈ ಬೆಳಕಿನಿಂದ ಇರುಳಿಗೆ ಹೋಗಲು ಬಯಸುತ್ತಾನೆ. ಈ ಸಂಯಮಿಗೆ ಗೀತೆಯು ಹೇಳಿದಂತೆ ಹಗಲು ಇರುಳಾಗಿರುತ್ತದೆ. ಇರುಳು ಹಗಲಾಗಿರುತ್ತದೆ. ಹಗಲಿನ ಹಗರಣ ಕಳೆಯಬೇಕಾದರೆ ಹೀಗಾಗದೆ ವಿಧಿಯಿಲ್ಲ. ಇರುಳಿನಲ್ಲಿ ಆಲಿ ನಿಲ್ಲಿಸುವದು ಸುಲಭ, ಆಲಿ (ಕಣ್ಣು) ನಿಂತರೆ ಗಾಳಿ ನಿಲ್ಲುವುದು. ಗಾಳಿ (ಪ್ರಾಣದ ಹರಿದಾಟ) ನಿಂತರೆ ಮನ ತಾನೇ ತಾನಾಗುವುದು. ಮನ ನಿಲ್ಲುವುದೆ ಮುಕ್ತಿಗೆ ಮೂಲ. ಏಕಾಗ್ರಚಿತ್ತದಿಂದಿರುವುದೇ ಉದ್ವೇಗ ನಿರ್ಮೂ-ಲನ ನಿಧಾನ. ಇದಕೆಲ್ಲ ಇರುಳು ಸಹಕಾರಿ ಕಾರಣ. ಮತ್ತು ಇರುಳಿಗೆ ಕಣ್ಣಿದ್ದವರು-ಕಣ್ಣಿಲ್ಲದವರೆಂಬ ಬಿರುಕಿಲ್ಲ. ಇಬ್ಬರನ್ನೂ ಒಂದಾಗಿ ಕಾಣುತ್ತದೆ. ಇರುಳಿಗೆ ಬೇಕಾದ ತಿಳಿಗಣ್ಣು ಇಬ್ಬರಿಗೂ (ಕುರುಡರಿಗೂ, ಕಣ್ಣಿದ್ದವರಿಗೂ) ಇರುತ್ತದೆ. ಹಗಲಿನಂತೆ ಇರುಳು ಹೊರಗಣ್ಣಿನವರಿಗೆ ಮಾತ್ರ ಹೆಚ್ಚುಗಾರಿಕೆಯನ್ನಿತ್ತಿಲ್ಲ.

ನೇತ್ರೇಂದ್ರಿಯ ನಿಲ್ಲಿಸಲು ನಿಶೆಗಿಂತ ಬೇರೆ ಸುಲಭ ಸಾಧನವಿಲ್ಲ. ನೇತ್ರ ಸಂಯಮದಿಂದ ನಿಲ್ಲದೆ ಹರಿದಾಡುವ ಮನ ಸಂಯಮವಾಗುತ್ತದೆ. ಮನಸ್ಸಂಯಮ-ದಿಂದ ಮನಸ್ತಾಪಗಳು ತೊಲಗುತ್ತವೆ. ಮಾನಸಿಕ ಪಾಪಗಳು ಪರಿಹಾರವಾಗುತ್ತವೆ. ಮನಶ್ಶಾಂತಿ ಸಂಭವಿಸುತ್ತದೆ. ಮನಃಪೂರ್ವಕವಾಗಿ ಮಂಗಳ ಕಾರ್ಯಗಳಲ್ಲಿ ಮಂಗಳಾಲೋಚನೆಗಳಲ್ಲಿ ಪ್ರವೇಶವುಂಟಾಗಿ ಮಹಾಜೀವನಕ್ಕೆ ಮುಂದಾರಿಯುಂಟಾ-ಗುತ್ತದೆ. ಇದಕ್ಕೆಲ್ಲ ನೆರೆ ನೆರವನೀಯುತ್ತದೆ ಇರುಳು.

ಕತ್ತಲೆ ಜಗತ್ತಿಗೆ ಜಗದೀಶನು ಅನುಗ್ರಹಿಸಿದ ಘನಕೃಪೆ. ಹಗಲಿನಲ್ಲಿ ಹಲವಾರು ಚಿಂತೆಗಳಿಂದ ಬೆಂದು ಬೆಂಡಾದ ಜೀವನು ಕತ್ತಲಲ್ಲಿ ಕಣ್ಮುಚ್ಚಿ ನಿಶ್ಚಿಂತನಾಗುತ್ತಾನೆ. ನಿತಾಂತ ಶಾಂತಿಸುಖದೊಳಿರುತ್ತಾನೆ. ಹಗಲಿನ ಪರಿಶ್ರಮವನ್ನು ಪರಿಹರಿಸಿ ವಿಶ್ರಾಂತಿಯನ್ನು ಸವಿಯುತ್ತಾನೆ.

ಅರಿವು ಅದೆಷ್ಟು ಅವಶ್ಯಕವೋ ಮರೆವು ಅಷ್ಟೇ ಆವಶ್ಯಕ. ಬೇಡಾದ ಬೀಳಾದ ವಿಷಯಗಳ-ವಿಚಾರಗಳ ಮರೆವು ಮನುಷ್ಯನಿಗೆ ಮೇಲು. ಅದರಿಂದ ಮನದ ಹೊರೆ ಇಳಿಯುತ್ತದೆ; ಹಗರಣ ತಗ್ಗುತ್ತದೆ. ನೋವಿಗೆ ಯೋಚನೆಗೆ ಕಾರಣವಾದ ವಿಷಯದ ಅರಿವಿಗಿಂತ ಮರವೆ ಅದೆಷ್ಟೋ ಉಪಕಾರಕ. ಸ್ಮರಣಕೋಶದಲ್ಲಿ ಸಿಕ್ಕಿದ್ದನ್ನೆಲ್ಲ ತುಂಬಿದರೆ ಉಪಯೋಗವಿಲ್ಲ. ನೋವಿನ ಸಂಗತಿಯನ್ನು ನಿಷ್ಪ್ರಯೋಜನ ಸಂಗತಿಯನ್ನು ನೆನಸಿಕೊಂಡರೆ ಆಗುವುದೇನು ? ಅದನ್ನು ಮರೆಯುವುದೇ ಲೇಸು. ಅಂತೆಯೇ ಇರುಳು. ಇರುಳಿಲ್ಲದಿದ್ದರೆ ಮಾನವನಿಗೆ ನೆಮ್ಮದಿಯೊದಗುತ್ತಿದ್ದಿಲ್ಲ; ದೀರ್ಘಾಯು ಉಂಟಾಗುತ್ತಿರಲಿಲ್ಲ. ಹಗಲು ಆಯುಷ್ಯ ಕ್ಷೀಣಿಸಿದಷ್ಟು ಇರುಳು ಕ್ಷೀಣಿಸುವುದಿಲ್ಲ.

ಅರೆ ಮರುಳಾಗಿರುವದಕ್ಕಿಂತ ನೆರೆಮರುಳಾಗಿರುವುದು ಮೇಲು. ಅಂದರೆ ಅಲ್ಪ ಜ್ಞಾನಕ್ಕಿಂತ ಅಜ್ಞಾನವೇ ಲೇಸೆಂಬ ಅಭಿಪ್ರಾಯ. ಅಜ್ಞಾನವನ್ನು ಅಂಧಕಾರಕ್ಕೆ ಹೋಲಿಸುತ್ತಾರೆ. ಅದು ಕೀಳಲ್ಲ. ಅದೊಂದು ಬಗೆಯಲ್ಲಿ ಲೇಸು. ಈ ಉಪಮೆಯಲ್ಲಿ ಔಚಿತ್ಯವಿದೆ; ಅರ್ಥವಿದೆ. ಅಜ್ಞಾನಿಯನ್ನು ಆರಾಧಿಸಬಹುದು; ಬೋಧಿಸಿ ಒಪ್ಪಿಸಬಹುದು. ಅಲ್ಪಜ್ಞಾನಿಯನ್ನು ಆರಾಧಿಸಲಾಸಲ್ಲ; ಒಪ್ಪಿಸಲಾಸಲ್ಲ. ಅತ್ತ ಅಜ್ಞಾನಿಯೂ ಸ್ತಿಮಿತನಾಗಿರಬಲ್ಲ; ಇತ್ತ ಅಖಂಡಜ್ಞಾನಿಯೂ ಸ್ತಿಮಿತನಾಗಿರಬಲ್ಲ. ಅಲ್ಪಜ್ಞಾನಿ ಅದೆಂದಿಗೂ ಸ್ತಿಮಿತನಾಗಲಾರ.

" ಅಲ್ಪತೋಯಶ್ಚಲತ್ಕುಂಭೋ ಅಲ್ಪದುಗ್ಧಾಶ್ಚ ಧೇನವಃ । ಅಲ್ಪವಿದ್ಯಾ ಮಹಾಗರ್ವೀ.... " ಎಂಬ ಮಾತನ್ನು ಮೆಲುಕು ಹಾಕಬೇಕು. ಅಲ್ಪದರ ಅವಾಂತರ ಅದೆಷ್ಟು ಎಂಬುದನ್ನು ಎಣಿಕೆ ಹಾಕಬೇಕು. ಬರಿದಾದ ಬಿಂದಿಗೆ ಹುಯ್ದಾಡದು; ಹುಯಿಲಿಡಿಸದು. ತುಂಬಿದ ಕೊಡ ತುಳುಕದು. ಅದೇ ಅರೆಗೊಡವಿದ್ದರೆ ಅದರ ಅವಾಂತರ ಹೇಳತೀರದು. ಅಲ್ಪವಿದ್ಯಾವಂತನೂ ಅಷ್ಟೇ! ಪೂರ್ಣ ಪ್ರಕಾಶವಿದ್ದರೂ ಪರವಾ ಇಲ್ಲ. ಪೂರ್ಣ ಅಂಧಕಾರವಿದ್ದರೂ ಪರವಾ ಇಲ್ಲ. ಅರ್ಧಂಬರ್ಧ ಬೆಳಕು ಇರುಳುಗಳಿದ್ದಾಗ ಪಡುವ ಪಾಟು-ಅನುಭವಿಸುವ ಅವಸ್ಥೆ ಅದಾರಿಗೆ ಅರಿಕೆಯಿಲ್ಲ ?

ಅಂತೆಯೇ ಅಜ್ಞಾನವಿದ್ದರೆ ಅಡ್ಡಿಯಿಲ್ಲ; ಅಪೂರ್ಣ ಜ್ಞಾನವಿದ್ದರೆ ಕರಕಷ್ಟ! ಭ್ರಮೆಯಿಲ್ಲದ ಅಜ್ಞಾನಕ್ಕಿಂತ ಭ್ರಮೆಯುಳ್ಳ ಜ್ಞಾನ ಹೆಚ್ಚು ಕೇಡಿನದು. ಹೆಮ್ಮೆಯಿಲ್ಲದ ಅಜ್ಞಾನಿಗಿಂತ ಹೆಮ್ಮೆ ಹಮ್ಮುಗಳುಳ್ಳ ಜ್ಞಾನಿ ಹೆಚ್ಚು ಕೇಡಿಗ.

ಇರುಳಿನ ಇಮ್ಮು ಹಗಲಿಗೆ ಬಾರದು. ಇರುಳಿಗೆ ಇನ್ನೂ ಒಂದು ಶಕ್ತಿ ಇಮ್ಮಿಗಿಲಾಗಿದೆ. ಅದು ಧ್ವನಿವಾಹಕ ಶಕ್ತಿ. ಹಗಲು ಜಗತ್ತಿನ ಜನದ ಗಲಭೆಯ-ಲ್ಲಿರುವವನಿಗೆ ಯಾವುದೂ ಸ್ಪಷ್ಟವಾಗಿ ಕೇಳಿಸದು. ಅದೇ ಧ್ವನಿ ರಾತ್ರಿಸಮಯದಲ್ಲಿ ಸ್ಪಷ್ಟವಾಗಿ ಕೇಳಿಸುತ್ತದೆ. ಅಲ್ಲದೆ ನಿಶ್ಶಬ್ದ ವಾತಾವರಣದಲ್ಲಿಯೂ ಸಹ ಹಗಲು ಕೇಳದ ದೂರದ ಧ್ವನಿ ಇರುಳು ಕೇಳಿಸುತ್ತದೆ. ಇರುಳಿನಲ್ಲಿ ದೂರಧ್ವನಿಯನ್ನು ಆಕರ್ಷಿಸುವ ಶಕ್ತಿ ಅಧಿಕವಾಗಿರುತ್ತದೆ. ಸಂಗೀತಕ್ಕೆ ಸೊಂಪು ಬರಬೇಕಾದರೆ ಇರುಳಿನಲ್ಲಿಯೆ! ಸಂಗೀತ ಕಚೇರಿ ಸಾಗುವುದು ಸಂಜೆಯಾದ ಬಳಿಕ ಹೆಚ್ಚು! ಇರುಳೇ ಸಂಗೀತಗಾರರಿಗೆ, ನಾಟಕಕಲಾವಿದರಿಗೆ ಹೆಚ್ಚು ಮೆಚ್ಚು! ಶಿವಕಥೆಯ ಹೇಳುವವರಿಗೂ ಕೇಳುವವರಿಗೂ ಇರುಳೇ ಇಮ್ಮು. ನಾದಮಯ ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಸತ್ಯಸುಖಕ್ಕೆ ಇರುಳಿನಷ್ಟು ಪ್ರಶಸ್ತಕಾಲ ಬೇರಿಲ್ಲ. ಪಾತ್ರಧಾರಿಯು ತನ್ನ ರೂಪು ನಾಮ ಕ್ರಿಯೆಗಳನ್ನು ಬದಲಿಸಲು ಅಂದರೆ ಶಿವಮಯವಾಗಿಸಲು ಸುಂದರವಾಗಿಸಲು ಸಹಕಾರಿಯಾಗಿದೆ ರಾತ್ರಿ! ಹಗಲು ಕಾಣದ ಚಂದ್ರಚುಕ್ಕೆಗಳು ಇರುಳು ಕಾಣಿಸುತ್ತವೆ. ಶಾಂತಿದಾಯಕ ಪ್ರಕಾಶವನ್ನು ಕಾಣಬೇಕು ಇರುಳಿನಲ್ಲಿ! ಚುಕ್ಕೆಗಳೆಂಬ ಚೆಲು ಹೂವುಗಳು ಅರಳಿದ ಬಾನ್‌ಬಳ್ಳಿಯ ಚೆಲುವನ್ನು ಕಂಡು ತಣಿಯಬೇಕಿದ್ದರೆ ಕತ್ತಲೆಯ ಮೊರೆ ಹೊಗದಿದ್ದರೆ ಸಾಧ್ಯವಿಲ್ಲ. ಚಿಕ್ಕ ಚಿಕ್ಕ ನಕ್ಷತ್ರ ಲೋಕ (ಖಗೋಲ)ಗಳನ್ನು ಕಣ್ಣಿಗೆ ಕಾಣಿಸುವ ಶಕ್ತಿ ಕತ್ತಲಕ್ಕಿದೆ. ಅಷ್ಟೇ ಅಲ್ಲ, ಶಿವನನ್ನೇ ಕಾಣಿಸುವ ಶಕ್ತಿ ಶಿವರಾತ್ರಿಗಿದೆ ಜ್ಞಾನಶೂನ್ಯವಾಗದೆ ಶಿವಸಾಮರಸ್ಯ ಸಮನಿಸದೆಂಬ ಸಿದ್ಧಾಂತ ರಹಸ್ಯವೂ ಸಹ ವ್ಯಾಜಾಂತರದಿಂದ ಇರುಳಿನ (ಮಹಾ ತಮದ) ಹಿರಿಮೆಯನ್ನೇ ಉಗ್ಗಡಿಸುವುದಿಲ್ಲವೆ? " ಯದಾ ತಮಸ್ತನ್ನ ದಿವಾ.... " ಈ ಶ್ವೇತಾಶ್ವತರ ಶ್ರುತಿಯು ತಮದ ಹಿರಿಮೆಗೆ ಕುರುಹಾಗಿದೆ.

ಸ್ವಯಂಜ್ಯೋತಿ ಸ್ವರೂಪನಾದ ಶಿವನನ್ನು ಸಂದರ್ಶಿಸಲು ಹಗಲಿನ ಅಗತ್ಯವಿಲ್ಲ; ಭೌತಿಕ ಭಾನುವಿನ ಬೆಳಕಿನ ಹಂಗು ಬೇಕಿಲ್ಲ. ದಿವಾಕರನ ಕಾಣಲ್ಕ ದೀಪದ ನೆರವೇಕೆ? ಇಂದ್ರಿಕ-ವೈಷಯಿಕ ಅಜ್ಞಾನರೂಪ ಅಂಧಕಾರ ಅಳಿವಟ್ಟರೇನ್ನೆ ಆ ಚಂದ್ರಚೂಡನಾದ ಪರಶಿವನ ಸಂದರ್ಶನ ಸೌಭಾಗ್ಯ. ತದಾಕಾರವೃತ್ತಿಗೆ ಇದು ತುಂಬಾ ಸಹಾಯಕ, ಸಂತೋಷಕ.

ಇರುಳಿನ ಶಾಂತಿ-ವಿಶ್ರಾಂತಿ ಭಾಗ್ಯವನ್ನು ಸುಷುಪ್ತಿ ಸೌಖ್ಯವನ್ನು ವಿಚಾರವಂತರು ಅದೆಂದಿಗೂ ಕಳೆದುಕೊಳ್ಳರು. ವಿದ್ಯುದ್ದೀಪಗಳ ಈ ಕಾಲದಲ್ಲಿ ಆ ಭಾಗ್ಯಕ್ಕೆ ಆ ಸೌಖ್ಯಕ್ಕೆ ವಂಚಿತರಾಗುವವರು ವಿಶೇಷ ಜನರು! ಶಿವನು ಅನುಗ್ರಹಿಸಿದ ಇರುಳಿನ ಎಲ್ಲ ಅವಧಿಯನ್ನು ಇರುಳನ್ನಾಗಿಯೇ ಇರಿಸಿಕೊಂಡು ಅದರ ಇಮ್ಮು ಹಮ್ಮುಗಳನ್ನು ಅನುಭವಿಸುವಂತಾದರೆ ಅತ್ಯಂತ ಲೇಸು. ಅಂತೆಯೇ ಇಂದಿನ ನವನಾಗರಿಕತೆಯ ಕೋಲಾಹಲದಿಂದ, ಇಂದಿನ ವಿಜ್ಞಾನ ವಿಲೋಭನೆಯಿಂದ ಕೆಲಕಾಲ ದೂರಿರಬೇಕೆಂದು ದೂರದೃಷ್ಟಿಯಿಂದ ಬಯಸುವದಾದರೆ ಇರುಳಿನ ಇಮ್ಮನೆಯ ಸೇರದೆ ಸಾಧ್ಯವಾಗದು. ಇನ್ನೂ ಮುಂದುವರಿದು ಹೇಳುವದಾದರೆ ಮೇಲ್ಕಂಡ ಗೀತೋಕ್ತಿಯಂತೆ ಹಗಲನ್ನೂ ಸಹ ಇರುಳನ್ನಾಗಿಸಿಕೊಳ್ಳದೆ ವಿಧಿಯೇ ಇಲ್ಲ. ವಿಭ್ರಮತೆಯಿಂದ ವಿರಾಮವಿಲ್ಲ. ಮನಸ್ಸಿನ ಸ್ಥಿರತೆ; ಭಾವೈಕಾಗ್ರತೆ, ಆತ್ಮಸ್ವಾತಂತ್ರ್ಯಗಳು ಇರುಳಿನಲ್ಲಿ ಸಹಜವಾಗಿ ಸಿಕ್ಕುತ್ತವೆ. ಭಾರತಕ್ಕೆ ಬಂದ ಸ್ವಾತಂತ್ರ್ಯದ ಸಮಯವನ್ನಿಲ್ಲಿ ಮನವಾರೆ ನೆನೆದುಕೊಳ್ಳುವುದುಚಿತ! ಇರುಳಿನ ಇಂಪಿನಲ್ಲಿ ನಿದ್ರೆಯ ತಂಪಿನಲ್ಲಿ ಸೊಂಪಿನಲ್ಲಿ ಮನ ವಿಷಯ ವ್ಯವಹಾರಗಳಿಗೆ ಹರಿಯದು. ಭಾವ ಭ್ರಾಂತಿಗೀಡಾಗದು. ಆತ್ಮ ಇಂದ್ರಿಯಾಧೀನವಾಗಿರದು.

ಇದಿ ಇರುಳಿಗಿಂತ ಕೊನೆಯ ಭಾಗ ಎಂದರೆ ಬೆಳಗಿನ ಭಾಗ "ಬ್ರಾಹ್ಮೀ ಮುಹೂರ್ತ" ವೆನಿಸಿದೆ. ಈ ನಲ್ವೆಸರಿನಿಂದ ಇದರ ವೈಶಿಷ್ಟ್ಯ-ವೈಲಕ್ಷಣ್ಯಗಳು ವೆಗ್ಗಳವಾಗಿವೆ. ವೈಭವ ವೇದ್ಯವಾಗುವಂತಿದೆ. ದಿನದ ಇನ್ನಾವ ಭಾಗಕ್ಕೂ (ಹೊತ್ತಿಗೂ) ಈ ಭಾಗ್ಯವಿಲ್ಲ; ಈ ಪುಣ್ಯವಿಲ್ಲ. ಈ ಬ್ರಾಹ್ಮಿ ಮುಹೂರ್ತವನ್ನು ಬ್ರಹ್ಮೋಪಾಸಕರು ಅದೆಂದಿಗೂ ಕಳೆದುಕೊಳ್ಳಲಾರರು; ಕಳೆದುಕೊಳ್ಳಬಾರದು. ಶಾಂತಿಸಂಪಾದನಾಕಾಂಕ್ಷಿಗಳೂ ಕಳಕೊಳ್ಳಬಾರದು. ಆ ಬ್ರಾಹ್ಮಮುಹೂರ್ತಕ್ಕೆ ಆ ಪರಬ್ರಹ್ಮನೆ ಅಧಿದೇವತೆಯಾಗಿದ್ದಾನೆ ಅಥವಾ ಅವನೆ ಆ ಸಮಯವಾಗಿದ್ದಾನೆ. ಎಂದು ಬ್ರಹ್ಮರ್ಷಿಗಳು ಬಿತ್ತರಿಸಿದ್ದಾರೆ. ಹೀಗಿರುವಾಗ ಬೆಳಗಿನ ಜಾವದ ಭಾಗ್ಯಕ್ಕೆ ಎಣೆಯುಂಟೆ?

ಬೆಳಗಿನ ಜಾವಕ್ಕೆ ಅಂದರೆ ಇರುಳಿನ ನಾಲ್ಕು-ನಾಲ್ಕುವರೆ ಗಂಟೆಗೆ ಎಂದೆಂದಿಗೂ ತಪ್ಪದೆ ಏಳಬೇಕು. ಎದ್ದೊಡನೆ ದೀಪವಂಟಿಸಬಾರದು. ವಿದ್ಯುತ್ತಿನ ಪ್ರದೀಪದ ಪ್ರಖರತೆಗೆ ಒಳಗಾಗಬಾರದು. ಪ್ರಶಾಂತ ವಾತಾವರಣವನು ಹೋಗುಟ್ಟಿಕೊಳ್ಳಬಾರದು. ದೀಪವಂಟಿಸದೆ, ಬೇರೆ ದಂದುಗಕ್ಕೆ ಪಕ್ಕಾಗದೆ ಬೆಳಗಿನ ಆ ಇವಮ್ಮಾದ ಇರುಳಿನ ಪ್ರಶಾಂತವಾತಾವರಣವನ್ನು ಮನವಾರೆ ಅನುಭವಿಸಬೇಕು. ಅದೊಂದು

ಅಪೂರ್ವವಾದ ಸ್ತಬ್ಧವಾತಾವರಣ. ಆಗ ಕಳೆದ ಇರುಳಿನ ತಾಮಸ ಭಾವ-ಗಾಢ ನಿದ್ದೆಗಳಿರುವುದಿಲ್ಲ. ಸೂರ್ಯೋದಯದ ಬಳಿಕ ಒದಗುವ ಜಗದ ಜಂಜಡವಿರುವುದಿಲ್ಲ; ರಾಜಸಭಾವವಿರುವುದಿಲ್ಲ. ಜನರ ಗದ್ದಲವಿರುವುದಿಲ್ಲ. ಪಶುಪಕ್ಷಿಗಳ ಗಿಡಮರ ಬಳ್ಳಿಗಳ ಸದ್ದು ಇರುವುದಿಲ್ಲ. ಯಂತ್ರಗಳ ವಾಹನಗಳ ಕಠೋರ ಕೂಗಿರುವುದಿಲ್ಲ. ಪ್ರಭಾಕರನ ಪ್ರಖರತೆ ಇರುವುದಿಲ್ಲ. ಇಡಿ ನಿಸರ್ಗವೆ ನಿರ್ಮಲವಾಗಿರುತ್ತದೆ; ನಿಶ್ಚಲವಾಗಿರುತ್ತದೆ. ಅದು ಬ್ರಾಹ್ಮಮುಹೂರ್ತವೇ ಆಗಿರುತ್ತದೆ.

ಆ ಮಂಗಳಮಯ ಮುಹೂರ್ತದಲ್ಲಿ ಆ ಬ್ರಾಹ್ಮಿ ಜಾವದಲ್ಲಿ ಎದ್ದು ಏಕಾಗ್ರಚಿತ್ತದಿಂದ ಪದ್ಮಾಸನ ಅಥವಾ ಸುಖಾಸನದಿಂದ ಸರಳ ಶರೀರಿಯಾಗಿ ಮಯ್ಗೆಡದೆ ಮಯ್ಮುಗೆಡದೆ ಹಾಸುಗೆಯಲ್ಲಿಯೆ ಕುಳಿತು ಗುರುಧ್ಯಾನಾಸಕ್ತನಾಗಬೇಕು. ಆ ಗುರುದೇವನ ಆ ಮಂಗಳಮೂರ್ತಿ ಚಿತ್ರಧಾರಣವನ್ನು ಚಿತ್ತಭಿತ್ತಿಯ ಮೇಲೆ ಮಾಡಬೇಕು. ಆ ಗುರುಬೋಧೆಯನ್ನು ನಲವಿಂದ ನೆನೆಯಬೇಕು; ಮನನಮಾಡ ಬೇಕು. ಮೇಲೇರಿ ನಿಧಿಧ್ಯಾಸಕ್ಕೂ ನಿಶ್ಚಲಸಮಾಧಿಗೂ ತಲುಪಬೇಕು. ಈ ಕಾರ್ಯ, ಈ ಯೋಗ ಆಗ ಸುಲಭವಾಗಿ ಸಂಪ್ರಾಪ್ತವಾಗುತ್ತದೆ. ಅಭ್ಯಾಸಿಗಳಿಗೂ ಆಧ್ಯಾತ್ಮ ಜಿಜ್ಞಾಸುಗಳಿಗೂ ಇದು ಸರ್ವೋತ್ತಮ ಸಮಯ; ಸರ್ವಥಾ ಸಂಜೀವನ ಸಮಯ. ಹಿಂದೆ ಅನುಭವಿಸಿದ ಆರೇಳು ಗಂಟೆಯ ಇರುಳಿನ ನಿದ್ದೆಗಿಂತ ಬಹುಪಾಲು ಮೇಲಾದ ಸುಷುಪ್ತಿಸುಖ ಸಂಪ್ರಾಪ್ತವಾಗುತ್ತದೆ. ನಮ್ಮ ಪ್ರಕೃತಿಗೆ ಬೇಕಾದ ಪರಿಪುಷ್ಟಿ ಪ್ರಾಪ್ತವಾಗುತ್ತದೆ. ಹಗಲು ಹನ್ನೆರಡು ಗಂಟೆಗಳ ಕಾಲ ಓದಿದರೂ ಬಾರದ ವಿದ್ಯೆ ಬಾರದ ಪಾಠ-ಬಾರದ ಸಂಗೀತ ಆ ಬ್ರಾಹ್ಮೀ ಮುಹೂರ್ತದ ಗಳಿಗೆಯಲ್ಲಿ ಬರುತ್ತದೆ. ಆ ಬ್ರಾಹ್ಮೀ ಮುಹೂರ್ತದಲ್ಲಿ ಬ್ರಹ್ಮೋಪಾಸಕರಿಗೆ ಬ್ರಹ್ಮ ಸಮಾಧಿ ಸುಖ ಸಂಪ್ರಾಪ್ತವಾಗುತ್ತದೆ. ಯೋಗಿಗಳು ಅನಂತಕಾಲದ ಸಾಧನೆಯಿಂದ ಸಂಗಳಿಸುವ ಶಾಂತಿಯನ್ನು ಸುಷುಪ್ತಿಯನ್ನು ನಾವು (ಸಾಧಕರು) ನಿತ್ಯ ಆ ಬ್ರಾಹ್ಮೀಮುಹೂರ್ತದ ಒಂದೇ ಒಂದು ಗಂಟೆಯಲ್ಲಿ ಗಳಿಸುತ್ತೇವೆ. ಇನ್ನಾವ ವೇಳೆಯಲ್ಲಿಯೂ ಅನುಭವಿಸದ ಆನಂದವನ್ನು ಅನುಭವಿಸುತ್ತೇವೆ. ಆ ಬ್ರಾಹ್ಮೀಮುಹೂರ್ತದ ಮಹಿಮೆ ಮೇರೆ ಮೀರಿದುದು. ಅದರ ಇಮ್ಮನ್ನು ಇನ್ನುನವಿಲ್ಲದೆ ಮುಮುಕ್ಷುಗಳು ಸ್ವತಃ ಅನುಭವಿಸಿಯೇ ಮನಗಾಣಬೇಕು. ಅಭ್ಯಾಸಿಗಳೂ ಅನುಭವಿಸಬೇಕು. ಬ್ರಾಹ್ಮೀ ಮುಹೂರ್ತವೇ ಎಲ್ಲರ ಬಾಳಿನ ಬಂಗಾರ; ಬಾಳಲೇಸಿನುಸಿರು.

" ಕೋಳಿ ಕೂಗದ ಮುನ್ನ, ಏಳುವುದು ಭಕ್ತಿಯಿಂ
ಭಾಳಲೋಚನನ ರತಿಯಿಂ ಭಜಿಸಿದರೆ
ಆಳಿನಾಳಯ್ಯ ಸರ್ವಜ್ಞ "

ಸರ್ವಜ್ಞನೊಡನೆ ಸಂತೋಷವಾಗಿ ಹೃದಯತುಂಬಿ ಹಾಡೋಣ! ಆ ಹೊಲಬಿನಲ್ಲಿ ಹೋಗೋಣ! ಕೋಳಿ ಕೂಗದ ಮುನ್ನ ಏಳೋಣ! ಭಾಳಲೋಚನನನ್ನು ಭಜಿಸೋಣ! ಇರುಳಿನ ಆ ಇಮ್ಮಾದ ಗಳಿಗೆಯನ್ನು ಕಳೆದುಕೊಳ್ಳದೆ ಸವಿದು ಸೊಗಸೋಣ! ಹಾಲಿಗೆ ಕೆನೆ ಹೇಗೋ ಇರುಳಿಗೆ ಬ್ರಾಹ್ಮೀಮುಹೂರ್ತವು ಹಾಗೆ!

ಈ ಇರುಳಿನ ಇಮ್ಮನು ಶಿವಯೋಗದ ಒಳಬೆಳಗನು ಹಾನಗಲ್ಲ ಶ್ರೀ ಕುಮಾರ ಶಿವಯೋಗಿಯ ಕೃಪೆಯಿಂದ ಕಂಡುಕೊಂಡು ಚಿರಮುಕ್ತರಾದ ಗಾನಯೋಗಿ ಶ್ರೀ ಪಂಚಾಕ್ಷರ ಗವಾಯಿಗಳನ್ನು ನಾವಿಂದು ನೆನೆಯಬೇಕಾಗಿದೆ. ಅವರು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಗಾನಯೋಗದ ಸಾಧನೆಯನ್ನು ಪ್ರತಿನಿತ್ಯವೂ ಮಾಡುತ್ತಿದ್ದರು. ಅದರಂತೆ ಇಂದಿಗೂ ಅವರ ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ–ಸಾಹಿತ್ಯ ವಿದ್ಯಾಲಯದಲ್ಲಿ ವಿದ್ಯಾರ್ಥಿಗಳು ಕೋಳಿ ಕೂಗದ ಮುನ್ನ ಎದ್ದು ಸ್ವರ-ವಾದ್ಯ ಸಾಧನೆಯನ್ನು ಮಾಡುತ್ತ ಭಾಳಲೋಚನನನ್ನು ಸ್ತುತಿಸುವ ಸಂಗೀತಮಯ ಸನ್ನಿವೇಶವು ಬಹು ಆಕರ್ಷಕವಾಗಿರುತ್ತದೆ. ಶ್ರೀ ಗವಾಯಿಗಳವರ ವರ ಪಟ್ಟಶಿಷ್ಯರಾದ ಶ್ರೀ ಪುಟ್ಟರಾಜ ಗವಾಯಿಗಳವರು ಈ ಸಂಗೀತಶಾಲೆಯನ್ನು ಗುರುವರ್ಯರ ಅನುಜ್ಞೆಯಂತೆ ಆದರ್ಶ ರೀತಿಯಲ್ಲಿ ನಡೆಸಿಕೊಂಡು ಬಂದಿರುವುದಕ್ಕೆ ಸಂಸ್ಥೆಯ ಈ ಸುವರ್ಣ ಮಹೋತ್ಸವವೇ ನಿದರ್ಶನವಾಗಿದೆ. ಅಂತೆಯೆ ಅದು ಅಭಿವೃದ್ಧಿಹೊಂದಿ ರನ್ನಬೆಳಗನ್ನು ಕಾಣಲೆಂದು ಹೃದಯದುಂಬಿ ಹಾರೈಸಲಾಗಿದೆ.

ಇಂತು ನಲ್

# ಪರಮ ಪರೋಪಕಾರಿ ಶ್ರೀ ಪಂಚಾಕ್ಷರಿ

**ಶ್ರೀ. ನಿ. ಪ್ರ. ಕುಮಾರಸ್ವಾಮಿಗಳು ಕಲ್ಮಠ, ಸವದತ್ತಿ.**

ವಿದ್ಯೆಗಳಲ್ಲಿ ಗಾನವಿದ್ಯೆಯೊಂದು ಮಿಗಿಲಾದುದು. ಅದು ಎಲ್ಲರಿಗೂ ಮನಮೋಹಕವಾದ, ಪ್ರಿಯವಾದ ವಿದ್ಯೆ. ಅಂತೆಯೇ ಅದನ್ನು ಲಲಿತಕಲೆಗಳಲ್ಲಿ ಗಣಿಸಿರುವುದು. ಆನಂದವನ್ನುಂಟುಮಾಡುವುದು ಕಲೆಯ ಗುರಿಯಾಗಿದೆ. ಕಲಾತ್ಮಕ ಶಿವನು ನಾದವಲ್ಲಿಯೂ ಅಡಗಿದ್ದಾನೆ. ನಾದಯೋಗಿಯು ಆ ಕಲಾರೂಪಿ ಶಿವನನ್ನು ಸಪ್ತಸ್ವರ ಸಾಧನೆಯಿಂದ ಕಾಣಬಲ್ಲ. ಶಿವನು ಭಕ್ತಿ ಪ್ರಿಯನಾಗಿದ್ದರೆ ನಾದವು ಭಕ್ತಿಗೆ ಮಹತ್‌ಸಾಧನವಾಗಿದೆ. ವೀರಶೈವರ ಶಿವಲಿಂಗಪೂಜೆಯು ಗೀತವಿಲ್ಲದೆ ತನ್ಮಯತೆಯನ್ನು ಪಡೆಯದು. ಶಿವನ ಅನಂತ ಮಹಿಮೆಯನ್ನು, ಶಿವಸ್ವರೂಪಿ ಪ್ರಮಥರ ಅನಂತ ಗುಣಗಾನವನ್ನು ಮಾಡಿದಾಗಲೇ ಭಕ್ತನಿಗೆ ಸಂತೃಪ್ತಿ. ಶಿವಯೋಗವನ್ನು ಸಂಗೀತಮಯ ಸ್ವರಸಾಧನೆಯಿಂದಲೂ ಸಾಧಿಸಬಹುದೆಂಬುದನ್ನು ಲಿಂ. ಪರಮಪೂಜ್ಯ ಹಾನಗಲ್ಲ ಮಹಾಸ್ವಾಮಿಗಳವರು ಮನಗಂಡಿದ್ದರು. ಸಂಗೀತವು ಲಂಪಟರ ಮತ್ತು ವಿಲಾಸಿಗಳ ಸೊತ್ತಾಗಿ ಕಲಂಕಿತವಾಗಿತ್ತು. ಕಲೆಗೆ ಅಂಟಿದ ಈ ಕಲಂಕವನ್ನು ತೊಳೆದು ಅದರ ಮೇಲ್ಮೆಯನ್ನು ಲೋಕಕ್ಕೆ ತೋರಬೇಕೆಂಬಾಶೆ ಶ್ರೀಗಳವರಲ್ಲಿತ್ತು. ಅವರ ಈ ಮಹದಾಶೆ ಕಾಡಶೆಟ್ಟಿಹಳ್ಳಿಯ ಶ್ರೀ ಗದಿಗೆಯ್ಯ ನವರಿಂದ ಕೈಗೂಡುವಂತಾಯಿತು. ಸಾಮಾನ್ಯ ಗದಿಗೆಯ್ಯನವರು ಪೂಜ್ಯರ ಕೃಪಾ-ಛತ್ರದಲ್ಲಿ ಬೆಳೆದು ಉಭಯಗಾನವಿಶಾರದರಾದರು; ಶ್ರೀ ಪಂಚಾಕ್ಷರಿ ಗವಾಯಿಗಳೆಂದು ಹೆಸರು ಪಡೆದರು. ಶ್ರೀಗಳವರು ಬೋಧಿಸಿದ ಶಿವಯೋಗವನ್ನು ಪಡೆಯಲು ಅರ್ಹತೆ ಎಲ್ಲರಿಗೂ ಇಲ್ಲವಾಗಿತ್ತು. ಆದರೆ ಶಿವಯೋಗಕ್ಕೆ ಸಹಕಾರಿಯಾದ ಗಾನವಿದ್ಯೆಯನ್ನು ಜಾತಿ-ಮತ-ಪಂಥಗಳ ಕಟ್ಟಿಲ್ಲದೆ ಎಲ್ಲರಿಗೂ ಸಮಾನವಾಗಿ ಬೋಧಿಸಬಹುದಾಗಿತ್ತು. ಶ್ರೀಗಳವರ ಸಕಲಲೋಕಕೆ ಲೇಸನೆ ಬಯಸುವ ವಿಶ್ವಪ್ರೇಮ ಶ್ರೀ ಪಂಚಾಕ್ಷರಿ ಗವಾಯಿಗಳವರ ಮಹತ್‌ಸಾಧನೆಯಲ್ಲಿ ಮೈಗೂಡಿ ಬಂದಿತು. ಶ್ರೀ ಗವಾಯಿಗ-ಳವರು ತಮ್ಮ ಪರಮಗುರುವಾದ ಶ್ರೀಕುಮಾರೇಶನ ಶಿವಸಂಕಲ್ಪವನ್ನು ಪೂರ್ತಿ ಗೊಳಿಸಲು ಪಟ್ಟ ಪಾಡು ಅಷ್ಟಿಷ್ಟಲ್ಲ. ಅವರು ಸ್ತುತಿ-ನಿಂದೆಗೆ ಕಿವಿಗೊಡಲಿಲ್ಲ, ಆರ್ಥಿಕ ಸಂಕಷ್ಟಕ್ಕೆ ಶಿರಬಾಗಲಿಲ್ಲ. ಕೊನೆಯ ಉಸಿರಿರುವ ವರೆಗೂ ನಿಷ್ಠೆಯಿಂದ ಗುರುವರ್ಯರ ವಚನದಂತೆ ನಡೆದರು. ಅವರೊಬ್ಬ ಅನುಪಮ ಗಾನವಿದ್ಯಾಯೋಗಿ ಪರಮ ವಿರಕ್ತ ಶಿವಯೋಗಿಯಾಗಿ ಬಾಳಿದರು. ಸಾವಿರಾರು ಮಾನವರ ಜೀವನವನ್ನು ಉಜ್ವಳಗೊಳಿಸಿದರು. ಇಂದಿಗೂ ಭಾರತದ ಮೂಲೆ ಮೂಲೆಯಲ್ಲಿ

ಅವರ ಶಿಷ್ಯ ಸಂತತಿ ಹಬ್ಬಿ ಬೆಳೆಯುತ್ತಿದೆ. ಸಾವಿರಾರು ಸಂಗೀತಕಲೆಗಾರರು ಇಂದು ಅವರನ್ನು ನೆನೆದು ತಮ್ಮ ನಿರ್ಮಳ ಜೀವನವನ್ನು ಸಾಗಿಸಿದ್ದಾರೆ, ಸಂಗೀತವು ವಿಷಯವ್ಯಾಮೋಹದ ಸಾಧನವಾಗಿರದೆ ಸಾತ್ವಿಕ ಮತ್ತು ಸುಖಮಯ ಬಾಳಿನ ದಾರಿದೀಪವೆಂಬುದನ್ನು ಮನಗಂಡಿದ್ದಾರೆ.

ಹಾನಗಲ್ಲ ಶ್ರೀಕುಮಾರ ಶಿವಯೋಗಿಗಳ ಬಗ್ಗೆ, ಅಂತೆಯೆ ಶ್ರೀ ಪಂಚಾಕ್ಷರ ಗವಾಯಿಗಳವರಲ್ಲಿ ಅಪಾರ ನಿಷ್ಠೆ ಇತ್ತು. ತಮ್ಮ ಗುರುವಿನ ನಿಂದೆಯನ್ನು ಅವರೆಂದೂ ಕೇಳಿದವರಲ್ಲ, ಕೇಳಿ ಸಹಿಸಿದವರೂ ಅವರಲ್ಲ. ಶ್ರೀ ಗವಾಯಿಗಳು ನಿರ್ದಾಕ್ಷಿಣ್ಯವಾಗಿ ನಿಷ್ಠುರವಾಗಿ ನಿಂದಕರನ್ನು ಖಂಡಿಸದೆ ಬಿಡುತ್ತಿರಲಿಲ್ಲ. ಸಮಾಜಸೇವೆ ಮಾಡುವ ಪೂಜ್ಯರನ್ನು ನಿಂದಿಸದೆ ಅವರ ವ್ಯಕ್ತಿತ್ವದ ಮಹತಿಯನ್ನು ಅರಿತು ಅವರ ಬೆಳಗಿನಲ್ಲಿ ಬಾಳುವಂತೆ ತಿಳಿಯಾಗಿ ಹೇಳಿ ನಿಂದಕರನ್ನು ಒಳ್ಳೆಯ ಮಾನವರನ್ನಾಗಿ ಮಾರ್ಪಡಿಸಲು ಪ್ರಯತ್ನಿಸುತ್ತಿದ್ದರು.

ಸಿರಿವಂತರಲ್ಲಿ ಸಂಗೀತಕಲೆಗೆ ಆಶ್ರಯ ದೊರೆಯುವುದು ಸಹಜ. ಆದರೆ ಕೆಲವು ವಿಲಾಸಿಗಳು ಸಂಗೀತವನ್ನು ಬರಿಯ ವಿನೋದ-ಚಿತ್ತಂದದ ಕಲೆಯೆಂದು ಬಗೆದಿದ್ದರು. ಶ್ರೀ ಗವಾಯಿಗಳು ಸಿರಿವಂತರ ಈ ಮೌಢ್ಯವನ್ನು ಕಳೆದರು. ಅವರಿಗೆ ಸಂಗೀತಕಲೆಯ ಬಗೆಗೆ ಸರಿಯಾದ ತಿಳಿವಳಿಕೆ ಕೊಟ್ಟರು. ಕೆಲವು ಸಾತ್ವಿಕ ಸಿರಿವಂತರು ಶ್ರೀ ಗವಾಯಿಗಳವರ ಮಹತಿಯನ್ನು ತಿಳಿದು ಅವರ ಆತ್ಮೀಯರಾದರು. ಅಂತಹವರಲ್ಲಿ ಎಡಹಳ್ಳಿ ಶ್ರೀ ಮಲ್ಲಪ್ಪ ದೇಸಾಯರು ನುರಿತ ತಬಲಾವಾದಕರಾಗಿದ್ದರು. ಶ್ರೀ ಗವಾಯಿಗಳು ಅವರನ್ನು ವಿನೋದಕ್ಕೆಂದು ಸ್ಪರ್ಧೆಗೆ ಕರೆಯುತ್ತಿದ್ದರು. ಅವರೀರ್ವರ ವಾದನ ಸ್ಪರ್ಧೆ ಸಂಗೀತಪ್ರೇಮಿಗಳಿಗೊಂದು ರಸದೂಟವಾಗಿ ಪರಿವರ್ತಿಸುತ್ತಿತ್ತು. ತಿಂಗಳುಗಟ್ಟಲೆ ಶ್ರೀ ಗವಾಯಿಗಳು ತಮ್ಮ ಪರಿವಾರದೊಂದಿಗೆ ಶ್ರೀಮಂತ ಮಲಪ್ಪ ದೇಸಾಯರ ಆತಿಥ್ಯವನ್ನು ಸ್ವೀಕರಿಸಿ ಸಂತುಷ್ಟರಾಗಿರುತ್ತಿದ್ದರು.

ಗದಗಿನ ದಾನಶೂರ ಶ್ರೀ ಬಸರೀಗಿಡದ ವೀರಪ್ಪನವರು ಶ್ರೀ ಗವಾಯಿಗಳನ್ನು ತಮ್ಮ ಮನೆಯ ಗುರುಗಳಂತೆ ಕಂಡು ಗೌರವಿಸಿದರು. ಏನು ವ್ಯಾಪಾರ ಮಾಡಿದರೂ ಅದರಲ್ಲಿ ಗುರುಗಳದೇ ಮೊದಲ ಪಾಲು. ಶ್ರೀ ಗವಾಯಿಗಳ ಪಾಲಿನ ಬಂಡವಲವನ್ನು ತಾವೇ ಹಾಕಿ; ಅದರ ಲಾಭವನ್ನು ತಪ್ಪದೇ ಕೊಡುವ ಘನತೆ ಶ್ರೀಮಂತ ವೀರಪ್ಪನವರದಾಗಿತ್ತು. ಅಂತೆಯೇ ಗವಾಯಿಗಳು ಇಡಿಯ ನಾಡನ್ನೆಲ್ಲ

ಸುತ್ತಿ ಬಸವಳಿದು ಕೊನೆಗೆ ೀರಪ್ಪನವರ ಆಶ್ರಯದಲ್ಲಿ ಶ್ರೀ ಕುಮಾರೇಶ್ವರ ಕೃಪಾಪೋಷಿತ 'ಸಂಗೀತ ಸಾಹಿತ್ಯ ವಿದ್ಯಾಲಯ'ವನ್ನು ಗದಗಿನಲ್ಲಿ ನೆಲೆಸುವಂತೆ ಮಾಡಿದರು.

ಲಿಂ. ಪರಮಪೂಜ್ಯ ಹಾವೇರಿಯ ಶಿವಬಸವ ಮಹಾಶಿವಯೋಗಿಗಳೂ ಸಂಗೀತ ಪ್ರೇಮಿಗಳು. ಅವರು ಶ್ರೀ ಗವಾಯಿಗಳವರ ಮೇಲೆ ಬಹು ಕೃಪೆದೋರಿ ದವರು. ತಾವು ವಾಸ್ತವ್ಯ ಮಾಡಿದಲ್ಲಿ ಆಗಾಗ ಶ್ರೀ ಗವಾಯಿಗಳನ್ನು ಮಂಡಳಿ ಯೊಂದಿಗೆ ಕರೆಯಿಸಿ ಅವರೊಡನೆ ಸಂಗೀತಗೋಷ್ಠಿ ನಡೆಯಿಸಿ ಪರಮ ಸಂತೋಷ ಪಡೆಯುತ್ತಿದ್ದರು. ಒಂದುಸಲ ಶ್ರೀಗಳವರು ಗದುಗಿನಲ್ಲಿ ಶ್ರೀ ಮಾನ್ವಿಯವರ ಬಂಗಲೆಯಲ್ಲಿ ವಿಶ್ರಾಮ ಪಡೆಯುತ್ತಿದ್ದರು. ಆಗ ಶ್ರೀಗಳವರ ಅಪ್ಪಣೆಯಂತೆ ಶ್ರೀ ಗವಾಯಿಳು ಮಂಡಳಿಯೊಂದಿಗೆ ಬಂದರು. ಎರಡು ಗಂಟೆಯ ಕಾಲ ಸಂಗೀತ ಕಚೇರಿ ಅಖಂಡವಾಗಿ ಸಾಗಿತ್ತು. ಶ್ರೀಗಳವರು ತನ್ಮಯರಾಗಿ ಶ್ರೀ ಗವಾಯಿಗಳ ಗಾನ–ವಾದನ ಕಲೆಯನ್ನು ಆಲಿಸಿ, ಆನಂದ ತುಂದಿಲರಾದರು. ಕೊನೆಗೆ ಭೈರವಿ ಯೊಡನೆ ಮಂಗಲವಾದ ಮೇಲೆ ಶ್ರೀಗಳವರು ಆನಂದಭರಿತರಾಗಿ "ಗಾನ- ದೇವತೆಯೇ ನಿಮ್ಮಲ್ಲಿ ರೂಪವೆತ್ತಿ ಬಂದಂತಿದೆ. ಹಾನಗಲ್ಲ ಶಿವಯೋಗಿಗಳು ಪ್ರಯತ್ನಪಟ್ಟು ನಿಮಗೆ ಕಲಿಸಿದ್ದು ಸಾರ್ಥಕವಾಯಿತು. ಸಮಾಜದ ಉದ್ಧಾರವೂ ಆಯಿತು" ಎಂದು ಶ್ರೀ ಗವಾಯಿಗಳಿಗೆ ಆಶೀರ್ವದಿಸಿ ಕಳಿಸಿದುದನ್ನು ನಾವು ಕಣ್ಣಾರೆ ಕಂಡಿದ್ದೇವೆ, ಕಿವಿಯಾರೆ ಕೇಳಿದ್ದೇವೆ.

ಶ್ರೀ ಗವಾಯಿಗಳವರ ಪಟ್ಟ ಶಿಷ್ಯರಾದ ಶ್ರೀ ಪುಟ್ಟರಾಜ ಗವಾಯಿ ಗಳು ಸಮರ್ಥ ಗುರುವಿನ ಸಮರ್ಥ ಶಿಷ್ಯೋತ್ತಮರಾಗಿ ಬಾಳುತ್ತಿದ್ದಾರೆ. ಶ್ರೀ ಪಂಚಾಕ್ಷರ ಗವಾಯಿಗಳವರು ತಮ್ಮ ಗಾನ ಶಿವಯೋಗ ವಿದ್ಯಾಸಂಪದವನ್ನು ಶ್ರೀ ಪುಟ್ಟರಾಜರಿಗೆ ಧಾರೆಯೆರೆದಂತಿದೆ. ಅವರು ಗಾನಕಲೆಯೊಂದಿಗೆ ಸಂಸ್ಕೃತ-ಕನ್ನಡ- ಹಿಂದೀ ಭಾಷೆಗಳಲ್ಲಿ ಕವಿತ್ವಶಕ್ತಿಯನ್ನು ಬೆಳೆಸಿಕೊಂಡು ಆ ಭಾಷೆಗಳಲ್ಲಿ ಉತ್ತಮ ಕಾವ್ಯಗಳ ರಚನೆಯನ್ನು ಮಾಡಿ ಪಂಡಿತ ಸನ್ಮಾನ್ಯರಾಗಿರುವರು. ಗುರು- ವಿಗಿಂತಲೂ ಒಂದು ಹೆಜ್ಜೆ ಮುಂದೆ ಇಟ್ಟು ಗುರುವಿಗೆ ಅಪಾರ ಕೀರ್ತಿಯನ್ನೇ ತಂದ ಆದರ್ಶ ಶಿಷ್ಯರಾಗಿದ್ದಾರೆ. ಅವರು ಈಗ ಗದಗಿನ ಪುಣ್ಯಾಶ್ರಮದಲ್ಲಿ ಗುರುವರ್ಯರು ಸ್ಥಾಪಿಸಿದ ಸಂಗೀತ ವಿದ್ಯಾಲಯವನ್ನು ಬಹುಮುಖವಾಗಿ ಅಭಿ ವೃದ್ಧಿಗೊಳಿಸುತ್ತಿದ್ದಾರೆ. ಅವರ ಈ ಆಶ್ರಮ ಹುಟ್ಟು ಗುರುಡರ ಮಠವಾಗಿದೆ. ಹೊಟ್ಟೆಯ ಪಾಡಿಗಾಗಿ ತಂದೆ-ತಾಯಿಯಂದಿರಿಂದ ಇಡಿಯ ಸಮಾಜದಿಂದ ಉಪೇ ಕ್ಷಿತರಾಗಿ ಊರೂರು ಬೀದಿ-ಬೀದಿ ಅನಾಥರಾಗಿ ಅಲೆಯುತ್ತಿದ್ದ ನೂರಾರು ಹುಟ್ಟು

ಗುರುಡರನ್ನು ಸಾಕಿ ಸಲಹಿ ಅವರಿಗೆ ಸಾಹಿತ್ಯ ಸಂಗೀತ ವಿದ್ಯೆಯನ್ನು ಕಲಿಸಿದ ಕಾರ್ಯ ಸಣ್ಣದೇ ? ಈ ಪುಣ್ಯದ ಮಹಾ ಕಾರ್ಯವನ್ನು ಶ್ರೀ ಪುಟ್ಟರಾಜರು ಅವ್ಯಾಹತವಾಗಿ ಕಷ್ಟ ಪರಂಪರೆಗೆ ಅಳುಕದೆ ನಡೆಸಿಕೊಂಡು ಬಂದಿರುವುದು ಪರಮ ಗುರುವರ್ಯ ಲಿಂ. ಹಾನಗಲ್ಲ ಕುಮಾರಯೋಗಿಗಳ ಕೃಪೆಯ ಫಲವೆಂದೇ ಹೇಳಬೇಕು.

ಪರಮ– ಪೂಜ್ಯ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಶಿವಯೋಗ ಮಂದಿರ ಸಂಸ್ಥೆಯಲ್ಲಿ ಗುರುವರ್ಗವನ್ನು ಸಂಸ್ಕೃತ ಯೋಗವಿದ್ಯೆಯಿಂದ ಪಳಗಿಸಿದರೆ, ಇಲ್ಲಿ ಉತ್ತಮ ಸಂಗೀತ ಸಾಹಿತ್ಯ ಕಲೆಯಿಂದ ವೀರಶೈವ ಧರ್ಮ ಪ್ರಚಾರಕರನ್ನು ತರಬೇತುಗೊಳಿಸಲಾಗುತ್ತಿದೆ. ಉಳಿದ ಧರ್ಮದ ವಿದ್ಯಾರ್ಥಿಗಳಿಗೂ ಉಚಿತ ಸಂಗೀತ ವಿದ್ಯೆಯನ್ನು ನೀಡಿ ಅವರನ್ನು ನೀತಿವಂತ ಉತ್ತಮ ಕಲೆಗಾರರನ್ನಾಗಿ ಮಾಡುವ ಮೋಡಿ ಶ್ರೀ ಪುಟ್ಟರಾಜರಲ್ಲಿ ಉಭಯ ಗುರುವರ್ಯರಿಂದ ಬಳುವಳಿಯಾಗಿ ಬಂದಿದೆಯೆಂದು ಹೇಳಿದರೆ ಬರಿಯ ಹೆಚ್ಚುಳದ ಮಾತಲ್ಲ. ಅವರು ನೀತಿ– ಧರ್ಮಬೋಧಕ ನಾಟಕಗಳನ್ನು ಕಲೆಗಾರರಿಗೆ ಕಲಿಸಿ, ಅವರ ಮುಖಾಂತರ ಉತ್ತಮ ಸಂಸ್ಕೃತಿಯ ವಾತಾವರಣವನು ಸಮಾಜದಲ್ಲಿ ಬೆಳೆಸಲು ಪ್ರಯತ್ನಿಸುತ್ತಿರುವುದು ನಿಜಕ್ಕೂ ಸ್ತುತ್ಯವಾಗಿದೆ. ಇವೆರಡೂ ಶ್ರೀ ಕುಮಾರೇಶ್ವರರ ಕೃಪಾಛತ್ರದಲ್ಲಿ ಬೆಳೆದು ಬಂದ ಸಂಸ್ಥೆಗಳು. ಶ್ರೀ ಪುಟ್ಟರಾಜ ಗವಾಯಿಗಳು ಗುರುವರ್ಯರ ಪುಣ್ಯತಿಥಿಯನ್ನು ಪ್ರತಿವರ್ಷವೂ ಶಿಷ್ಯ-ಪ್ರಶಿಷ್ಯರೊಡಗೂಡಿ ಆಚರಿಸುತ್ತಿರುವುದು ಅವರ ಗುರುನಿಷ್ಠೆಯ ದ್ಯೋತಕವಾಗಿದೆ. ಅವರಿಂದ ಕನ್ನಡ ನಾಡನುಡಿಗೆ ಅನೇಕ ಮುಖವಾಗಿ ಸೇವೆ ಸಲ್ಲುತ್ತಿದೆ. ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಾಹಿತ್ಯ– ಸಂಗೀತ ವಿದ್ಯಾಲಯವು ಸ್ಥಾಪಿತವಾಗಿ ಐವತ್ತು ವರ್ಷಗಳು ತುಂಬಿ ಬಂದಿವೆ. ಅದರ ನವಿನೆನಪಿಗಾಗಿ ಸುವರ್ಣ ಮಹೋತ್ಸವವನ್ನು ಅದೇ ನಾಟಕ ಮಂಡಳಿಯ ರಜತಮಹೋತ್ಸವವನ್ನೂ ಸಂಭ್ರಮದಿಂದ ಆಚರಿಸುವುದು ಸಂತಸದ ವಿಷಯವಾಗಿದೆ. ಸದ್ಗುರು ಶ್ರೀ ಕುಮಾರೇಶ್ವರನು ಪಂ. ಪುಟ್ಟರಾಜ ಗವಾಯಿಗಳವರಿಗೆ ಇನ್ನು ಅಧಿಕವಾದ ಆಯುರಾರೋಗ್ಯವನ್ನು ಕರುಣಿಸಿ ಅವರಿಂದ ಇನ್ನೂ ಹೆಚ್ಚಿನ ಕಲಾಸೇವೆ ಅವಿಚ್ಛಿನ್ನವಾಗಿ ನಡೆಯುವಂತೆ ಮಾಡಲೆಂದು ಹಾರೈಸುತ್ತೇನೆ.

# ಅಂತಶ್ಚಕ್ಷು ಶ್ರೀ ಪಂಚಾಕ್ಷರಿ ಗವಾಯಿಗಳು

ಶ್ರೀ. ನಿ. ಪ್ರ. ರುದ್ರಸ್ವಾಮಿಗಳು, ರುದ್ರಾಕ್ಷಿಮಠ, ಹುಬ್ಬಳ್ಳಿ

ಕನ್ನಡ ನಾಡಿನಲ್ಲಿ ಪರಶಿವನೇ ತನ್ನ ವಿವರ್ತರೂಪವೆತ್ತು ಹಾನಗಲ್ಲ ಶ್ರೀ ಕುಮಾರಸ್ವಾಮಿಗಳೆಂಬ ಅಭಿಧಾನದಿಂದ ಅವತರಿಸಿದರು. ಅವರಿಂದ ಸಂಸ್ಥಾಪಿತವಾದ ಶ್ರೀ ಮದ್ವೀರಶೈವ ಶಿವಯೋಗಮಂದಿರವೆಂಬ ಜ್ಞಾನಖಣಿಯಲ್ಲಿ ಹೊರಟ ಅನೇಕ ರತ್ನಗಳಲ್ಲಿ ಗಾನಯೋಗಿ ಶ್ರೀ ಪಂಚಾಕ್ಷರಿ ಗವಾಯಿಗಳು ಒಂದು ಅತ್ಯಮೌಲ್ಯವಾದ ಮಣಿಯಾಗಿದ್ದಾರೆ.

ಬಾಲ್ಯದಲ್ಲಿಯೇ ಶ್ರೀ ಗವಾಯಿಗಳು ಹಾನಗಲ್ಲ ಶ್ರೀಗಳವರ ಕೃಪಾದೃಷ್ಟಿಗೆ ಪಾತ್ರರಾದರು. ಶ್ರೀಗಳವರು ಬಾಲಕ ಗದಿಗಾರ್ಯನ ಸಲ್ಲಕ್ಷಣಗಳನ್ನು ಚೈತನ್ಯಜಾಗ್ರತಿಯನ್ನೂ ಕಂಡು ಹರ್ಷಿಸಿ ಆಶೀರ್ವದಿಸಿದರು. ಅವರ ಕೃಪೆಯಿಂದ ಗದಿಗೆಯ್ಯ ದಕ್ಷಿಣಾದಿ-ಉತ್ತರಾದಿ ಉಭಯ ಸಂಗೀತ ವಿದ್ಯೆಯಲ್ಲಿ ನೈಪುಣ್ಯ ಪಡೆದು ತನ್ನ ಕರ್ತವ್ಯವೇನೆಂದು ಗುರುವರ್ಯ ಶ್ರೀಗಳವರನ್ನು ಬೆಸಗೊಂಡನು; ಶ್ರೀಗಳವರು ತಮ್ಮ ನೆಚ್ಚಿನ ಶಿಷ್ಯನಿಗೆ ದಿವ್ಯ ಅಂತರ್ದೃಷ್ಟಿಯನ್ನು ಕರುಣಿಸಿದರು. ಅಖಂಡ ಬ್ರಹ್ಮಚಾರಿಯಾಗಿದ್ದು ದೇಶ ಸಂಚಾರ ಮಾಡುತ್ತ ಸಂಗೀತ ವಿದ್ಯೆಯ ಪ್ರಚಾರದೊಂದಿಗೆ ಧರ್ಮಪ್ರಸಾರವನ್ನು ಮಾಡುವಂತೆ ಅಪ್ಪಣೆಮಾಡಿದರು. ಮಂತ್ರ ಮೂರ್ತಿಯಾದ ಶ್ರೀ ಪಂಚಾಕ್ಷರಿ ಗವಾಯಿಗಳು ಗುರುವಿನ ಕರುಣೆಯ ಬಲದಿಂದ ಸಂಗೀತ-ಸಾಹಿತ್ಯ ವಿದ್ಯಾಲಯವನ್ನು ಸ್ಥಾಪಿಸಿದರು. ಅವರು ಸ್ವತಃ ಗಾಯಕರಾಗಿ, ಕೀರ್ತನಕಾರರಾಗಿ, ನಾಟ್ಯಾಚಾರ್ಯರಾಗಿ, ಅಖಿಲಕರ್ನಾಟಕದಲ್ಲಿ ಸಂಚರಿಸಿ, ಭಕ್ತಿ–ಜ್ಞಾನ–ಸದಾಚಾರಗಳಿಂದ ತುಂಬಿ ತುಳುಕುವ ತಮ್ಮ ಅಮೋಘವಾದ ಕಾರ್ಯಕ್ರಮಗಳಿಂದ ಶ್ರೋತೃಗಳನ್ನು ಆನಂದಸಾಗರದಲ್ಲಿ ತೇಲಿಸುತ್ತಿದ್ದರು. ಸಾಮಾನ್ಯರಲ್ಲಿಯೂ ಭಕ್ತಿ–ಜ್ಞಾನ-ಸದಾಚಾರಗಳು ಮೈದಾಳುವಂತೆ ತಿಳಿಯಾಗಿ ಬೋಧಿಸುತ್ತಿದ್ದರು. ಇವರ ಕೋಕಿಲ ಕಂಠಕ್ಕೆ ಮರುಳಾಗಿ ಮನಸೋಲದ ಜೀವವಿರಲಿಲ್ಲ. ಒಮ್ಮೊಮ್ಮೆ ಇವರು ಬೆಳಗಿನ ಜಾವದಲ್ಲಿ ಕೀರ್ತನ–ಗಾಯನ ಮಾಡುವಾಗ ಮನದುಂಬಿ ಭಕ್ತಿಪರವಶರಾಗಿ ಹಾಡುವಾಗ, ಅವರ ಸುಮಧುರ ಕಂಠಕ್ಕೆ–ಗಾನರಸಕ್ಕೆ ಮರುಳಾಗಿ ಸಭೆಯಲ್ಲಿಯೇ ಸರ್ಪಗಳೂ ತಲೆದೂಗಿದ ಪ್ರಸಂಗಗಳನ್ನು ಕಂಡು–ಕೇಳಿದವರುಂಟು. ಶ್ರೀ ಗವಾಯಿಗಳು

ಶಿವಶರಣರ ವಚನಗಳನ್ನು ಶಿವಯೋಗಿಗಳ ಪದಗಳನ್ನು ಸರಾಗವಾಗಿ ಹಾಡಿ ನಲಿಯುತ್ತಿದ್ದರು. ಪ್ರಮಥರ ವಚನಗಳಿಗೆ ಸ್ವರಪ್ರಸ್ತಾರಗಳನ್ನು ಹಾಕಿ ಅವನ್ನು ಗೀತೆಯಂತೆ ಲಯಬದ್ಧವಾಗಿ ಹಾಡಲೂ ಬಹುದೆಂಬುದನ್ನು ಮೊಟ್ಟಮೊದಲು ಪ್ರಚಾರದಲ್ಲಿ ತಂದ ಶ್ರೇಯಸ್ಸು ಶ್ರೀ ಗವಾಯಿಗಳಿಗೇ ಸಲ್ಲಬೇಕು. ಶ್ರೀ ನಿಜ-ಗುಣಶಿವಯೋಗಿಗಳವರ 'ಕೈವಲ್ಯ ಪದ್ಧತಿ'ಯ ಗೀತೆಗಳೆಂದರೆ ಶ್ರೀ ಗವಾ-ಯಿಗಳಿಗೆ ಪಂಚಪ್ರಾಣ. ಅವರು ನಿತ್ಯದಲ್ಲಿ ಶಿವಧ್ಯಾನ-ಭಜನೆ—ಕೀರ್ತನೆ-ಅರ್ಚನೆಯ ಕಾಲದಲ್ಲಿ ನಿಜಗುಣರ ಈ ಪದವನ್ನು ಬಹು ತನ್ಮಯರಾಗಿ ಹಾಡಿ ನಲಿಯುತ್ತಿದ್ದರು:

ನೋಡಲಾಗದೆ ದೇವ ನೋಡಲಾಗದೆ
ಕೂಡೆ ನಿನ್ನ ದಿಟ್ಟ ಮೂರು
ನಾಡೆ ಲೇಸು ಮಾಡಲೆನ್ನ ॥ ಪ ॥

ಮಿಸುಕಲೀಯದೆನ್ನ ಮೋಹ
ವಿಸರವೆಂಬ ವನವನುರುಹಿ
ಭಸಿತವೆನಿಸಿ ರುದ್ರ ನಿನ್ನ
ನೊಸಲ ವಹ್ನಿನೇತ್ರದಿಂದೆ, ನೋಡ... ॥ ೧ ॥

ಕಲುಷ ತಿಮಿರ ಮುಸುಕಿ ಮುಗಿದು
ನಲಿಯದೆನ್ನ ಹೃದಯನಳಿನ-
ವಲರೆ ದಿವ್ಯರೂಪ ನಿನ್ನ
ಬಲದ ಭಾನುನಯನದಿಂದೆ, ನೋಡ.... ॥ ೨ ॥

ಕರಣ ಕುಲಚಕೋರ ತಣಿಯೆ
ಹರುಷ ಶರಧಿ ಮೀರಲೆನ್ನ
ವರದ ಶಂಭುಲಿಂಗ ವಾಮ-
ದುರ ಸುಧಾಕರಾಕ್ಷಿಯಿಂದೆ, ನೋಡ...... ॥೩॥

ನಿಜಗುಣರ ಈ ಪದ್ಯವನ್ನೇ ಅವರು ತಮ್ಮ ಜೀವನದ ಉಸಿರನ್ನಾಗಿ ಮಾಡಿಕೊಂಡು ಭಕ್ತಿಯಿಂದ ಶಿವಚಿಂತನೆ ಮಾಡಿದುದರ ಫಲವಾಗಿ ಅವರ ಅಂತ ಶ್ಚಕ್ಷು ಅರಳಿ ಅವರ ಆಚಾರವೇ ಸದಾಚಾರವಾಗಿ ಪ್ರಕಾಶಿಸ ಹತ್ತಿತು. ಅವರ ಅಗ್ನಿನೇತ್ರಪರಳಿ ಪ್ರಪಂಚದ ವಿಷಯವೆಂಬ ಕಸಕಡ್ಡಿಯನ್ನು ಸುಟ್ಟು ನಿರ್ವಿಷಯಿ

ಗಳಾಗಿ ಅಂತರ್ಮುಖಿಗಳಾದರು. ಅಲ್ಲಿ ಲಿಂಗಪೂಜಾ ನಿಷ್ಠೆಯಿಂದ ಸೂರ್ಯ ನೇತ್ರವರಳಿ ಸುಜ್ಞಾನ ಪ್ರಕಾಶದಿಂದ ಅಜ್ಞಾನ ಕತ್ತಲೆಯನ್ನು ಕಳೆದು ಲಿಂಗ ಮುಖವಾಗಿ ಜೀವನ ಸಾಗಿಸುತ್ತ ಭಕ್ತಿಯುಂಬ ಚಂದ್ರನೇತ್ರವನ್ನೂ ಅರಳಿಸಿ ಅಚ್ಚಳಿಯದ ಅಮೃತವನ್ನು ಸವಿದ ಮಹಾ ಶಿವಯೋಗಿಯಾದರು. ಅವರು ತ್ರಿಕಾಲದಲ್ಲಿಯೂ ಆತ್ಮಾನಂದದಲ್ಲಿ ಲೋಲಾಡುತ್ತಿದ್ದರು. ಆದುದರಿಂದ ಅವರು ಸದಾ ಸಂತುಷ್ಟರೂ ಹಸನ್ಮುಖಿಗಳೂ ಆಗಿದ್ದುಕೊಂಡು ತನ್ನ ಶಿಷ್ಯವೃಂದವನ್ನು ಈ ಸುಖದ ದಾರಿಯಲ್ಲಿ ನಡೆಯುವಂತೆ ಪ್ರೇರಿಸಿದರು.

ಅಲ್ಲದೇ ಅವರು ತಮ್ಮ ನಿತ್ಯಾಚರಣೆಯಲ್ಲಿ ಅಷ್ಟಾವರಣವೇ ಲಿಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮ ಎಂಬ ವೀರಶೈವರ ತತ್ವವನ್ನು ಚಾಚೂ ತಪ್ಪದೆ ಅನುಸರಿಸುತ್ತಿದ್ದರು. ಅವರು ಪ್ರತಿನಿತ್ಯವೂ ತ್ರಿಕಾಲ ಲಿಂಗ-ಪೂಜೆ ಮಾಡಿ; ಪಾದೋದಕ–ಪ್ರಸಾದಗಳನ್ನು ಮೂರ್ತಿಗಳಿಂದ ಪಡೆದು ಲಿಂಗ-ಭೋಗೋಪಭೋಗಿಯಾಗಿ ಸುಖಿಸುತ್ತಿದ್ದರು. ತಮ್ಮ ಸತ್ಯ-ಶುದ್ಧ ಕಾಯಕ ದಿಂದ ಬಂದ ಸಂಪತ್ತನ್ನು ಶಿವನಿಗರ್ಪಿಸಿ ಸಂತುಷ್ಟರಾಗಿರುತ್ತಿದ್ದರು. ಪ್ರತಿ-ಯೊಬ್ಬ ಅನಾಥ ಕುರುಡನ ಪೋಷಣೆಯಲ್ಲಿ ಶಿವನ ರೂಪವನ್ನು ತಮ್ಮ ಕರುಣಾಳು ಭಾವದಿಂದ ಕಂಡ ಮಹಾತ್ಮರಾಗಿ ಬಾಳಿದರು. ಅವರ ಜೀವನ ಈ ತೆರನಾಗಿ ಪರಮ ಪರಾರ್ಥವಾಗಿ ಸಾರ್ಥಕವಾಯಿತು.

ಶ್ರೀ ಗವಾಯಿಗಳವರು ಒಳಗಣ್ಣು ತಿಳಿಯಾದ ಮಹಾ ಬೆಳಗನ್ನು ಕಂಡು ಪರಮಪಾವನರಾಗಿದ್ದರಲ್ಲದೆ ಆ ಬೆಳಗನ್ನು ಉಳಿದ ಶಿಷ್ಯಕೋಟಿಗೂ ನೀಡಿ ಅವರನ್ನೂ ಮುಕ್ತರನ್ನಾಗಿ, ಚಿರಸುಖಿಗಳನ್ನಾಗಿ ಮಾಡುವ ಮಹೋದ್ದೇಶ ವನ್ನು ಕೃತಿಗಿಳಿಸಿದ ಮಹಾತ್ಮರು. ಶ್ರೀ ಪುಟ್ಟರಾಜ ಗವಾಯಿಗಳವರು ತಮ್ಮ ಗುರುಗಳು ತುಳಿದ ಹೆದ್ದಾರಿಯಲ್ಲಿ ನಿಷ್ಠೆಯಿಂದ ನಡೆದು ಗುರುವರ್ಯರ ಕೀರ್ತಿ ಯನ್ನು ಉಳಿಸಿ, ಬೆಳೆಸಿ, ಬೆಳಗುತ್ತಿರುವದು ಕನ್ನಡಿಗರಿಗೆ ಹೆಮ್ಮೆಯ ವಿಷಯ ವಾಗಿದೆ.

# ಪರಿಪೂರ್ಣ ಯೋಗಿ

**ಶ್ರೀ ಮ. ಘ. ಚ. ಬಸವಲಿಂಗ ಪಟ್ಟಾಧ್ಯಕ್ಷರು, ಹಿರಿಯ ಮಠ, ತೆಲಸಂಗ.**

ಕನ್ನಡ ನಾಡಿನ ರಂಗಭೂಮಿಯ ಮೇಲೆ ಅನೇಕ ಅನುಭಾವಿಗಳು ಆತ್ಮಸಾಕ್ಷಾತ್ಕಾರದ ಅಮೃತ ಪಥದಲ್ಲಿ ಅಡಿಯಿಟ್ಟು ಕೃತಾರ್ಥರಾಗಿ ಹೋಗಿರುವರು.

ಆತ್ಮ ಸಾಕ್ಷಾರದ ಬಗೆಗೆ ಸಾಧನೀಭೂತವಾದ ವಿದ್ಯೆಗೆ ಪರಾವಿದ್ಯೆಯೆಂದೂ, ಲೌಕಿಕ ಜೀವನಕ್ಕೆ ಸಾಧನೀಭೂತವಾದ ವಿದ್ಯೆಗೆ ಅಪರಾವಿದ್ಯೆಯೆಂದೂ ಉಪನಿಷತ್ಕಾರರು ವಿಂಗಡಿಸಿ ಹೇಳಿರುವರು. ನಿರುಕ್ತ, ಛಂದಸ್ಸು, ವ್ಯಾಕರಣ, ಸಂಗೀತ ಮುಂತಾದವುಗಳೆಲ್ಲವೂ ಅಪರಾ ವಿದ್ಯೆಯಲ್ಲಿಯೇ ಅಂತರ್ಭೂತವಾಗುವವು. "ಹೊಟ್ಟೆಗೆ ಕಷ್ಟಪಡುವೀ ವಿದ್ಯೆಗಳ ಕಲಿತರೆ ಏನು ಫಲ ?" ಎಂದು ಕೆಲ ಕನ್ನಡ ಕವಿಗಳು ಲೌಕಿಕ ವಿದ್ಯೆಯನ್ನು ಹೀಗಳೆದರೂ ಸಹ ಲೌಕಿಕ ವಿದ್ಯೆಯಿಲ್ಲದೆ ಅಥವಾ ಇಹಜೀವನವು ಸುಖಮಯವಾಗದೆ ಪರವನ್ನು ಸಾಧಿಸಲು ಬಾರದು. "ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು" ಎಂಬ ಬಸವಣ್ಣನವರ ಅಮೃತ ವಚನವು ಮೇಗಣ ಅಭಿಪ್ರಾಯವನ್ನೇ ಸ್ಪಷ್ಟಪಡಿಸುವದು. ಅಪರಾವಿದ್ಯೆಯಲ್ಲಿಯೂ, ಗಾನವಿದ್ಯೆಯು ಬಹಳ ಮೇಲ್ತರಗತಿಯದು. ಗಹನವಾದ ತತ್ವಜ್ಞಾನವನ್ನು ಸಹ ಸಂಗೀತದ ಮುಖಾಂತರ ಮುಮುಕ್ಷುವಿಗೆ ಸಹಜವಾಗಿ ತಿಳಿಸಲು ಬರುವದು. ಶ್ರೀಮನ್ನಿಜಗುಣ, ಶ್ರೀ ಸರ್ಪಭೂಷಣ ಮೊದಲಾದ ಮಹಾನುಭಾವರು ತತ್ವಜ್ಞಾನವನ್ನು ಹಾಡಹಬ್ಬಗಳ ಮೂಲಕ ಉಪದೇಶ ಮಾಡಿದರು.

ಪರಮ ಶಿವಭಕ್ತನಾದ ರಾವಣನು ಶಿವನ ಸಮ್ಮುಖದಲ್ಲಿ ಧನುರ್ವೀಣೆಯನ್ನು ಬಾರಿಸುತ್ತಿದ್ದನಂತೆ. ಇದಲ್ಲದೆ ಅವನು ಭೈರವಿ, ಶಂಕರಾಭರಣ ರಾಗಗಳಿಂದ ಹಾಡಲು ಶಿವನು ಅವನ ಭಕ್ತಿಭಾವಕ್ಕೆ ಮೆಚ್ಚಿ; ಆತ್ಮಲಿಂಗವನ್ನೇ ದಯಪಾಲಿಸಿದನಂತೆ. ಆ ಲಿಂಗವೇ ಈಗ ಗೋಕರ್ಣದಲ್ಲಿ ಮಹಾಬಲೇಶ್ವರ ನಾಮದಿಂದ ಮೆರೆಯುತ್ತಿರುವದು. ಗಾನವಿದ್ಯೆಯು ಶಿವನ ಸಾಕ್ಷಾತ್ಕಾರಕ್ಕೆ ಸಾಧನವಾಗಿರುವದು.

"ಗೀತಂ, ವಾದ್ಯಂ, ತಥಾ ನೃತ್ಯಂ ತ್ರಯೀ ಸಂಗೀತಮುಚ್ಯತೇ" ಎಂದು ಅಭಿಜ್ಞರು ಈ ಮೂರರ ಗುಂಪಿಗೆ ಸಂಗೀತವೆಂದು ಕರೆದಿರುವರು. ಈ

ಸಂಗೀತ ವಿದ್ಯೆಯು ಮೋಹಕವಿರುವದು. ಸಂಗೀತ ವಿದ್ಯೆಯಲ್ಲಿ ಪಾರಂಗತರಾದ ಶ್ರೀ ಪಂಚಾಕ್ಷರ ಗವಾಯಿಗಳವರು ಗಾನದೇವತೆಯ ಅಧಿದೇವತೆಯಂತೆ ಒಪ್ಪುತ್ತಿದ್ದರಲ್ಲದೆ ಅವರಲ್ಲಿ ಸಂಯಮನ ಶಕ್ತಿ, ವಿಷಯವಿರಕ್ತಿ, ಸದ್ಗುರುಭಕ್ತಿ ಮುಂತಾದ ಸದ್ಗುಣಗಳು ಆದರ್ಶಪ್ರಾಯವಾಗಿದ್ದವು.

ಶ್ರೀ. ಲಿಂ. ಮ. ನಿ. ಪ್ರ. ಹಾನಗಲ್ಲ ಶ್ರೀಗಳವರ ಕರಕಮಲ ಸಂಜಾತರಾದ ಶ್ರೀ ಪಂಚಾಕ್ಷರ ಗವಾಯಿಗಳವರು ಪರಮ ವಿರಕ್ತ ಶಿಖಾಮಣಿಗಳಂತೆ ಒಪ್ಪುತ್ತಿದ್ದರು. ನಡೆನುಡಿಗಳಲ್ಲಿ ಏಕವಾಕ್ಯತೆಯನ್ನು ಸಾಧಿಸಿದ ಶ್ರೀ ಪಂಚಾಕ್ಷರ ಗವಾಯಿಗಳವರು "ಮಾಡಲಿಲ್ಲವೆ ತಪವ" "ಪಡೆವೆ ನೀನೆಂದಿಗೆ ಪರಮುಕ್ತಿ ಸುಖವನು" "ಪರತರ ಶಿವಲಿಂಗವೆಳಸಿ ನಿನಗಾಗಿ ಕರಕಂಜದೊಳು ಕಾಣಿಸಿತ್ತು ಯೋಗಿ ಯಜಿಸು" ಮೊದಲಾದ ನಿಜಗುಣರ ಉಪದೇಶಪರವಾದ ಪದ್ಯಗಳನ್ನು ಹಾಡಿ ಕೀರ್ತನೆ ಮಾಡಿದರೆ ಶ್ರೋತೃಸಮೂಹವು ಕೇಳಿ ಪರಿವರ್ತನೆಯನ್ನು ಹೊಂದದಿರುತ್ತಿರಲಿಲ್ಲ. ಕೂಡಿದ ವಿದ್ವತ್ಸಭೆಯಲ್ಲಿ ಪರಮತೀಯರೂ ಸಹ ಶ್ರೀ ಗವಾಯಿಗಳವರ ಗಾನ, ಜ್ಞಾನಗಳಿಗೆ ಮುಗ್ಧರಾಗದೇ ಇರುತ್ತಿರಲಿಲ್ಲ.

ಶ್ರೀ ಗವಾಯಿಗಳವರ ಶಿವಲಿಂಗಪೂಜಾ ನಿಷ್ಠೆಯು ಅನುಪಮವಾದುದು. ಎಂತಹ ತೊಂದರೆಗಳು ಬಂದರೂ ಇಲ್ಲವೆ ಬೇನೆಬೇಸರಿಕೆಗಳು ಬಂದರೂ ತಮ್ಮ ಶಿವಲಿಂಗಪೂಜೆಯ ವ್ರತವನ್ನು ಮಾತ್ರ ಎಂದೂ ಬಿಡಲಿಲ್ಲ. ಶಿವಲಿಂಗಪೂಜೆಯೆಂದರೆ ಅವರಿಗೆ ಹಿಡಿಸಲಾರದಷ್ಟು ಹಿಗ್ಗು. "ಆಡಿ ಕಾಲು ದಣಿಯವು; ನೋಡಿ ಕಂಗಳು ದಣಿಯವು, ಹಾಡಿ ನಾಲಿಗೆ ದಣಿಯದು ಇನ್ನೇವೆ ಇನ್ನೇವೆ ಕೂಡಲಸಂಗಮ ದೇವ! ಉದರವ ಬಗಿದು ಹೋಗುವ ಭರವೆನಗೆ" ಎಂದು ಬಸವಣ್ಣನವರು ಹಾಡಿ ಹಾಡಿ ಹಿಗ್ಗಿ ಹಿಗ್ಗಿ ನಲಿದಾಡಿದಂತೆ ಶ್ರೀ ಪಂಚಾಕ್ಷರಿ ಗವಾಯಿಗಳವರೂ ಹಾಡಿ ಹಿಗ್ಗಿ ಲಿಂಗಪೂಜೆಯಲ್ಲಿ ತನ್ಮಯರಾಗುತ್ತಿದ್ದರು.

ಶಿವಯೋಗಮಂದಿರ ಸಂಸ್ಥೆಗೆ ಬಂದಾಗ ಒಮ್ಮೊಮ್ಮೆ ನಮ್ಮೆಲ್ಲರಿಗೆ ಸಂಗೀತಪಾಠವನ್ನು ಹೇಳುತ್ತಿದ್ದರು. ಇಂದು ಮಧ್ಯಾಹ್ನ ಪ್ರಸಾದ ಮುಗಿದಾಕ್ಷಣ ಸಂಗೀತವನ್ನು ಕಲಿಸುವೆವು ಎಂದು ಹೇಳುತ್ತಿರಲು ನಾವೆಲ್ಲರೂ ನಿಶ್ಚಿತವೇಳೆಗೆ ಹಾದೀ ಕಾಯುತ್ತ ಕೂಡ್ರುತ್ತಿದ್ದೆವು. ಗವಾಯಿಗಳು ಬರುವದು ವಿಲಂಬವಾಗಿ ಸೇವಕರನ್ನು ಕೇಳಿದರೆ ಇಂದು ಶ್ರೀ ಗವಾಯಿಗಳವರ ಪೂಜೆಗೆ ಇತಿಮಿತಿಯೇ ಇಲ್ಲ. ದಿನದಿನದ ಪೂಜೆಯ ಎರಡಷ್ಟು ವೇಳೆಯಾದರೂ ಅವರಿಗೆ ಪೂಜೆಯಲ್ಲಿ

ತೃಪ್ತಿಯಿಲ್ಲ. ಬರುವರು ಇದೀಗ ಬರುವರು ಎಂದು ಹೇಳಿ ನಮ್ಮನ್ನು ಸಂತೈಸು ತ್ತಿದ್ದರು. ಪೂಜಾಪ್ರಸಾದಗಳನ್ನು ಮುಗಿಸಿಕೊಂಡು ಬಂದು ತಂಬೂರಿಯನ್ನು ಹಿಡಿದು ಪಾಠ ಹೇಳಲು ಕೂತರೆ ಆ ಶೈಲಿಯೇ ಬೇರೆ! ಎಂತೆಂತಹ ಕಠಿಣ ರಾಗಗಳನ್ನು ಸಹ ಲಯಬದ್ಧವಾಗಿ ಹಾ ಎನ್ನುವಷ್ಟರಲ್ಲಿ ಕಲಿಸುತ್ತಿದ್ದರು. ಅವರಲ್ಲಿ ಕಲಿಸುವ ಜಾಣ್ಮೆಯು ಬಹು ವಿಲಕ್ಷಣವಾಗಿತ್ತು. ಶಿಷ್ಯವಾತ್ಸಲ್ಯವಂತೂ ಅವರಲ್ಲಿ ತುಂಬಿ ತುಂಬಿ ಹೆದ್ದೊರೆಯಾಗಿ ಭೋರ್ಗುಟ್ಟಿ ಹರಿಯುತ್ತಿತ್ತು. ಎಷ್ಟೇ ಸಿಟ್ಟಿ- ಗೆದ್ದರೂ ಅವರ ಮುಖದಿಂದ "ಛೀ ಮಂಕ ಬುದ್ಧಿಯೆಲ್ಲಿಟ್ಟಿದುವಿ! ಹೋಗು ಪಾಠ ಮಾಡು", ಎಂಬ ನಸುಗೋಪದ ನುಡಿಗಳು ಮಾತ್ರ ಹೊರಡುತ್ತಿದ್ದವು. ಅವರ. ವಾಣಿಯಲ್ಲಿ ಅಷ್ಟು ಮಾರ್ದವವಿತ್ತು. ತ್ರಿಕರಣಗಳಲ್ಲಿಯೂ ಪರಿಶುದ್ಧರವರು. ಗಾನವಿದ್ಯೆಯಲ್ಲಿ ಬಲ್ಲಿದರಿರುವದರಿಂದ ಗಾನಯೋಗಿಗಳವರು. ಜ್ಞಾನಮಾರ್ಗವನ್ನು ಸಾಧಿಸಿದದುರಿಂದ ಜ್ಞಾನಯೋಗಿಗಳವರು. ನಿಷ್ಕಾಮಕರ್ಮವನ್ನು ಆಚರಿಸಿದುದರಿಂದ ಕರ್ಮಯೋಗಿಗಳವರು. ಲಿಂಗಾನಿಷ್ಠಾಪರರಾದುದರಿಂದ ಭಕ್ತಿಯೋಗಿಗಳವರು. ಎಲ್ಲವನ್ನು ಪರಿಪೂರ್ಣವಾಗಿ ಸಾಧಿಸಿರುವದರಿಂದ ಅವರು ಪರಿಪೂರ್ಣಯೋಗಿಗಳು

# ನಾನು ಕಂಡ ಪಂಚಾಕ್ಷರ ಗವಾಯಿಗಳು

"ವ್ಯಾಕರಣ ತೀರ್ಥ", "ವಿದ್ಯಾಲಂಕಾರ", "ವಿದ್ಯಾವಾರಿಧಿ"
ಪಂ. ಚಂದ್ರಶೇಖರಶಾಸ್ತ್ರಿ ಹಿರೇಮಠ, ಹೊಳಲು.

ಶ್ರೀ ಪಂಚಾಕ್ಷರ ಗವಾಯಿಗಳ ಗಾಯನ ಸಮ್ರಾಟ್ ಇವರು ಇವರು ಸ್ಥಾಪಿಸಿದ ಶ್ರೀ ಕುಮಾರೇಶ್ವರ ಕೃಪಾಪೋಷಿತ ವೀರಶೈವ ಪುಣ್ಯಾಶ್ರಮದ ಮಹಾ ಸಂಸ್ಥೆಯ ಸುವರ್ಣಮಹೋತ್ಸವದ, ಮತ್ತು ಪುಟ್ಟರಾಜ ಗವಾಯಿಗಳ ೫೦ವರ್ಷದ ಹುಟ್ಟುಹಬ್ಬದ, ಪಂಚಾಕ್ಷರ ಗವಾಯಿಗಳ ನಾಟ್ಯಸಂಘದ ೨೫ ವರ್ಷಗಳ ಬೆಳ್ಳಿಹಬ್ಬದ ಸವಿನೆನಪಿಗಾಗಿ ಪ್ರಕಟಿಸುವ ಸ್ಮಾರಕ ಸಂಪುಟದಲ್ಲಿ ಒಂದು ಲೇಖನವನ್ನು ಬರೆಯುವ ಸುಪ್ರಸಂಗ ತಂದು ಕೊಟ್ಟುದುದಕ್ಕಾಗಿ ಸಂಸ್ಥೆಯ ಚಾಲಕರಿಗೂ ಮತ್ತು ಶ್ರೀಮನ್ನಿರಂಜನ ಹಾನಗಲ್ ಸದಾಶಿವ ಮಹಾಸ್ವಾಮಿಗಳವರಿಗೂ ಕೃತಜ್ಞನಾಗಿರುತ್ತೇನೆ.

ಶ್ರೀ ಪಂಚಾಕ್ಷರ ಗವಾಯಿಗಳು ಇಂತಹ ಕಾರ್ಯಕ್ಕೆ ಸುಪ್ರಸಂಗ ಒದಗಿದುದು ಕುಮಾರ ಮಹಾ ಶಿವಯೋಗಿವರ್ಯರ ಕೃಪೆಯೇ ಕಾರಣ. ಅವರೇ ಈ ಕಾರ್ಯಕ್ಕೆ ಹಿನ್ನೆಲೆಯಾಗಿದ್ದಾರೆ. ಹಾನಗಲ್ ಕುಮಾರ ಮಹಾಸ್ವಾಮಿಗಳವರ ಹೆಸರನ್ನೆತ್ತಿದ ಕೂಡಲೆ ಅವರು ಸಮಾಜದ ಸಲುವಾಗಿ ಮಾಡಿದ ಕಾರ್ಯಗಳು ನೆನಪಾಗಿ ರೋಮಾಂಚನಗಳೇಳುತ್ತವೆ. ಈ ದಿವ್ಯಯೋಗಿಯ ಸಮಾಜಾಭಿಮಾನವು ಉಪಮಾತೀತವಾದುದು. ಈ ಮಹಾ ಪುರುಷರು ೨೫–೩೦ ವರ್ಷಗಳವರೆಗೆ ಅವಿಚ್ಛಿನ್ನವಾಗಿ ಸಮಾಜೋದ್ಧಾರದ ಭಾರವನ್ನು ಹೊತ್ತು ಯುಗಪ್ರವರ್ತಕರಾದರು. ಸಮಾಜದ ಎಲ್ಲ ಕ್ಷೇತ್ರಗಳಲ್ಲಿ ಅತ್ಯಂತ ಪ್ರಚಂಡತರವಾಗಿ ಕ್ರಾಂತಿಯ ಜಾಗ್ರತೆ ಹುಟ್ಟಿಸಿದರು. ಈ ಮಹಾ ಶಿವಯೋಗಿಯು ಆ ಕಾಲದಲ್ಲಿ ಮುಟ್ಟಿದ್ದೆಲ್ಲ ಚಿನ್ನವಾಯಿತು. ನೋಡಿದ್ದೆಲ್ಲ ಪವಿತ್ರವಾಯಿತು. ಪರುಷಮಣಿಯು ಮುಟ್ಟಿದ ಕಬ್ಬಿಣವು ಅಪರಂಜಿಯಾಗುವಂತೆ ಕೊರಡು ಕೊನರಿತು ಕುರುಡನಿಗೆ ಕಣ್ಣು ಬಂದಿತು. ಸಮಾಜದ ದೈವ ತೆರೆಯಿತು. ಎಲ್ಲೆಡೆಯಲ್ಲಿಯೂ ಕುಮಾರ ಯೋಗಿಯ ಜಯಘೋಷವು ಪ್ರತಿಯೊಬ್ಬರ ನಾಲಿಗೆಯ ತುದಿಯಲ್ಲಿ ನಲಿದಾಡಿತು. ಆತನೊಬ್ಬ ಚರಿತ್ರ ಪವಿತ್ರ ನಾಯಕನೆಂದು ಜನರಿಗೆ ಮನದಟ್ಟಾಯಿತು. ಇಂತಹ ವರಪುತ್ರರಾದ ಅಥವಾ ಶಿಷ್ಯರತ್ನರಾದ ಪಂಚಾಕ್ಷರ ಗವಾಯಿಗಳನ್ನು ನಾನು ಕಂಡ ರೀತಿಯಲ್ಲಿ ವಾಚಕರೆದುರಿಗಿಡಲು ಸಂತೋಷಿಸುತ್ತೇನೆ.

ನಾನು ಮೊದಲು ಪಂಚಾಕ್ಷರ ಗವಾಯಿಗಳನ್ನ ಕಂಡದ್ದು ೧೯೧೪ ನೆಯ ಇಸ್ವಿಯಲ್ಲಿ ಹಾವೇರಿಯ ಹುಕ್ಕೇರಿಯ ಮಠದಲ್ಲಿ. ಅಲ್ಲಿ ಆ ಕಾಲಕ್ಕೆ ನಾನು ಸಂಸ್ಕೃತಾಧ್ಯಯನ ಮಾಡುತ್ತಿದ್ದೆನು. ಅಂದರೆ ಇಂದಿಗೆ ೫೦ ವರ್ಷಗಳ ಹಿಂದೆ. ಹಾನಗಲ್ ಮಹಾಸ್ವಾಮಿಗಳವರೇ ಕರೆದುಕೊಂಡು ಬಂದಿದ್ದರು. ಪುಟ್ಟರಾಜ ಗವಾಯಿಗಳೂ ಕೂಡ ಅದೇ ವರ್ಷ ಈ ಲೋಕದ ಬೆಳಕಿಗೆ ಬಂದದ್ದು. ಕಾಡಶೆಟ್ಟಿಯ ಹಳ್ಳಿಯ ಈ ಕುರುಡ ಬಡ ಹುಡುಗನನ್ನು ನಾಡಿನ ಸಂಗೀತ ಮತ್ತು ಕಲೆಯ ನಿಧಿಯನ್ನಾಗಿ ಮಾಡಿದ ಶ್ರೇಯಸ್ಸು ಶ್ರೀ ಕುಮಾರ ಯೋಗಿಗೆ ಸಲ್ಲುತ್ತದೆ. ಕಲೆಗಳ ಪ್ರಚಾರದಲ್ಲಿ ಈ ಕಾಡಶೆಟ್ಟಿ ಹಳ್ಳಿಯ ಹುಡುಗನೇ ನಾಡಿನ ಜಾಣಶ್ರೇಷ್ಠಿಯಾದನು. ಇದು ಮಹಾತ್ಮರ ಕೃಪೆಯಾದರೆ ಮಾನವನ ಬಾಳು ಹಸನಾಗಿ ಮನುಷ್ಯತ್ವವನ್ನು ಹೊಂದಿ ಅವನು ಪವಿತ್ರನಾಗುತ್ತಾನೆ.

ಆ ಕಾಲದಿಂದ ಮೊದಲುಮಾಡಿ ಅವರು ನನಗೆ ಪರಮ ಸ್ನೇಹಿತರಾಗಿದ್ದರು. ಇವರು ನನಗೆ ಮಾತಿನ ಸ್ನೇಹಿತರಾಗದೆ ಕೃತಿಯ ಸ್ನೇಹಿತರಾಗಿದ್ದರು. ೧೯೨೭ ನೆಯ ಇಸ್ವಿಯಲ್ಲಿ ಹೂವಿನ-ಹಡಗಲಿ ತಾಲೂಕಿನ ಮಾಗಳ ಗ್ರಾಮದಲ್ಲಿ ನನ್ನ ಎರಡನೆಯ ಲಗ್ನವಾಯಿತು. ೨೫ ಜನ ಶಿಷ್ಯರೊಂದಿಗೆ ಲಗ್ನಕ್ಕೆ ಬಂದು ಮೂರುದಿನ ಕೀರ್ತನೆಯನ್ನು ಮಾಡಿದ್ದುದು ನನಗೆ ನೆನಪಿದೆ. ಒಂದೆರಡು ಸಾರೆ ಅವರ ಶಿಷ್ಯರೊಡನೆ ಬೇರೆ ಬೇರೆ ಕಾರ್ಯಗಳ ದೆಶೆಯಿಂದ ಯಾದಗಿರಿಗೆ ಕರೆಯಿಸಿಕೊಂಡಿದ್ದೆನು. ಅವರು ಪುಟ್ಟರಾಜ ಗವಾಯಿಗಳಿಗೆ ಸಂಸ್ಕೃತಾಧ್ಯಾಯನ ಮಾಡಿಸೋಣವೇ ಎಂದು ನನ್ನನ್ನು ಯಾದಗಿರಿಯಲ್ಲಿ ಪ್ರಶ್ನಿಸಿದರು. ಸಂಗೀತಕ್ಕೆ ಸಾಹಿತ್ಯವಿದ್ದರೆ ಅದು ಬಹಳ ಜನಪ್ರಿಯವಾಗುತ್ತದೆಂದು ನಾನು ಹೇಳಿದೆನು. ಒಬ್ಬ ಶಾಸ್ತ್ರಿಗಳವರನ್ನು ತಮ್ಮ ಸಂಚಾರದಲ್ಲಿಟ್ಟುಕೊಂಡು ಮೊದಲಿನ [ಎರಡು ವರ್ಷ ಅವರ ಅಭ್ಯಾಸದ ಪರೀಕ್ಷೆಗೆ ನನ್ನನ್ನೇ ಯಾದಗಿರಿಯಿಂದ ಹಂಪೆಯ ಹತ್ತಿರ ಇರುವ ರಾಮಸಾಗರಕ್ಕೆ ಬರಮಾಡಿಕೊಂಡಿದ್ದರು. ನನ್ನಲ್ಲಿ ಯಾವಾಗಲೂ ವಿಶ್ವಾಸದಿಂದಿದ್ದರು. ಹಾನಗಲ್ ಶ್ರೀಗಳವರ ಕೃಪೆಯು ಪಂಚಾಕ್ಷರ ಗವಾಯಿಗಳ ಮೇಲೆ ಅಪಾರವಾಗಿದ್ದಿತು. ಪಾಲನಪೋಷಣಗಳೆಲ್ಲ ಅವರ ಕಡೆಗೆ ಇದ್ದ ಕಾರಣ ಪಂಚಾಕ್ಷರ ಗವಾಯಿಗಳು ಜ್ಞಾನಚಕ್ಷುಗಳಾಗಿ ಸಂಗೀತ ವಿದ್ಯೆಯ ಸಮ್ರಾಟರಾದರು. ಎಲ್ಲ ಕಲೆಗಳಲ್ಲಿ ಪ್ರಕಾಂಡ ಪಾಂಡಿತ್ಯ ಸಂಪಾದಿಸಿ ಕರ್ನಾಟಕದ ಎಲ್ಲ ಭಾಗಗಳಲ್ಲಿ ಜಾತಿ, ಮತ, ಪಂಥಗಳ ತೊಡಕಿಲ್ಲದೆ ಕುರುಡ, ಕುಂಟ, ಡೊಂಬರ ಎಂಬುವ ಭೇದವಿಲ್ಲದೆ ಅನೇಕ ಜನರನ್ನು ಪರಿಣತರನ್ನಾಗಿ ಮಾಡಿ; ಕರ್ನಾಟಕದಲ್ಲಿ ಎಲ್ಲರಿಗಿಂತಲೂ ಹೆಚ್ಚಿಗೆ ಸಂಗೀತ ವಿದ್ಯೆಯನ್ನು

ಪ್ರಚಾರ ಮಾಡಿದ ಶ್ರೇಯಸ್ಸನ್ನು ಶ್ರೀ ಪಂಚಾಕ್ಷರ ಗವಾಯಿಗಳು ಪಡೆದರು. ಸಂಗೀತದ ಹೆಸರನ್ನೆತ್ತಿದ ಕೂಡಲೇ ಪ್ರತಿಯೊಬ್ಬರಿಗೂ ಪಂಚಾಕ್ಷರ ಗವಾಯಿಗಳ ನೆನಪಾಗುತ್ತದೆ. ಅವರ ಜನ್ಮ ಸಾರ್ಥಕವಾದುದು; ಕುಮಾರ ಗುರುವಿನ ಆಜ್ಞಾಧಾರಕರಾಗಿ ಅವರ ಅಪ್ಪಣೆಯಾದರೆ ಸಾಕು; ಕಾರ್ಯಕ್ಕೆ ಸಿದ್ಧರಾಗುತ್ತಿದ್ದರು ತಮ್ಮ ಗುರುವಿನ ಆಚಾರ ನಿಷ್ಠತೆಯನ್ನು ಅಳವಡಿಸಿಕೊಂಡು ಲಿಂಗ-ನಿಷ್ಠಾಪರರಾಗಿ ಬ್ರಹ್ಮಚರ್ಯ ವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸಿ; ತಮ್ಮ ಪವಿತ್ರವಾದ ಬಾಳನ್ನು ಸರಿಯಾಗಿ ನಡೆಯಿಸಿಕೊಂಡು ಲಿಂಗಪೂಜೆಯಲ್ಲಿಯೇ ಲಿಂಗೈಕ್ಯರಾದದ್ದು ಸಾಮಾನ್ಯವಾದ ಮಾತಲ್ಲ. ಇಂತಹ ಶ್ರೇಷ್ಠ ಗುಣಗಳನ್ನು ಅಳವಡಿಸಿಕೊಂಡು ನೂರಾರು ಜನ ಶಿಷ್ಯರಿಗೆ ಅನ್ನದಾನ, ವಸ್ತ್ರದಾನ, ವಿದ್ಯಾ-ದಾನಗಳನ್ನು ಮಾಡುತ್ತ ತಮ್ಮ ಗುರುವಿನ ಧ್ಯಾನದಲ್ಲಿ ಮಗ್ನರಾಗಿ, ಶಿವಯೋಗ ಮಂದಿರವನ್ನು ಕನವರಿಸುತ್ತ; ತಮ್ಮ ಜನ್ಮದ ಚರಮಗುರಿಯನ್ನು ಮುಟ್ಟಿದ ಪಂಚಾಕ್ಷರ ಗವಾಯಿಗಳೇ ಧನ್ಯರು. ವಿದ್ಯೆ ಇದ್ದರೆ ಆಚರಣೆ ಇರುವುದಿಲ್ಲ; ಆಚಾರವಿದ್ದರೆ ವಿದ್ಯೆ ಇರುವುದಿಲ್ಲ. ಇವೆರಡನ್ನೂ ಸಂಪಾದಿಸಿ ಜನಸಮುದಾಯಕ್ಕೆ ಮಾರ್ಗದರ್ಶಕರಾದರು. ಪಂಚಾಕ್ಷರ ಗವಾಯಿಗಳು ನೇತ್ರಗಳಿಲ್ಲದಿದ್ದರೂ ಇಂತಹ ಶ್ರೇಷ್ಠ ಗುಣಗಳನ್ನು ದೊರಕಿಸಿ ಕನ್ನಡನಾಡಿನ ಮೂಲೆ ಮೂಲೆಗಳಲ್ಲಿಯೂ ಸಂಚರಿಸಿ ಪ್ರಚಂಡತರವಾಗಿ ತಮ್ಮ ವಿದ್ಯೆಯನ್ನು ತಮ್ಮ ಶಿಷ್ಯರಲ್ಲಿ ಪ್ರಸಾರ ಮಾಡಿದರು. ಅವರ ನೂರಾರು ಶಿಷ್ಯರು ದಿವ್ಯ ನಕ್ಷತ್ರಗಳಾಗಿ ಕರ್ನಾಟಕದ ಆಕಾಶದಲ್ಲಿ ಪ್ರಕಾಶಮಾನರಾಗಿ; ಗುರುವಿನ ಗೌರವವನ್ನು ಕಾಪಾಡುತ್ತಲಿದ್ದಾರೆ. ಪಂಚಾಕ್ಷರ ಗವಾಯಿಗಳ ಶಿಷ್ಯ ಸಂಪತ್ತಿನ ವಿಶ್ಲೇಷಣೆ ಮಾಡದೆ ಈ ಲೇಖನವನ್ನು ಮುಗಿಸಲಾರೆನು.

## ಗವಾಯಿಗಳ ಶಿಷ್ಯಸಂಪತ್ತು

ಲೋಕದಲ್ಲಿ ಬೇರೆ ಬೇರೆ ಜನಗಳಿಗೆ ಬೇರೆ ಬೇರೆ ತರಹದ ಸಂಪತ್ತುಗಳಿರುತ್ತವೆ. ಆದರೆ ಪಂಚಾಕ್ಷರ ಗವಾಯಿಗಳಿಗೆ ಶಿಷ್ಯಸಂಪತ್ತು ಅಪಾರವಾದುದಾಗಿರುತ್ತದೆ. ಇವರಿಂದಲೂ ಪಂಚಾಕ್ಷರ ಗವಾಯಿಗಳವ ಗೌರವ ಕನ್ನಡ ನಾಡಿನಲ್ಲಿ ಬೆಳಗುತ್ತಲಿದೆ. ಇವರ ಶಿಷ್ಯರ ಸಂಖ್ಯೆ ಬಹಳವಾಗಿರುತ್ತದೆ. ಅವರೆಲ್ಲರ ಹೆಸರನ್ನಾಗಲಿ ಯೋಗ್ಯತೆಯನ್ನಾಗಲಿ ಬರೆಯುವುದು ಶಕ್ಯವಿಲ್ಲದಿದ್ದರೂ ಕೆಲವರ ಹೆಸರುಗಳನ್ನು ಮಾತ್ರ ಬರೆಯುತ್ತೇನೆ. ಅವರ ಶಿಷ್ಯರಲ್ಲಿ ಅನೇಕರು ನನಗೆ ಪರಿಚಿತರಿರುತ್ತಾರೆ. ಈ ಶಿಷ್ಯರೆಲ್ಲ ಒಂದೊಂದು ಕಾರ್ಯದಲ್ಲಿ ತೊಡಗಿರುತ್ತಾರೆ. ಕೆಲವರು ಹೈಸ್ಕೂಲುಗಳಲ್ಲಿಯೂ ಬೇರೆ ಬೇರೆ ಸಂಸ್ಥೆಗಳಲ್ಲಿಯೂ ಅಧ್ಯಾಪಕರಾಗಿ

ರುತ್ತಾರೆ. ಕೆಲವರು ಕೀರ್ತನಕಾರರಾಗಿರುತ್ತಾರೆ. ಕೆಲವರು ರೇಡಿಯೋ ಮುಂತಾದ ಸ್ಥಳಗಳಲ್ಲಿ ತೃಪ್ತಿಕರವಾಗಿ ಕೆಲಸ ಮಾಡುತ್ತಾರೆ; ಅನೇಕ ರೀತಿಯಿಂದ ಸಂಗೀತ ವಿದ್ಯೆಯ ಪ್ರಚಾರ ಮಾಡುತ್ತಲಿದ್ದಾರೆ. ಕೆಲವರ ಹೆಸರುಗಳನ್ನು ನೋಡೋಣ. ಇಂತಹ ಶಿಷ್ಯರಲ್ಲಿ ಮೊದಲನೆಯ ಶಿಷ್ಯರತ್ನರು ಪುಟ್ಟರಾಜ ಗವಾಯಿಗಳು. ಪಂಚಾಕ್ಷರ ಗವಾಯಿಗಳು ಆಜನ್ಮ ಬ್ರಹ್ಮಚಾರಿಗಳಾದರೂ ಅವರ ವಿದ್ಯೆಗೆ ಪುಟ್ಟರಾಜ ಗವಾಯಿಗಳೇ ವಾರಸದಾರರಾದರು. ಇವರು ಗುರುವಿನಲ್ಲಿ ನಿಷ್ಠಾಪರರಾಗಿ– ಪುಟ್ಟರಾಜರೆಂಬುವ ಹೆಸರಿದ್ದರೂ ವಿದ್ಯೆಯಲ್ಲಿ ಬೃಹತ್ತರರಾಗಿ, ಗಾನ ಕಲಾಸಾರ್ವಭೌಮರಾಗಿ, ಹಿಂದೀ, ಕನ್ನಡ, ಸಂಸ್ಕೃತ ಸಾಹಿತ್ಯಗಳಲ್ಲಿ ವಿಶಾರದರಾಗಿ ಅನೇಕ ಗ್ರಂಥಗಳನ್ನು ಬರೆದು ಶ್ರೀ ವೀರೇಶ್ವರ ಪುಣ್ಯಾಶ್ರಮಕ್ಕೆ ಆಧಾರ ಸ್ತಂಭರಾಗಿ, ಕುಮಾರ ಪೋಷಿತ ನಾಟಕ ಸಂಘಕ್ಕೆ ಮೂಲಾಧಾರರಾಗಿ, ನೂರಾರು ವಿದ್ಯಾರ್ಥಿಗಳಿಗೆ ಭಿನ್ನಭೇದವಿಲ್ಲದೆ ಅನ್ನದಾನ, ವಿದ್ಯಾದಾನ ಮಾಡುತ್ತ ಕನ್ನಡ ನಾಡಿನಲ್ಲಿ ಪ್ರಖ್ಯಾತರಾಗಿ ತಮ್ಮ ನಿತ್ಯಾಚರಣೆಯನ್ನು ತಮ್ಮ ಗುರುಗಳಂತೆ ನಡೆಯಿಸುತ್ತ ಪಂಚಾಕ್ಷರ ಗವಾಯಿಗಳ ಚರಿತ್ರೆ ಕರ್ನಾಟಕದಲ್ಲಿ ಬೆಳಗುವಂತೆ ಮಾಡುತ್ತಲಿರುವ ಪುಟ್ಟರಾಜರಂತಹ ವರಪುತ್ರರನ್ನು ದೊರಕಿಸಿದ ಪಂಚಾಕ್ಷರ ಗವಾಯಿಗಳೇ ಧನ್ಯರು. ಇಂತಹ ಪುತ್ರರಾದ ಪುಟ್ಟರಾಜ ಗವಾಯಿಗಳ ೫೦ವರ್ಷದ ಹಬ್ಬವೂ ಕೂಡ ಇದೇ ಕಾಲಕ್ಕೆ ಬಂದುದು ಅತ್ಯಂತ ಆನಂದದಾಯಕವಾದುದಾಗಿದೆ. ಇವರ ಶತಸಂವತ್ಸರದ ಜಯಂತಿಯು ಕೂಡ ನಡೆದು ಕನ್ನಡನಾಡಿನ ಸಂಗೀತ, ಸಾಹಿತ್ಯ ಕಲೆಗಳ ಅದ್ಭುತ ಪ್ರಚಾರ ಮಾಡುವಂತಹ ಶಕ್ತಿಯನ್ನು ದೇವರು ಅವರಿಗೆ ದಯಪಾಲಿಸಲೆಂದು ಹಾರೈಸುತ್ತೇನಲ್ಲದೆ ಇಂತಹ ಶಿಷ್ಯರತ್ನ ಅಥವಾ ಪುತ್ರರತ್ನರನ್ನು ಪಡೆದಂತಹ ಪಂಚಾಕ್ಷರ ಗವಾಯಿಗಳೇ ಮಹಾ ಭಾಗ್ಯಶಾಲಿಗಳೆಂದು ಬಗೆಯುತ್ತೇನೆ.

ಶ್ರೀ ಬಸವರಾಜ 'ರಾಜಗುರು' ಇವರು ಪಂಚಾಕ್ಷರ ಗವಾಯಿಗಳ ಶಿಷ್ಯರಲ್ಲಿ ಅತ್ಯಂತ ಪ್ರಕಾಶಮಾನರಾಗಿ ಸಂಗೀತ ವಿದ್ಯೆಯ ಸಾರದಾಗಿ ಸಾವಿರಾರು ಜನಗಳನ್ನು ಸಂತೋಷ ಸಾಗರದಲ್ಲಿ ಮುಳುಗಿಸುವ ಶಕ್ತಿಯುಳ್ಳವರಾಗಿದ್ದಾರೆ. ಪಂಚಾಕ್ಷರ ಗವಾಯಿಗಳಿಗೆ ಇಂತಹ ಶಿಷ್ಯರಿರುತ್ತಾರೆಂಬುವುದು ಹೆಮ್ಮೆಯ ಮಾತಾಗಿರುತ್ತದೆ. ಚಿತ್ತರಗಿಯ ಗಂಗಾಧರ ಶಾಸ್ತ್ರಿಗಳು ಪಂಚಾಕ್ಷರ ಗವಾಯಿಗಳ ಶಿಷ್ಯರಲ್ಲಿ ಮೇಧಾವಿಗಳಾಗಿ, ಗಾಯನವಿಶಾರದರಾಗಿ, ಕೀರ್ತನಾಚಾರ್ಯರಾಗಿ ನಾಟ್ಯಕಲಾ ನಿಪುಣರಾಗಿ, ಪುರಾಣರತ್ನರಾಗಿ ಕಾರ್ಯ ಮಾಡುತ್ತಲಿದ್ದಾರೆ. ಜಂಬಲದಿನ್ನಿ ಸಿದ್ಧರಾಮ ಗವಾಯಿಗಳು ಗಾಯನಪಟುಗಳಾಗಿ ತಮ್ಮ ವಿದ್ವತ್ಪ್ರ-

ತಿಭೆಯಿಂದ ಜನಗಳನ್ನು ತಣಿಸುತ್ತಲಿದ್ದಾರೆ. ಇವರನ್ನು ಪಂಚಾಕ್ಷರ ಗವಾಯಿಗಳಲ್ಲಿ ಅಭ್ಯಾಸ ಮಾಡಲಿಕ್ಕೆ ಯಾದಗಿರಿಯಿಂದ ನಾನೇ ಕಳಿಸಿದ್ದುದು ನೆನಪಿನಲ್ಲಿದೆ. ಪಂಚಾಕ್ಷರ ಗವಾಯಿಗಳ ಶಿಷ್ಯರಲ್ಲಿ ಹಿರಿಯರಾದ ಗದಿಗೆಪ್ಪ ಗವಾಯಿಗಳು ಕವತಗಿ, ಶಂಕರರಾವ್ ದೀಕ್ಷಿತರು, ಸದಾಶಿವಯ್ಯನವರು ಹಾಲಿಗಿ ಮರುಳ, ಜಯದೇವ ಗವಾಯಿಗಳು ಲಕಮಾಪುರ, ಸದಾಶಿವಾರ್ಯ ಮರುಳ, ಅನ್ನ-ದಾನಯ್ಯ ಹಿರೇಮಠ ಇವರೆಲ್ಲರೂ ಒಂದೊಂದು ಕಲೆಯಲ್ಲಿ ಪರಿಣತರಾಗಿ ಪ್ರಖ್ಯಾತರಾಗಿರುತ್ತಾರೆ ಶಿವಲಿಂಗಯ್ಯ ಗವಾಯಿಗಳು ಪುರಾಣಿಕರು, ಮೃತ್ಯುಂಜಯ ಗವಾಯಿ ಪುರಾಣಿಕ, ಚಂದ್ರಶೇಖರಸ್ವಾಮಿ ಪುರಾಣಿಕ, ಬಸವರಾಜ ಪುರಾಣಿಕ ಈ ಪುರಾಣಿಕ ಚತುಷ್ಟಯರು ಪಂಚಾಕ್ಷರ ಗವಾಯಿಗಳ ಶಿಷ್ಯರೆಂಬುವ ಹೆಸರನ್ನು ಸಾರ್ಥಕ ಮಾಡಿಕೊಂಡು ನಿರಂತರ ಕಾರ್ಯದಲ್ಲಿ ತೊಡಗಿರುತ್ತಾರೆ. ಗುರುಬಸ-ವಾರ್ಯರು ಹಿರೇಮಠ, ದೊಡ್ಡಬಸವಾರ್ಯರು ಜಾಲೀಬೆಂಚ ಇವರಿಬ್ಬರೂ ಪಂಚಾಕ್ಷರ ಗವಾಯಿಗಳಲ್ಲಿ ಅಧ್ಯಯನ ಮಾಡಿ ಪ್ರಕಾಶಮಾನರಾಗಿ ಕಾರ್ಯ ಮಾಡುವ ಶಕ್ತಿಯನ್ನು ಸಂಪಾದಿಸಿರುತ್ತಾರೆ. ಆರ್ .ವ್ಹಿ. ಶೇಷಾದ್ರಿ 'ಗಾಯನಗಂಗಾ' ಪತ್ರಿಕೆಯ ಸಂಪಾದಕರಾಗಿ ಬೆಂಗಳೂರಿನಲ್ಲಿ ಗವಾಯಿಗಳ ಶಿಷ್ಯರೆಂದು ಪ್ರಖ್ಯಾತ-ರಾಗಿ ಗುರುಗಳಲ್ಲಿ ನಿಷ್ಠೆಯಿಂದ ಇರುತ್ತಾರೆ. ಚನ್ನಬಸಯ್ಯನವರು ಜೇಕಿನಕಟ್ಟಿಮಠ, ಮೃಡದೇವ ಗವಾಯಿಗಳು. ಶಿವಮೂರ್ತಿಸ್ವಾಮಿಗಳು, ರಂಗಪ್ಪ ಗುಡೂರು, ಪ್ರಭಯ್ಯ ಸಾಲೀಮಠ, ಬಸವರಾಜ ತಾಳಿಕೇರಿ, ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಮೊದಲಾದವರು ಪ್ರಮುಖರಾಗಿರುತ್ತಾರೆ. ಇವರೆಲ್ಲರೂ ಸಂಗೀತ ವಿದ್ವಾಂಸರಾಗಿ ಅನೇಕ ರೀತಿಯಿಂದ ಸೇವೆಯನ್ನು ಸಲ್ಲಿಸುತ್ತಿರುತ್ತಾರೆ. ಇಂತಹ ಶಿಷ್ಯಸಂಪತ್ತನ್ನು ಪಡೆದ ಪಂಚಾಕ್ಷರ ಗವಾಯಿಗಳೇ ಧನ್ಯರು. ಇನ್ನೂ ಅನೇಕರು ವಿವಿಧ ವಾದ್ಯ ಗಳಲ್ಲಿ ಪಾರಂಗತರಾಗಿ ಹೆಸರುವಾಸಿಗಳಾಗಿರುತ್ತಾರೆ.

ಪಂಚಾಕ್ಷರ ಗವಾಯಿಗಳು ಶಿಷ್ಯವಾತ್ಸಲ್ಯಪೂರ್ಣರಾಗಿ ಅಧ್ಯಾಪನ ಮಾಡಿದ್ದುದರಿಂದಲೇ ಇಂತಿಷ್ಟು ಜನರು ಸಂಗೀತ ವಿದ್ವಾಂಸರಾದರು.

ಅವರು ಸ್ಥಾಪಿಸಿದ ನಾಟಕ ಸಂಸ್ಥೆಯೂ ಕೂಡ ೨೫ ವರ್ಷ ಕಳೆದು ರಜತ ಮಹೋತ್ಸವ ಮಾಡಿಸಿಕೊಳ್ಳುವ ಸುಸಂಧಿಯನ್ನು ಪಡೆದುದು ಅತ್ಯಂತ ಸಂತೋಷದ ಸಂಗತಿಯಾಗಿರುತ್ತದೆ. ಈ ನಾಟಕ ಸಂಘದ ಮುಖಾಂತರ ಧಾರ್ಮಿಕ ಸಂಸ್ಕೃತಿಯ ಅನೇಕ ನಾಟಕಗಳು ಕರ್ನಾಟಕದಲ್ಲಿ ಮೇಲ್ಮೆಯನ್ನು ಹೊಂದಿರುತ್ತವೆ. ಹೇಮರಡ್ಡಿ

ಮಲ್ಲಮ್ಮನ ನಾಟಕವೊಂದೇ ಮೂರುನೂರು ಸಾರೆ ಒಂದೇ ಗದುಗಿನಲ್ಲಿ ನಡೆದು ಲಕ್ಷಾಂತರ ಜನಗಳಿಗೆ ತೃಪ್ತಿಯನ್ನುಂಟುಮಾಡಿದೆ.

ಶ್ರೀ ಪಂಚಾಕ್ಷರ ಗವಾಯಿಗಳು ಸ್ಥಾಪಿಸಿದ ವೀರೇಶ್ವರ ಪುಣ್ಯಾಶ್ರಮ ಸಂಸ್ಥೆಯೂ, ಅವರಿಂದಲೇ ಸ್ಥಾಪಿಸಲ್ಪಟ್ಟ ನಾಟ್ಯಸಂಘವೂ, ಅವಿಚ್ಛಿನ್ನವಾಗಿ ನಡೆದು ಕನ್ನಡ ನಾಡಿನ ಕಲೆಗಳನ್ನೆಲ್ಲ ಅಭಿವೃದ್ಧಿಗೊಳಿಸಿ ಅಜರಾಮರ ಕೀರ್ತಿಯನ್ನು ಗಳಿಸಲೆಂದು ಹಾರೈಸಿ ಪರಮಾತ್ಮನಾದ ಪರಶಿವನು ಶ್ರೀ ಪುಟ್ಟರಾಜ ಗವಾಯಿಗಳಿಗೆ ದೀರ್ಘಾಯುಷ್ಯ ಕೊಡಲೆಂದು ಅಪೇಕ್ಷಿಸುತ್ತೇನೆ.

# ಯುಗಪುರುಷ ಹಾನಗಲ್ ಕುಮಾರೇಶ

ಶ್ರೀ ಪಂಚಾಕ್ಷರಿ, ಹಿರೇಮಠ, ಧಾರವಾಡ

ಮಾನವನ ಜೀವನ ಅನೈಸರ್ಗಿಕವಾದಾಗ, ಬದುಕಿನಲ್ಲಿ ವಿಷವೇ ತುಂಬಿ ಬಂದಾಗ, ನೈತಿಕ ಹಾಗೂ ಮಾನಸಿಕ ಅಧೋಗತಿಯಾದಾಗ, ಸತ್ಯವಂತರು, ನೀತಿವಂತರು ಬದುಕುವದೇ ಸಾಧ್ಯವಿಲ್ಲ ಈ ಪರಿಸರದಲ್ಲಿ, ಎನ್ನುವ ಕಾಲದಲ್ಲಿ ಓರ್ವ ಮಹಿಮಾಪುರುಷನ ಉದಯವಾಗುತ್ತದೆ. ಬಹು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದ ನಂಬಿಕೆಯಿದು. ಗೀತೆಯಲ್ಲಿ ಶ್ರೀಕೃಷ್ಣನ ಮಾತೂ ಈ ನಂಬಿಕೆಗೆ ಪೂರಕವಾಗಿ ಬರುತ್ತದೆ. "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ...."

ಧರ್ಮದಲ್ಲಿ ಗ್ಲಾನಿಯುಂಟಾದಾಗ ನಾನು ಮತ್ತೆ ಬಂದು ಎಲ್ಲವನ್ನೂ ಸರಿಪಡಿಸುತ್ತೇನೆ— ಎನ್ನುವ ಆಶ್ವಾಸನ ಈ ಮಾತಿನಲ್ಲಿದೆ.

ಈ ಶತಮಾನದ ಪೂರ್ವಾರ್ಧದಲ್ಲಿ ಇಂಥ ಕಾಲ, ಇಂಥ ಪರಿಸ್ಥಿತಿ ಈ ನಾಡಿನಲ್ಲಿತ್ತು. ಪ್ರತ್ಯೇಕವಾಗಿ ವೀರಶೈವ ಸಮಾಜ ತನ್ನ ಅಪೂರ್ವವಾದ ಸಂಸ್ಕೃತಿ, ಸಂಸ್ಕಾರ, ಆಚಾರ, ವಿಚಾರಗಳನ್ನು ಕಳೆದುಕೊಂಡು ಯಾವ ಯಾವುದೋ ದಾರಿಯನ್ನು ಅನುಸರಿಸುವ ಸ್ಥಿತಿಯಲ್ಲಿತ್ತು. ವಿಶ್ವಮಾನ್ಯವಾಗ ಬಲ್ಲಂಥ ಭವ್ಯ ಸಂಸ್ಕೃತಿಯ ಧರ್ಮದ ಹಿರಿಮೆಯನ್ನು ಪಡೆದ ಈ ಜನಾಂಗ ಸಂಕುಚಿತ ಮನೋಭಾವನೆಗೆ ಮಾರುಹೋಗಿ; ಭವ್ಯ ಪರಂಪರೆಯನ್ನು ಮರೆತು ಜೀವನ ಸತ್ವವನ್ನೇ ಕಳೆದುಕೊಂಡಿತು.

ಭೌತಿಕ, ಆಧ್ಯಾತ್ಮಿಕ, ತಾತ್ವಿಕ, ಸಾಮಾಜಿಕ ಈ ಎಲ್ಲ ಕ್ಷೇತ್ರದಲ್ಲಿಯೂ ಒಂದು ರೀತಿಯ ಗ್ಲಾನಿಯುಂಟಾದ ಒಂದು ಸಂಧಿಕಾಲ. ಓರ್ವ ಸಾಮಾನ್ಯ ಮನುಷ್ಯನಿಂದ ಈ ಕಾಲದ ಪರಿವರ್ತನೆ ಸಾಧ್ಯವಿರಲಿಲ್ಲ. ಅಲ್ಲಿ ಕೇವಲ ಸುಧಾರಣೆ ಸಾಲದು. ಪೂರ್ಣ ಪರಿವರ್ತನೆಯ ಅವಶ್ಯಕತೆಯಿತ್ತು.

ಹನ್ನೆರಡನೆಯ ಶತಮಾನದಲ್ಲಿಯೂ ಹೀಗೇ ಇತ್ತು. ಪರಸ್ಪರ ದ್ವೇಷ, ಜಾತಿ- ಪಂಥಗಳಲ್ಲಿ ಜಗಳಗಳು, ನಡೆಯೊಂದು, ನುಡಿಯೊಂದು, ಆಚಾರಕ್ಕೂ, ವಿಚಾರಕ್ಕೂ ಸಂಬಂಧವಿಲ್ಲದ ಬದುಕು, ಜೀವನವೇ ಅಪಹಾಸ್ಯ-

ಕ್ಕೀಡಾದ ಸ್ಥಿತಿ. ಆಗ ಪರಿಹಾರ ನೀಡಿ, ಜನ ಬದುಕುವಂತೆ ಉದಾತ್ತದ ದಾರಿಯಲ್ಲಿ, ಶಿವ ಮೆಚ್ಚುವ ರೀತಿಯಲ್ಲಿ ಜೀವನ ಸಾಗಿಸುವಂತೆ ಮಾಡಿದಾತ ನಮ್ಮ ಕೂಡಲ ಸಂಗನ ಪರಮಭಕ್ತ ಬಸವಣ್ಣ. ಕೂಡಲ ಸಂಗನ ಸಾಕ್ಷಿಯಾಗಿ ವಿಶ್ವದಲ್ಲಿಯೇ ನಡೆಯಲಾರದಂತಹ, ಮಹೋನ್ನತವಾದಂತಹ, ಮಾನವ ಜೀವನದ ಹಿತಕ್ಕಾಗಿ ಕ್ರಾಂತಿಯನ್ನೆಸಗಿದನು ಎಮ್ಮ ಭಕ್ತಿಪ್ರಿಯ ಬಸವಣ್ಣ.

ಬಸವಣ್ಣನ ಈ ಪವಿತ್ರ ದಾರಿಯನ್ನು, ಬೆಳಕಿನ ದಾರಿಯನ್ನು ಈ ಶತಮಾನದ ಪೂರ್ವಾರ್ಧದಲ್ಲಿ ಜನ ಬದುಕಲೆಂದು, ಹಿತವಾಗಿಪ್ಪ, ಶಿವಂಗೆ ಪ್ರಿಯವಾಗಿಪ್ಪ ಜೀವನ ನಡೆಸಲೆಂದು ತಂದಾತ ನಮ್ಮ ಯುಗಪುರುರುಷ ಹಾನಗಲ್ ಕುಮಾರೇಶ. ಈ ದಾರಿ ಕಂಡುಹಿಡಿಯಲು ಅವರು ಪಟ್ಟ ಪರಿಶ್ರಮ, ಅವರು ಎಸಗಿದ ತಪಸ್ಸು ಅಷ್ಟಿಷ್ಟಲ್ಲ. ಅದು ಮಾತಿಗೆ ಸಿಲುಕದು. ಕಲ್ಪನೆಗೆ ಒಳ ಪಡದು. ಬದುಕಿನಲ್ಲಿ, ಜನಜೀವನದಲ್ಲಿ ಹೊಸ ಮನ್ವಂತರ, ಹೊಸ ಚೇತನ ವನ್ನೇ ತಂದರು. ಅದು ಅವರ ತಪಸ್ಸಿನ ಸಿದ್ಧಿ. ಸಮಾಜಕ್ಕೆ ನಾಡಿಗೆ ತಾವು ಜೀವನದುದ್ದಕ್ಕೂ ತಪಸ್ಸುಮಾಡಿ; ಪಡೆದ ಸಿದ್ಧಿಯನ್ನು ತಾಯವಾತ್ಸಲ್ಯದಿಂದ ಸಮಾಜದ ಶಿಶುವಿಗೆ ನೀಡಿ ಅದು ಆರೋಗ್ಯದಿಂದಿರುವಂತೆ, ಸುಖವಾಗಿ ಬೆಳೆಯು ವಂತೆ ಮಾಡಿದರು. ಯಾರೂ ಮಾಡಲಾರದ, ಇನ್ನುಳಿದವರಿಗೆ ಅಸಾಧ್ಯವಾದ ಅದ್ಭುತವಾದ ಈ ಕೆಲಸ ಮಾಡಿದರಂತಲೇ ಕುಮಾರ ಸ್ವಾಮಿಗಳು, ಹಾನಗಲ್ ಈ ಯೋಗಿಗಳು ನಾಡ ಯೋಗಿಯಾದರು, ಯುಗಪುರುಷರಾದರು.

ಈ ಯೋಗಿಪುಂಗವ ಪ್ರಕೃತಿ ಪ್ರಿಯ, ಸಂಗೀತ ಪ್ರಿಯ, ಕಾವ್ಯ ಪ್ರಿಯ ಎಲ್ಲಕ್ಕೂ ಹೆಚ್ಚಾಗಿ ಮಾನವತಾಪ್ರಿಯ. ಈತ ತುಳಿದ ನೆಲ ಪಾವನ ವಾಯ್ತು, ನಿಂತ ನೆಲ ಪುಣ್ಯಕ್ಷೇತ್ರವಾಯ್ತು. ಆಡಿದ ಮಾತು ಬೆಳಕಾಯ್ತು, ನೋಡಿದ ನೋಟ ಶಿವನ ಕೂಟವಾಯಿತು. ಇವರು ನಡೆದಲ್ಲೆಲ್ಲಾ ಬೆಳಕಿನ ಹೆಜ್ಜೆ ಮೂಡಿದವು. ಆಡಿದುದು ನಡೆಯಾಯಿತು, ನಡೆದುದು ನುಡಿಯಾಯಿತು. ನಡೆನುಡಿಯೊಂದುಗೊಳಿಸಿದಾತ ನಮ್ಮ ಹಾನಗಲ್ ಕುಮಾರಯೋಗಿ. ಜ್ಞಾನ, ಕ್ರಿಯೆಯಾಯಿತು, ಕ್ರಿಯೆ ಜ್ಞಾನವಾಯಿತು. ಇಂಥ ಮಹೋನ್ನತ ಬದುಕನ್ನು ಬಾಳಿದ ಶ್ರೀ ಕುಮಾರಸ್ವಾಮಿಗಳು ಬಡತನದ ಬವಣೆಯಲ್ಲಿ, ಕಷ್ಟಕಾರ್ಪಣ್ಯದಲ್ಲಿ ಸಿಲುಕಿದ ಮನೆತನದಲ್ಲಿ ಜನ್ಮತಾಳಿದರು. ಮಹಿಮಾಪುರುಷರ ಜನನವೆ ಹೀಗೇನೋ ! ಕ್ರಿಸ್ತನ ಜನನದ ಘಟನೆ, ಪರಿಸ್ಥಿತಿ ನೋಡಿದಾಗಲೂ ನಮಗೆ ಈ ಭಾವನೆಯೇ ತೋರುತ್ತದೆ. ಬೆತ್ಲೆಹೇಮಿನ ದನಕಟ್ಟುವ ಕೊಟ್ಟಿಯಲ್ಲಿ ಜನಿಸಿದ ಆ ಮಗು ವಿಶ್ವವಂದ್ಯ, ಮಹಾಪುರುಷ, ದೇವಮಾನವನಾಗುತ್ತಾನೆಂದು ಯಾರು

ನಂಬಿದ್ದರು ? ಬಾಗೇವಾಡಿಯಲ್ಲಿ ಜನಿಸಿ, ಕೂಡಲ ಸಂಗನ ಭಕ್ತಿಯಲ್ಲಿ ನಿರತ ನಾದ ಬಸವಣ್ಣ ವಿಶ್ವವೇ ಅಚ್ಚರಿಪಡುವಂತಹ ಬದುಕನ್ನು, ತತ್ವವನ್ನು ಆಚಾರವನ್ನು, ಮಾನವ ಧರ್ಮವನ್ನು ಈ ಜಗತ್ತಿಗೆ ನೀಡುತ್ತಿದ್ದನೆಂದು ಯಾವಾತ ಭಾವಿಸಿದ್ದ ? ವಿಷವನಿಕ್ಕಿದರೂ "ನಿಮಗೆ ಕಲ್ಯಾಣವಾಗಲಿ" ಎನ್ನುತ್ತ ವಿಷಕುಡಿದು ಸಾಕ್ರೆಟಿಸನ ಜನನದಲ್ಲಿ ಯಾರಾದರೂ ಭವಿಷ್ಯ ನುಡಿದಿದ್ದರೇ ಆತನ ಭವ್ಯ ಜೀವನವನ್ನು ಕುರಿತು ? ಸಾಮಾನ್ಯರಾದ ನಮ್ಮಂತೆಯೇ ಜನಿಸಿ, ಬೆಳೆದರೂ ಇವರು ಅಸಮಾನ್ಯರಾದವರು, ಅಪ್ರಮಾಣರಾದವರು.

ಕನ್ನಡ ನಾಡಿನ ಸಾಂಸ್ಕೃತಿಕ ಕೇಂದ್ರವಾದ ಧಾರವಾಡ ಜಿಲ್ಲೆಯ ರಾಣೇಬೇನ್ನೂರು ತಾಲೂಕಿನಲ್ಲಿ " ಜೋಯಿಸರ ಹರಳಳ್ಳಿ " ಎಂಬುದೊಂದು ಚಿಕ್ಕ ಗ್ರಾಮ. ಈ ಚಿಕ್ಕಗ್ರಾಮದಲ್ಲಿ ಸಾಲೀಮಠದ ಬಸವಯ್ಯ, ನೀಲಮ್ಮ ಎಂಬ ಹೆಸರಿನ ದಂಪತಿಗಳು ಶಿವಪೂಜಾತತ್ಪರರು, ಆಚಾರ ನಿಷ್ಠರು. ಬಡತನವನ್ನೇ ಬಳುವಳಿಯಾಗಿ, ಭಾಗ್ಯವಾಗಿ ಪಡೆದರೂ ಅವರ ದಾಂಪತ್ಯ ಜೀವನ ಉದಾತ್ತ ವಾದುದಾಗಿತ್ತು, ಅನುಕರಣೀಯವಾಗಿತ್ತು.

ಇಂದಿಗೆ ತೊಂಬತ್ತುಮೂರು ವರ್ಷಗಳ ಹಿಂದೆ ಕ್ರಿ. ಶ. ಸಾವಿರ ಎಂಟನೂರು ಅವತ್ತೇಳರ ಕಾಲ ಆಗ. ಕತ್ತಲೆಯ ಕಳೆಯಲೆಂದು ಬಂದ ಸೂರ್ಯನ ತೆರದಿ; ಸಮಾಜ ಜೀವನದ ಸೂರ್ಯನಾಗಿ ಉದಯಿಸಿದನೆಮ್ಮ ಕುಮಾರಯೋಗಿ. ಇಂದು ಈ ವಿಜ್ಞಾನಯುಗ ನಂಬಲು ಹಿಂಜರಿಯುವಂತಹ, ಸವಾಡವೆನ್ನುವಂತಹ ಘಟನೆಗಳು ಹಲವಾರು ಇವೆ. ಈ ಯೋಗಿಯ ಜನನಕೆ ಹಿನ್ನೆಲೆಯಾಗಿ; ತಾಯಿ ನೀಲಮ್ಮನವರು ಕನಸಿನಲ್ಲಿ ಮಹೇಶ್ವರನನ್ನು ಕಂಡರು. ಆತ ತನ್ನ ಕೈಯಲ್ಲಿದ್ದ ಪುಷ್ಪವನ್ನು ಆಶೀರ್ವದಿಸಿ, ಅದಕ್ಕೆ ಬದಲಾಗಿ ಸುಕು. ಮಾರನನ್ನು ಬೇಡಿದ. ಅದಕ್ಕೆ ತಾಯಿ, ದೇವಮಾನವನನ್ನು ಜಗತ್ತಿಗೆ ನೀಡುವ ತಾಯಿ, ಜಗನ್ಮಾತೆ. ಆಗಲಿ " ಎಂದಳು. ಲೋಕ-ಕಲ್ಯಾಣವೇ ಜಗನ್ಮಾತೆಯ ಕಾರ್ಯ ತಾನೆ !

ಹನ್ನೊಂದನೆಯ ದಿನ ಮುತ್ತೈದೆಯರೆಲ್ಲ ಸೇರಿ ಜೋಗುಳವ ಪಾಡಿದರು, ಲೋಕೋತ್ತರನಾದ ಮಗುವನ್ನು ತೊಟ್ಟಿಲದಲ್ಲಿರಿಸಿ, 'ಹಾಲಯ್ಯ' ನೆಂದು ನಾಮಕರಣವೂ ಆಯಿತು.

ಮಕ್ಕಳೊಂದಿಗೆ ಬೆಳೆದ. ಆತನ ಆಟಪಾಟಗಳಲ್ಲಿ ಆತನದೇ ವೈಶಿಷ್ಟ್ಯ. ಗೋಲಿಯಾಟದಲ್ಲಿಟ್ಟ ಆತನ ದೃಷ್ಟಿ ಮುಂದೆ ದೃಷ್ಟಿಯೋಗವಾಯಿತು. ಮನೆಯ

ಅಂಗಳದಲ್ಲಿ, ತನ್ನ ಸಮ ವಯಸ್ಸಿನವರೊಂದಿಗೆ ನಿಂತಿರುವಾಗ, ಆಡುವಾಗ ನೋಡಿದ ದೊಂಬರಾಟ ಅವರ ಹಠಯೋಗಕ್ಕೆ ಕಾರಣವಾಯಿತು.

ಆರನೆಯ ವರುಷದಲ್ಲಿ ಒಂದು ಒಳ್ಳೇ ಮುಹೂರ್ತದಲ್ಲಿ ತಂದೆ-ತಾಯಿ ಅಕ್ಷರಾಭ್ಯಾಸಕ್ಕೆ ಪ್ರಾರಂಭಿಸಿದರು. ಹಾಲಯ್ಯನ ಅಭ್ಯಾಸ ಅಜ್ಜಂದಿರಾದ ಶ್ರೀ ಕೊಟ್ರಯ್ಯನವರ ಶಾಲೆಯಲ್ಲಿಯೇ ನಡೆಯಿತು.

ಜನರಿಂದ ಕಿಕ್ಕಿರಿದು ತುಂಬಿದ ಮನೆಗೆ ಬಡತನವೇ ದಾಳಿಯಿಕ್ಕಿರುವಾಗ ಹಾಲಯ್ಯನ ಅಭ್ಯಾಸ ನಿರಾತಂಕವಾಗಿ ಸಾಗಲು ಸಾಧ್ಯವಾಗಲಿಲ್ಲ. ಬಡತನದ ಬೇಗೆ ಅವರ ವಿದ್ಯೆ ಮುಂದುವರೆಯುವಂತೆ ಮಾಡಲಿಲ್ಲ. ಆಗ ನಡೆದ ಒಂದು ಘಟನೆಯಿಂದ ನೋವು ಅನುಭವಿಸಿದ ಹಾಲಯ್ಯನವರು ಆ ಊರಿನಿಂದ ಕಜ್ಜರಿ ಗ್ರಾಮಕ್ಕೆ ಬಂದರು. ಅಲ್ಲಿ ಯಾರು ಯಾರದೋ ಪರಿಚಯ ಹೆಚ್ಚಿಸಿಕೊಂಡು ಅಭ್ಯಾಸ ಮುಂದುವರಿಸಿದರು. ಸಮಗ್ರ ನಾಲ್ಕು ವರ್ಷ ಉತ್ತಮ ರೀತಿಯಲ್ಲಿ ಪಾಸಾಗುತ್ತ ಅಭ್ಯಾಸ ಮುಂದುವರಿಸಿ, ಮುಲ್ಕಿ ಪರೀಕ್ಷೆಗೆ ಕುಳಿತರು; ಪಾಸಾಗಲಿಲ್ಲ. ಅದರಿಂದ ಮನಸ್ಸಿಗೆ ನೋವಾಗಿ ತಾಯಿಯವರ ತವರುಮನೆಯಾದ ಲಿಂಗದ ಹಳ್ಳಿಗೆ ಬಂದು, ಒಂದು ಖಾಸಗಿ ಶಾಲೆಯನ್ನು ಪ್ರಾರಂಭಿಸಿ ತಾವೇ ಮಾಸ್ತರರಾಗಿ ಶಾಲೆ ನಡೆಸಿದರು.

ಹೀಗಿರುವಾಗಲೇ ಅವರಿಗಿದ್ದ ಜ್ಞಾನದಾಹ ಅಪಾರವಾಯಿತು. ಆಗ ಅದೇ ಊರಲ್ಲಿದ್ದ ಸಮಾಳದ ಬಸವಪ್ಪಯ್ಯನವರಿಂದ ಶ್ರೀ ನಿಜಗುಣರ ಸಾಹಿತ್ಯ, ವೇದಾಂತ ಅಭ್ಯಾಸ ಪ್ರಾರಂಭಿಸಿದರು. ವೇದಾಂತದ ಅರಿವು, ಇಷ್ಟ-ಪ್ರಾಣ- ಭಾವಲಿಂಗಗಳ ಸೂಕ್ಷ್ಮ ಪರಿಚಯ ನೀಡುವ "ಕೈವಲ್ಯ ಪದ್ಧತಿ" ಅವರ ಬಾಳನ್ನು ಇನ್ನೂ ಉದಾತ್ತಗೊಳಿಸಿತು. ಲಿಂಗಪೂಜೆಯಲ್ಲಿ ಅವರು ಸ್ಥಿರತರಾದರೆ ಬಾಹ್ಯಲೋಕದ ಪ್ರಜ್ಞೆ ಇರುತ್ತಿರಲಿಲ್ಲ. ನಿಜಗುಣರ ಗ್ರಂಥಗಳ ಓದಿನಿಂದಾಗಿ ಅವರಲ್ಲಿ ವೈರಾಗ್ಯ ಬೆಳೆಯಿತು. ಈ ಚಿಕ್ಕ ವಯಸ್ಸಿನಲ್ಲಿಯೇ ಅವರು ಕಾಮ, ಕ್ರೋಧ, ಮೋಹ, ಮದ, ಮತ್ಸರಗಳ ಮೀರಿ ನಿಂತ ಮಹಿಮರಾದರು.

ತನ್ನ ತವರುಮನೆಯಲ್ಲಿದ್ದ ಮಗನ ವಿಷಯ ತಿಳಿದು ತಾಯಿ ಬಂದು ಮದುವೆಗೆ ಒತ್ತಾಯಿಸಿದಾಗ, ತಾಯಿಗೆ ನೂರೊಂದು ಹೇಳಿ ಸಂಸಾರ ನನಗೆ ಸಲ್ಲದು, ಸತ್ಯವಾದ, ಚಿರಂತನವಾದ, ಲೋಕ ಹಿತಾರ್ಥವಾದ ಪ್ರಪಂಚಕ್ಕೆ ನಾನು ನನ್ನನ್ನೇ ಅರ್ಪಿಸಿಕೊಳ್ಳಬೇಕೆಂದಿದ್ದೇನೆ. ನೀನು ಆಶೀರ್ವದಿಸು ಎಂದು ಹೇಳಿ, ತಾಯಿಗೆ ಸಮಾಧಾನಪಡಿಸಿ ಆ ಸ್ಥಳದಿಂದ ತಾನೇ ಹೊರಡುತ್ತಾನೆ.

ತಾಯ ಸಾಮೀಪ್ಯವಿನ್ನೂ ಬೇಕು– ಎನ್ನುವ ವಯಸ್ಸಿನಲ್ಲಿಯೇ ಹಾಲಯ್ಯನವರು ವೀರ ವಿರಾಗಿಯಾಗಿ ಒಮ್ಮೆಲೇ ಎಲ್ಲ ಮೋಹವನ್ನೂ ಕಿತ್ತೆಸೆದು ಸಮಾಜ ಪುರುಷನಾಗಲು ಹೊರಡುತ್ತಾರೆ. ಲಿಂಗದಹಳ್ಳಿ ಬಿಟ್ಟು ಹುಬ್ಬಳ್ಳಿಗೆ ಬಂದು, ಆರೂಢದಲ್ಲಿ ವೇದಾಂತ ಅಭ್ಯಾಸ ಮುಂದುವರಿಸುತ್ತಾರೆ. ವೇದಾಂತ ಅಭ್ಯಾಸಿಯಾಗಿಯೂ ವೇದಾಂತಿಯಾಗಲಿಲ್ಲ. ಇಷ್ಟಲಿಂಗದ ಬಗೆಗೆ ಭಕ್ತಿ ತೋರಿಸದ ಆರೂಢರ ಬಗೆಗೆ ನಮ್ಮ ಸ್ವಾಮಿಗಳಲ್ಲಿ ಶ್ರದ್ಧೆ ಸಾಲದು. ಶಿವ ಯೋಗದ ಬಗೆಗೇನೇ ಹೆಚ್ಚು ಆಸಕ್ತಿಯಿರಿಸಿಕೊಂಡ ಸ್ವಾಮಿಗಳು ಎಮ್ಮಿಗನೂರು ಜಡೆಸಿದ್ಧರ ಬಳಿಗೆ ಹೋದರು. ಅಲ್ಲಿ ಅವರಿಗೆ ಪರಿಹಾರ ದೊರಕಿತು. ಅಲ್ಲಿಯೇ ಸ್ವಾಮಿಗಳ ತೇಜಃಪುಂಜ ವ್ಯಕ್ತಿತ್ವವನ್ನು, ಸಿದ್ಧಿಯನ್ನು ಕಂಡ ಜಡೆಸಿದ್ಧರು "ಶಿವಯೋಗಿ" ಎಂದು ಕರೆದರು. ಈ ಶಿವಯೋಗಿಯ ಶಿವಯೋಗ ಎಳಂದೂರ ಬಸವಲಿಂಗ ಸ್ವಾಮಿಗಳಲ್ಲಿ ಪೂರ್ಣಗೊಂಡಿತು. ಬಸವಲಿಂಗ ಸ್ವಾಮಿಗಳು ಶಿಷ್ಯನಲ್ಲಿ ಅಗಾಧವಾದ ಶಕ್ತಿಯನ್ನು ಕಂಡು ಮೆಚ್ಚಿದರು, ತಮ್ಮಲ್ಲಿದ್ದುದನೆಲ್ಲ ಆತನಿಗೆ ಧಾರೆಯೆರೆದರು; ಸದಾಶಿವದೇಶಿಕನೆಂದು ಹರಸಿದರು.

ಗುರು-ಶಿಷ್ಯರಿಬ್ಬರೂ ಸೇರಿ ನಾಡಸಂಚಾರ ಮಾಡಿ ಭಕ್ತರಿಗೆ ಸದ್ಬೋಧೆಯನ್ನು ಮಾಡಿದರು. ಸಂಚಾರದಲ್ಲಿರುವಾಗಲೇ ಶ್ರೀ ಬಸವಲಿಂಗ ಸ್ವಾಮಿಗಳವರಿಗೆ ದೇಹಾಲಸ್ಯವಾಯಿತು. ಆಗ ಸದಾಶಿವ ಸ್ವಾಮಿಗಳು ಚಿಂತಿಸತೊಡಗಿದರು. ಇದನ್ನು ಕಂಡು ಗುರುಗಳು ಶಿಷ್ಯನನ್ನು ಪಕ್ಕಕ್ಕೆ ಕರೆದು ಧೈರ್ಯ ಹೇಳುತ್ತ ನಿನ್ನಲ್ಲಿ ಯೋಗಶಕ್ತಿಯಿದೆ, ವಿರತಿಯಿದೆ, ಕಾರ್ಯದಕ್ಷತೆಯಿದೆ. ಧೈರ್ಯದಿಂದ ಈ ಸಮಾಜ ಶಿಶುವನ್ನು ಜೋಪಾನ ಮಾಡಲು ಸಿದ್ಧನಾಗು– ಎಂದು ಹೇಳಿ ಆಶೀರ್ವದಿಸಿ, ಅನುಗ್ರಹಿಸಿ ಲಿಂಗೈಕ್ಯರಾದರು. ಆ ಗುರುವಿನ ಅನುಗ್ರವೇ ಪರಮಾರ್ಥ ಸಂಪತ್ತೆಂದು ಸ್ವೀಕರಿಸಿದರು ನಮ್ಮ ಸ್ವಾಮಿಗಳು.

ಅಲ್ಲಿಂದ ಮುಂದೆ ನಿಜಗುಣರ ತಪೋಭೂಮಿಯಾದ ಶಂಭುಲಿಂಗನ ಬೆಟ್ಟದಲ್ಲಿ ಬಂದು ಗವಿಯಲ್ಲಿ ನೆಲೆಸಿ; ಸಮಾಜ, ನಾಡು, ದೇಶದ ಹಿತಕ್ಕಾಗಿ ಬೇಕಾದ ತಪಃಸಿದ್ಧಿಯನ್ನು ಪಡೆದರು. ಒಂದು ಮಂಗಲ ಬೆಳಗಿನಲ್ಲಿ ಮಹಾ ಸ್ವಾಮಿಗಳು ತಮ್ಮ ತಪಸ್ಸಿನ ಸಿದ್ಧಿಯನ್ನು ಸಮಾಜಕ್ಕೆ ನೀಡಲೆಂದು ಬೆಳಗಿನಲ್ಲಿ ಹಕ್ಕಿಯ ಮಂಗಲ ಗೀತದೊಂದಿಗೆ ಗವಿಬಿಟ್ಟು ಹೊರಹೊರಟರು.

ಅವರು ಹೋದಲ್ಲೆಲ್ಲ ಶಿಷ್ಯಕೋಟಿ ಬೆಳೆಯಿತು. ಅವರ ಮಾತ್ರ ಮುತ್ತು, ರತ್ನ. ನಡೆನುಡಿ, ಶಿವಮೆಚ್ಚುವ ತೆರದಿ. ಸ್ವಾಮಿಗಳು ಜನರ

ಮನದಲ್ಲಿ ವಿರಾಜಮಾನರಾದರು. ಅವರು ತುಳಿದ ನೆಲ ಪಾವನ ಕ್ಷೇತ್ರವಾಯಿತು. ಹೀಗೆಯೇ ಸಂಚರಿಸುತ್ತ; ಸೊರಬ ಪ್ರಾಂತಕ್ಕೆ ಬಂದರು. ಅಲ್ಲಿಯ ಭಕ್ತರ ಇಚ್ಛೆಯಂತೆ ಸ್ವಾಮಿಗಳು ಕೆಲಕಾಲ ಅಲ್ಲಿಯೇ ನೆಲಸಿದರು.

ಹಾನಗಲ್ ಮಠಾಧಿಪತಿಗಳಾಗಿದ್ದ ಶ್ರೀ ಮ. ನಿ. ಪ್ರ. ಫಕೀರಸ್ವಾಮಿಗಳವರು ತುಂಬ ವಯೋವೃದ್ಧರಾಗಿದ್ದರು. ಆಗ ಅವರು ಸಮರ್ಥ ಉತ್ತರಾಧಿಕಾರಿಯ ದಾರಿ ಕಾಯುತ್ತಿದ್ದರು. ಆ ಕ್ಷಣದಲ್ಲಿಯೇ ಸೊರಬ ಪ್ರಾಂತದಲ್ಲಿದ್ದ ಸದಾಶಿವ ದೇಶಿಕರನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು ಅವರು ಮಠಾಧಿಪತ್ಯ ತಮಗೆ ಬೇಡವೆಂದು ಹೇಳಿದರೂ ಸ್ವಾಮಿಗಳು, ಭಕ್ತರು ಕೇಳಲಿಲ್ಲ. ಶ್ರೀ ಪ್ರ. ನಿ. ಫಕೀರಸ್ವಾಮಿಗಳ ಹಾಗೂ ಭಕ್ತರ ಒತ್ತಾಯಕ್ಕಾಗಿ ಮಠಾಧಿಪತ್ಯ ಒಪ್ಪಿಕೊಂಡರು. ಆ ಮಠಾಧಿಪತ್ಯದ ನಂತರ ಸದಾಶಿವ ದೇಶಿಕರು ಹಾನಗಲ್ ಕುಮಾರ ಸ್ವಾಮಿಗಳಾದರು. ಇಲ್ಲಿಂದಲೇ ಭವ್ಯ ಜೀವನದ ನಾಂದಿಯಾಗುತ್ತದೆ. ಹಾನಗಲ್ಲಿನಲ್ಲಿ ಪ್ರಾರಂಭಿಸಿದ ಪಾಠಶಾಲೆಯಿಂದ ಅವರಿಗೆ ತೃಪ್ತಿಯಾಗಲಿಲ್ಲ. ಸಮಾಜದ, ನಾಡಿನ ತಮಸ್ಸಿಗೆ ಜ್ಯೋತಿ ಪ್ರಜ್ವಲಿಸಬೇಕೆಂದು ಆಶಿಸಿ, ಆ ರೀತಿ ಕಾರ್ಯತತ್ಪರರಾಗಿ ವೀರಶೈವ ಮಹಾಸಭೆಯೆಂಬ ಸಂಸ್ಥೆಯೊಂದನ್ನು ಸ್ಥಾಪಿಸಿ, ಅದರ ಮುಖಾಂತರ ಸಮಾಜ, ಧರ್ಮ, ಜನತೆಯ ಜಾಗ್ರತಿಯನ್ನು ಪ್ರಾರಂಭಿಸಿದರು.

ನಾಡನ್ನೆಲ್ಲ ಸಂಚರಿಸಿ, ಅಲ್ಲಲ್ಲಿ ಸಭೆಸಮ್ಮೇಳನಗಳನ್ನು ಕರೆದು ಪಾಠಶಾಲೆಗಳನ್ನು, ಉಚಿತ ಪ್ರಸಾದನಿಲಯಗಳನ್ನು, ವಾಚನಾಲಯಗಳನ್ನು ತೆರೆಯಿಸಿ, ಸಂಶೋಧನ ಕೇಂದ್ರಗಳನ್ನು ಸ್ಥಾಪಿಸಿ ಸಮಾಜದಲ್ಲಿ ಹೊಸಬೆಳಕನ್ನು ಹೊಸದೃಷ್ಟಿಯನ್ನು ತರಲು ಪ್ರಯತ್ನಿಸಿದರು. ಈ ನಾಡಿನ ಸಂಸ್ಕೃತಿ, ಇತಿಹಾಸ ಸಾಹಿತ್ಯದ ಬಗೆಗೆ ಮಹಾಸ್ವಾಮಿಗಳವರಲ್ಲಿ ಅಪಾರ ಅಭಿಮಾನ.

ನಾಲಂದ ವಿಶ್ವವಿದ್ಯಾನಿಲಯದ ಹಾಗೆ ಒಂದು ಸಂಸ್ಥೆ ಸ್ಥಾಪಿಸಿ ಅದರ ಮುಖಾಂತರ ವೀರಶೈವ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಧರ್ಮದ ಏಳ್ಗೆ ಸಂಪಾದಿಸಬೇಕೆಂದು ಬಯಸಿ, ಪ್ರಕೃತಿ ಸೌಂದರ್ಯದ ಪರಮಧಾಮವಾದ ಸುತ್ತು ಗಿರಿಗಳಿಂದ ಕೋಟೆಯಿಂದ ಸುಶೋಭಿತವಾದ, ಮಾಮರ, ನೇರಿಳೆ, ಮುತ್ತುಗದ ಮರಗಳ ನೆರಳ "ಬಯಲಿ"ನಲ್ಲಿ ಜುಳುಜುಳು ಎಂದು ಸದಾ ನಿನದಿಸುವ ಮಲಪ್ರಭಾ ನದಿಯ ಬಳಿ " ಶಿವಯೋಗ ಮಂದಿರ " ಸ್ಥಾಪಿಸಿದರು ಶ್ರೀಗಳು ಇಂದಿಗೆ ಐವತ್ತು ವರುಷಗಳ ಹಿಂದೆ. ಅದೊಂದು ಅದ್ಭುತ ಕಲ್ಪನೆ, ಸಿದ್ಧಿ ತಾಳಿದ ಸತ್ಯ. ಅದರ

ಹಿನ್ನೆಲೆಯಲ್ಲಿರುವ ಘಟನೆಗಳು ಬಲು ವಿಚಿತ್ರವಾಗಿವೆ. ರೋಮಾಂಚನಕರವಾಗಿವೆ. ಪವಾಡವಾಗಿವೆ. 'ಶಿವಯೋಗ ಮಂದಿರ' ಸ್ವಾಮಿಗಳ ಪೂರ್ಣಯೋಗದ ಫಲ.

'ಶಿವಯೋಗ ಮಂದಿರ' ಸುಂದರ ಕಾವ್ಯ. ತಂಗಾಳಿ ಸೂಸುತಿದೆ ಇಲ್ಲಿ, ತನಿಗಂಪು ತೀಡುತಿದೆ, ಕೂಹೂ ಕೂಹೂ ಎಂದು ಕೂಗುವ ಕೋಗಿಲೆಗಳ ಮಧುರಧ್ವನಿಯಿದೊ ಇಲ್ಲಿ. ನೂರಾರು ವಟುಗಳು ಕಾವಿಲಾಂಛನವ ತೊಟ್ಟು ತಪವಲ್ಲಿ, ಪೂಜೆಯಲ್ಲಿ, ಕಾಯಕದಲ್ಲಿ ನಿರತರಾಗಿರುವ ದೃಶ್ಯ, ಸಾವಿರಾರು ಹಸುಗಳು, ವಟುಗಳ, ವೀರ ವೀರಾಗಿಗಳ ಸಲಹುವ ಗೋಮಾತೆಯರು. ಬಿಲ್ವಪತ್ರಿ ಗಿಡಗಳ ಸಾಲು ಸಾಲು, ಒಂದೆಡೆ ಪವಿತ್ರ ಭಸ್ಮ ಸಿದ್ಧಿಗೊಳಿಸುವ ಕಾಯಕ. ಮತ್ತೊಂದೆಡೆ ಪುರಾತನ ಗ್ರಂಥಗಳ ಸಂಶೋಧನ ಕೇಂದ್ರದಲಿ ನಿರತರಾಗಿಹ ಸಂಶೋಧಕರು; ಇವೆಲ್ಲಕ್ಕೂ ಸೂತ್ರಧಾರಿಗಳಾಗಿ, ಶಕ್ತಿಯಾಗಿ, ಚೇತನ ಸ್ವರೂಪರಾಗಿ ನಿಂತವರು ನಮ್ಮ ಕುಮಾರ ಯೋಗಿಗಳು.

ನುಡಿದಂತೆ ನಡೆದು, ತಮ್ಮ ಅಪಾರ ಶಕ್ತಿಯಿಂದ ಯೋಗದ ಬಲ ದಿಂದ ನಾಡಿನ ಜನಮನ ಗೆಲಿದರು. ಅವರು ಸಂಗ್ರಹಿಸಿ ಇಂದು ಶಿವಯೋಗ ಮಂದಿರದ ಸಂಶೋಧನ ಶಾಖೆಯಲ್ಲಿರಿಸಿರುವ ಪುರಾತನ ತಾಡೋಲೆ ಗ್ರಂಥಗಳು. ನಾಡಿನ ಸಂಶೋಧಕರಿಗೆ ಆಹ್ವಾನ ನೀಡುತಲಿವೆ. ಅವರ ಸಂಗ್ರಹದಿಂದಲೇ ವಿಶ್ವ ಸಾಹಿತ್ಯಕ್ಕೆ ನಮ್ಮ ಕಾಣಿಕೆಯಾಗಬಲ್ಲಂಥ ವಚನ ಸಾಹಿತ್ಯ ಬೆಳಕು ಕಂಡಿತು.

ನಮ್ಮ ನಾಡಿನಲ್ಲಿ ಸಂಗೀತ ಪ್ರಸಾರವಾಗಿದ್ದರೆ ಅದು ಶ್ರೀಗಳವರ ಪುಣ್ಯಪ್ರಭಾವ. ಆ ಪ್ರಭಾವಳಿಯಲ್ಲಿ ಬೆಳೆದ ಉಭಯ ಗಾಯನ ವಿಶಾರದ ಪಂ ಪಂಚಾಕ್ಷರಿ ಗವಾಯಿಗಳು ಕರ್ನಾಟಕದಲ್ಲಿ ಸಂಗೀತಕ್ಕೆ ಜೀವ ತುಂಬಿದರು. ಸಂಗೀತ, ಸಾಹಿತ್ಯ, ಸಂಸ್ಕೃತಿ, ಧರ್ಮ– ಈ ಎಲ್ಲದರ ಉದ್ಧಾರಕ್ಕೆ ಬೆಳವಣಿಗೆಗೆ ಕಾರಣಕರ್ತರಾದವರು ನಮ್ಮ ಯುಗಪುರುಷ ಕುಮಾರೇಶರು.

ಅವರು ನುಡಿದುದೆಲ್ಲ ಮಂತ್ರವಾಯ್ತು; ಅವರ ದಿವ್ಯ ಬೆಳಕಿನಲ್ಲಿ ಅಸಂಖ್ಯಾತ ಯತಿವರೇಣ್ಯರು; ಕವಿಕಾವ್ಯ-ಕೋವಿದರು, ಸಂಗೀತ ಸುಧಾಕರರು ಮೈದಳೆದರು.

ಆ ಪಾವನ ಬೆಳಕು ಇಂದು ಆ ಪರಶಿವನ ಚಿತ್ಕಳೆಯ ಬೆಳಕಿನೊಂದಿಗೆ ಸೇರಿದೆ. ಆ ಬೆಳಕಿನಲ್ಲಿ ಮೂಡಿ ಬಂದ ಬೆಳಕಿನ ಅಸಂಖ್ಯಾತ ಶಿಶುಗಳು ಈ

ನಾಡಿನ ಜನಮನವನ್ನು ಕಲ್ಯಾಣದತ್ತ ನಡೆಯಿಸಿಕೊಂಡು ಹೋಗುತಿವೆ. ಹಾನಗಲ್ಲ ಶ್ರೀಗಳವರ ಚಿರಂತನ ಇರುವಿಕೆಗೆ ಇದಕ್ಕಿಂತ ಸಾಕ್ಷಿ ಇನ್ನೇನು ಬೇಕು? ಅವರು ಪರಮ ಪುರುಷರು, ಪಾವನ ಚರಿತರು; ಸಕಲಸಚ್ಚಿದಾನಂದ ಭರಿತರು. ಶಿವಯೋಗ ಸಾಯುಜ್ಯ ಪಡೆದ ಮಹಾಮಹಿಮರು.

ಈ ಮಹಾಮಹಿಮರ ಸನ್ನಿಧಾನದಲ್ಲಿ ಪರಮ ಭಕ್ತಿಯಿಂದ ನಡೆದು, ಅವರ ಜೀವನದ ಹಿರಿಮೆಯನ್ನು ಕಂಡುಂಡು ಆ ಪಥದಲ್ಲಿ ನಡೆಯುತ್ತ, ಅವರ ಉದ್ದೇಶಗಳ ಸಾಫಲ್ಯತೆಯಲ್ಲಿ ಕಾರ್ಯನಿರತರಾಗಿ, ಆಚಾರ ನಿಷ್ಠರಾಗಿ, ತಪಸ್ವಿಗಳಾಗಿ, ಈ ನಾಡಿಗೆ ಪಂಡಿತೋತ್ತಮರನ್ನೂ, ಸಂಗೀತ ಕಲಾಕೋವಿದರನ್ನೂ, ಅಸಂಖ್ಯಾತ ಕುರುಡರಿಗೆ ಜ್ಞಾನ ಚಕ್ಷುವನ್ನೂ ನೀಡಿ ಮಹಾಮಹಿಮರೆನಿಸಿದವರು ಉಭಯ ಗಾಯನ ವಿಶಾರದ ಲಿಂಗೈಕ್ಯ ಪೂಜ್ಯ ಶ್ರೀ ಪಂಚಾಕ್ಷರ ಸ್ವಾಮಿ ಗವಾಯಿಗಳು. ಅವರು ಈ ನಾಡಿನ ಮಹಾಭಾಗ್ಯವಾಗಿದ್ದರು. ಅವರು ತಮ್ಮ ಗುರುವಿನ ಪುಣ್ಯ ನಾಮದಿಂದ ಸಂಗೀತ ಸಂಸ್ಥೆಯನ್ನು ಸ್ಥಾಪಿಸಿ ಸಂಗೀತ ಕಲಿಯಬೇಕೆಂದು ಬಂದವರಿಗೆ ಊಟ-ವಸತಿ ನೀಡಿ ಅವರ ಬದುಕನ್ನೂ ರೂಪಿಸಿ, ಈ ನಾಡಿನ ಚಾರಿತ್ರ್ಯಪೂರ್ಣ ಪ್ರಜೆಗಳನ್ನಾಗಿ ಮಾಡಿದರು. ಅವರು ಕಟ್ಟಿದ ಈ ಮಹಾ ಸಂಸ್ಥೆಯನ್ನು ಅವರ ಉತ್ತರಾಧಿಕಾರಿಗಳೂ, ಅವರ ಪರಮ ಶಿಷ್ಯರೂ ಆದ ಪಂ. ಪುಟ್ಟರಾಜ ಗವಾಯಿಗಳು, ಅನೋಘವಾದ ಈ ರೀತಿಯಲ್ಲಿ ಆ ಪರಮ ಗುರುವಿನ ಘನ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈ ಸಂಸ್ಥೆ ಒಂದು ಸರಕಾರ ಮಾಡಲಾರದ ಮಹಾಕಾರ್ಯವನ್ನು ಈ ದೇಶಕ್ಕೆ ಮಾಡಿದೆ. ನಮ್ಮ ದೇಶದ ಕಣ್ಣಿದ್ದ ಕುರುಡರು ಈಗಲಾದರೂ ಕಣ್ಣು ತೆರೆದು ಈ ಮಹಾ ಸಂಸ್ಥೆಯ ಪವಾಡವೆನಿಸುವಂಥ ಕಾರ್ಯವನ್ನು ನೋಡಿ ಈ ಸಂಸ್ಥೆ ತನ್ನದೆಂಬ ಅಭಿಮಾನ ತಾಳಬೇಕು. ಇಲ್ಲದೆ ಹೋದರೆ ಘನವಾದ ಅಪವಾದಕ್ಕೆ ಗುರಿಯಾಗ ಬೇಕಾದೀತು. ಸಮಾಜ ಪುರುಷ ಕಣ್ದೆರೆದರೆ ಈ ಸಂಸ್ಥೆಗೆ ಎಂಟೆದೆಯ ಶಕ್ತಿ ತುಂಬಿ ಬಂದು ಈಗಾಗಿರುವ ಕಾರ್ಯಕ್ಕಿಂತಲೂ ಅದ್ಭುತವಾದ ಕಾರ್ಯವನ್ನು ಮಾಡಲು ಸಾಧ್ಯವಾಗುತ್ತದೆ.

ಅಂದು "ಶಿವಯೋಗ ಮಂದಿರ" ಹಾನಗಲ್ಲ ಶ್ರೀಗಳವರಿಂದ ಸ್ಥಾಪಿತವಾಗಿ ನಾಡನ್ನು ಉದ್ಧರಿಸಿದ್ದರೆ ಇಂದು ಅದೇ ಚೇತನಶಕ್ತಿ ಇಲ್ಲಿಯ 'ವೀರೇಶ ಪುಣ್ಯಾಶ್ರಮ'ದಲ್ಲಿ ನೆಲೆನಿಂತು ಲಿಂ. ಪಂಚಾಕ್ಷರ ಗವಾಯಿಗಳ ಹಾಗೂ ಪಂ. ಪುಟ್ಟರಾಜ ಗವಾಯಿಗಳ ಮುಖಾಂತರ ಈ ನಾಡಿನ ಜನಮನದ ಉದ್ಧಾರಗೈಯುತಿದೆ.

"ಶಿವಯೋಗ ಮಂದಿರ" ಹಾಗೂ "ವೀರೇಶ ಪುಣ್ಯಾಶ್ರಮ" ಈ ನಾಡಿನ ಚೇತನ ಶಕ್ತಿಗಳು. ಇಂದು ಬೆಳೆದು ಬಂದಷ್ಟೂ ಈ ನಾಡಿನ ಕಲ್ಯಾಣವಾಗುತ್ತದೆ; ಉದ್ಧಾರವಾಗುತ್ತದೆ.

ಈ ಸಂಗೀತ ಶಾಲೆಯ ಮುಖಾಂತರ, ಜನಮನದ ಉದ್ಧಾರಗೈಯುತ್ತಿರುವ ಪಂ. ಪುಟ್ಟರಾಜ ಗವಾಯಿಗಳ ಐವತ್ತು ವರುಷದ ಮಹಾಸಮಾರಂಭವನ್ನು ನಾಡು ವೈಭವಯುಕ್ತವಾಗಿ ಇಂದು ಮಾಡುತಿದೆ. ಈ ಕಾಲದ ಮಹಾಪಂಡಿತರೂ, ಹುಟ್ಟುಗುರುಡರೂ ಈಗಿರುವ ಪುಟ್ಟರಾಜ ಗವಾಯಿಗಳವರಿಗೆ ಈ ನಾಡಿಗಾಗಿ, ನಾಡಿನ ಜನತೆಯ ಒಳಿತಿಗಾಗಿ ಶ್ರೀ ಕುಮಾರೇಶ ಆಯುರಾರೋಗ್ಯ ನೀಡಿ ಈ ಚೈತನ್ಯಶಕ್ತಿ ನಮ್ಮ ಮಧ್ಯೆ ಬಹಳ ಕಾಲ ಇರುವಂತಾಗಲಿ.

ಕನ್ನಡ ಕುಲದ, ಕನ್ನಡ ಸಾಹಿತ್ಯದ ಉದ್ಧಾರಕರೂ ತಮ್ಮ ಗುರು ಕಟ್ಟಿದ ಈ ಸಂಸ್ಥೆಯನ್ನು ಸಂಗೀತ ಸರಸ್ವತಿಯ ಅರಮನೆಯನ್ನಾಗಿ ಪರಿವರ್ತಿಸಿ ಮಹಾಕಾವ್ಯಗಳನ್ನು, ಅಸಂಖ್ಯಾತ ಆಧ್ಯಾತ್ಮಿಕ ಗ್ರಂಥಗಳನ್ನು ರಚಿಸಿ ಕನ್ನಡ ಸಾರಸ್ವತ ಭಂಡಾರದ ಕೀರ್ತಿ ಹೆಚ್ಚಿಸಿರುವ ಅವರಿಗೆ ಸಾರಸ್ವತಲೋಕ ಋಣಿಯಾಗಿದೆ. ಸಂಗೀತಕ್ಕಾಗಿ, ನುಡಿಗಾಗಿ, ನಾಡಿನ ಜನಮನದ ಲೇಸಿಗಾಗಿ ಈ ಸಂಸ್ಥೆ ಸಲ್ಲಿಸುತ್ತಿರುವ ಸೇವೆ ಅಮೋಘವಾದುದು; ಉಪಕಾರವಾದುದು.

ಇಂದು ಈ ಆಶ್ರಮದಲ್ಲಿ ನಡೆದು ಬರುತ್ತಿರುವ ಎಲ್ಲ ಕಾರ್ಯಗಳಲ್ಲೂ ಶ್ರೀ ಕುಮಾರೇಶನ ಚೇತನ ಶಕ್ತಿಯಿದೆ, ಚಿಂತನೆಯಿದೆ. ಈ ಸಂಸ್ಥೆ ಸಾವಿರ ವರುಷ ಬಾಳಲಿ; ಈ ಮಹಾಸಂಸ್ಥೆಯ ಹಾಗೂ ಇದರ ಸಂಚಾಲಕರಾದ ಪಂಡಿತ ಪುಟ್ಟರಾಜರ ಹೆಸರನ್ನೂ ನಾಳಿನ ಇತಿಹಾಸಕಾರ ಮರೆಯದಂತಾಗಲಿ !

# ಆಯುರ್ವೇದ ಪ್ರೇಮಿ

**ವೈದ್ಯ ನಿಜಲಿಂಗ ಶಾಸ್ತ್ರಿಗಳು ಹಿರೇಮಠ, ಡ್ಯಾಂಪುರ.**

ಲಿಂ. ಪಂಚಾಕ್ಷರ ಗವಾಯಿಗಳವರು ಕನ್ನಡ- ಸಂಸ್ಕೃತ- ಹಿಂದೀ ಸಾಹಿತ್ಯ, ಸಂಗೀತ, ಕುರುಡರ ಓದು-ಬರೆಹ ಮೊದಲಾದವುಗಳಿಂದ ವೀರಶೈವ ಸಮಾಜವನ್ನಷ್ಟೇ ಅಲ್ಲ, ಜಾತಿ ಭೇದವಿಲ್ಲದೆ ಕನ್ನಡ ನಾಡನ್ನೇ ಸುಂದರವನ್ನಾಗಿ ಮಾಡಲು ನೈಷ್ಠಿಕ ಬ್ರಹ್ಮಚಾರಿಗಳಾಗಿ, ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಅಂತಹದೊಂದು ಮಹಾ ವಿದ್ಯಾಲಯವನ್ನು ಗದುಗಿನ ವೀರಶೈವರ ಪುಣ್ಯಾಶ್ರಮ ದಲ್ಲಿ ಸ್ಥಾಪಿಸಿದರು. ಈ ಪುಣ್ಯಾಶ್ರಮದ ಗುರುಕುಲದ ವಿದ್ಯಾರ್ಥಿಗಳಲ್ಲಿ ಸತ್ಯ ಅಹಿಂಸೆ, ಬ್ರಹ್ಮಚರ್ಯಾದಿ ಸದ್ಗುಣಗಳು ನೆಲೆಗೊಂಡು, ಆಹಾರ- ವಿಹಾರಗಳಲ್ಲಿ ಪರಿಶುದ್ಧತೆಯುಳ್ಳವರಾಗಿ, ದುಷ್ಟ- ದುರಾಚಾರಗಳಂಟದಂತೆ ಅವರ ಭಾವೀ ಜೀವನವು ಸುಖಮಯವಾಗುವ ಹಾಗೆ ಅವರು ಅತ್ಯಂತ ಎಚ್ಚರಿಕೆ ವಹಿಸು ತ್ತಿದ್ದರು. ಆದರೆ ಗವಾಯಿಗಳವರು ಇಷ್ಟಕ್ಕೆ ತೃಪ್ತರಾಗಲಿಲ್ಲ. ಆಯುರ್ವೇದವೂ ಜನತೆಯ ಕಲ್ಯಾಣಕ್ಕೆ ಅತ್ಯವಶ್ಯ ಬೇಕೇಬೇಕೆಂದು ಅವರು ಭಾವಿಸಿದರು. ವೈದ್ಯರಿಗಿರುವಷ್ಟು ಮಾನ ಸ್ವಾತಂತ್ರ್ಯಗಳು ಬೇರೆ ಯಾವ ವ್ಯವಸಾಯಗಳಿಗೂ ಇರುವದಿಲ್ಲ. ಪಂಡಿತನಿಂದ ಪಾಮರನವರೆಗೆ, ರಾಜನಿಂದ ರೈತನವರೆಗೆ ಎಲ್ಲರೂ ವೈದ್ಯನನ್ನು ಪ್ರೀತಿಸುವವರೇ. ರೋಗ ನಿರೋಧ ಮತ್ತು ನಿವಾರಣೆಗಳು ಎಲ್ಲಕ್ಕಿಂತ ಹೆಚ್ಚು ಮಹತ್ವದ ವಿಷಯಗಳಾಗಿವೆ. ವೈದ್ಯನಿಗೆ ಆಯುರ್ವೇದವು 'ಪ್ರಾಣಾಚಾರ್ಯ' ಎಂಬ ಬಿರುದು ಕೊಟ್ಟಿದೆ. ಬೇರೆ ಉದ್ಯೋಗಗಳಲ್ಲಿ ಕೇವಲ ಧನ–ಮಾನಗಳ ಹೋರಾಟವಿದ್ದರೆ, ವೈದ್ಯಕೀಯದಲ್ಲಿ ಜೀವ–ಸಾವುಗಳ ಹೋರಾಟವಿರುತ್ತದೆ. ಜೀವ–ಸಾವುಗಳು ಅಧಿದೈವಿಕ ವಿಷಯಗಳಾದುದರಿಂದ ಅವುಗಳನ್ನು ಅಂಕೆಯಲ್ಲಿ ತರಬಲ್ಲ ವೈದ್ಯರೂ ದೈವೀಜೀವಿಗಳೆಂದೇ ಗವಾಯಿ ಗಳವರು ಭಾವಿಸಿದರು.

ವೈದ್ಯನ ವ್ಯವಸಾಯವು ಬಹು ಪವಿತ್ರವಾದುದು. ಮಕ್ಕಳನ್ನು ಉಳಿಸಿ, ತಂದೆ-ತಾಯಿಗಳ ಕರುಳಿಗೆ ಅವನು ಸಮಾಧಾನವನ್ನು ಕೊಡುತ್ತಾನೆ. ಪತಿಗಳನ್ನು ಉಳಿಸಿ ಮುತ್ತೈದೆಯರ ಯಮಯಾತನೆಯನ್ನು ತಪ್ಪಿಸುತ್ತಾನೆ. ಆದ್ದರಿಂದ ವೈದ್ಯನು ಮಠಾಧಿಪತಿಗಳಿಗಿಂತ ಹೆಚ್ಚು ಪ್ರಿಯನೆಂದು ತಿಳಿದು

ಪಂ. ಪಂಚಾಕ್ಷರ ಗವಾಯಿಗಳವರು ತಮ್ಮ ಗುರುಕುಲದಲ್ಲಿ ಅಂತಹ ಯೋಗ್ಯ ವಿದ್ಯಾರ್ಥಿಗಳನ್ನು ಆರಿಸಿ, ಅವರಿಗೆ ಸಾಕಷ್ಟು ಸಹಾಯ ಧನವನ್ನು ಕೊಟ್ಟು, ಆಯುರ್ವೇದಾಭ್ಯಾಸಕ್ಕಾಗಿ ಕಳಿಸುವದೆಂದು ನಿರ್ಧರಿಸಿದರು. ಅಂತಹ ವಿದ್ಯಾರ್ಥಿಗಳಲ್ಲಿ ನಾನೊಬ್ಬ.

ನಾನು ಮಾಧ್ಯಮಿಕ ಶಾಲೆಯಲ್ಲಿರುವಾಗಲೆ ನನ್ನ ಪೂಜ್ಯ ದೊಡ್ಡಪ್ಪನವರಾದ ಲಿಂ. ಚೆನ್ನಪ್ಪಯ್ಯನವರು ನನ್ನನ್ನು ಗವಾಯಿಗಳವರ ಗುರುಕುಲಕ್ಕೆ ಸೇರಿಸಿದರು. ಗವಾಯಿಗಳವರ ಶ್ರೀ ಕುಮಾರೇಶ್ವರ ಸಂಗೀತ-ಸಾಹಿತ್ಯ ಮಹಾ ವಿದ್ಯಾಲಯದ ಗುರುಕುಲದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಪಂ. ಮಹಾಲಿಂಗಪ್ಪಯ್ಯನವರಲ್ಲಿ ಕನ್ನಡ ಕಾವ್ಯಗಳನ್ನೂ ಪಂ. ಪುಟ್ಟರಾಜ ಗವಾಯಿಗಳಲ್ಲಿ ಸಂಸ್ಕೃತ- ಸಂಗೀತಗಳನ್ನೂ ಕಲಿಯಲಾರಂಭಿಸಿದೆ. ಕೆಲ ವರ್ಷಗಳಲ್ಲಿಯೇ ಕನ್ನಡ ಸಾಹಿತ್ಯದಲ್ಲಿ ಪರಿಣತನಾದುದಲ್ಲದೆ, ಸಂಸ್ಕೃತದಲ್ಲಿ ಮುಂಬೈ ಕೇಂದ್ರದಿಂದ "ಸಾಹಿತ್ಯತೀರ್ಥ" ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿದೆ.

ಆಗ ಗವಾಯಿಗಳು ನನ್ನನ್ನು ಆನಂದದಿಂದ ಬರಮಾಡಿಕೊಂಡು, ನೀನಿನ್ನು ಆಯುರ್ವೇದ ಕಲಿ- ಎಂದು ಅಪ್ಪಣೆಮಾಡಿದರು. ನನ್ನ ಹಳ್ಳಿಯಿಂದ ಬಹು ದೂರದಲ್ಲಿರುವ ಬೆಳಗಾವಿಗೆ ಹೋಗಿ, ಊಟ-ವಸತಿಗಳ ವ್ಯವಸ್ಥೆ ಮಾಡಿಕೊಂಡು, ಆಯುರ್ವೇದವನ್ನು ಕಲಿಯುವಷ್ಟು ಆರ್ಥಿಕ ಬಲ ಆಗ ನನ್ನ ಮನೆತನದಲ್ಲಿರಲಿಲ್ಲ. ಆಗ ಗವಾಯಿಗಳು– "ನೀನಾವುದಕ್ಕೂ ಚಿಂತಿಸಬೇಡ; ನಿನ್ನ ಎಲ್ಲ ಭಾರವು ನನ್ನ ಮೇಲಿರಲಿ; ಈಗಲೆ ಬೆಳಗಾವಿಗೆ ಹೊರಡು" ಎಂದು ಅಪ್ಪಣೆಮಾಡಿದರು.

ಗುರುದೇವ ಗವಾಯಿಗಳವರ ಆಶೀರ್ವಾದದೊಂದಿಗೆ ಸಾಕಷ್ಟು ಸಹಾಯ ಧನವನ್ನು ಪಡೆದು; ಬೆಳಗಾವಿಯ ಕರ್ನಾಟಕ ಆಯುರ್ವೇದ ವಿದ್ಯಾಪೀಠದಲ್ಲಿ ಸತತ ಮೂರು ವರ್ಷ ಅಭ್ಯಾಸ ಮಾಡಿ, 'ಆಯುರ್ವೇದ ವಿಶಾರದ' ಪದವೀಧರನಾದೆ. ಈಗ ಕೊಪ್ಪಳ ನಾಡಿನ ಕುಕನೂರಲ್ಲಿ ಔಷಧಾಲಯವನ್ನಿಟ್ಟು ನೆಮ್ಮದಿಯಿಂದ ಜೀವನವನ್ನು ಸಾಗಿಸುತ್ತಿದ್ದೇನೆ. ಇದೆಲ್ಲವೂ ಗುರುದೇವ ಗವಾಯಿಗಳವರ ಕೃಪೆಯ ಫಲ.

ಇದೇ ಪ್ರಕಾರ ಗವಾಯಿಗಳವರು ಕೊಪ್ಪಳ ನಾಡಿನ ಒಂಕಲಕುಂಟೆ ಗ್ರಾಮದಲ್ಲಿ ಶ್ರೀ ಗಾನಯೋಗಿ ಆಯುರ್ವೇದ ಚಿಕಿತ್ಸಾಮಂದಿರದಲ್ಲಿ ಚಿಕಿತ್ಸಕರಾಗಿರುವ ವೈದ್ಯ ಕಲ್ಲಿನಾಥ ಶಾಸ್ತ್ರಿಗಳನ್ನು ಹುಬ್ಬಳ್ಳಿಯ ಆರ್ಯಾಂಗ್ಲ

ಮೆಡಿಕಲ್ ಇನ್‌ಸ್ಟಿಟ್ಯೂಟಿಗೆ ಕಳಿಸಿದರು. ಬೆಳವಣಿಕಿಯಲ್ಲಿ ದವಾಖಾನೆಯನ್ನಿಟ್ಟಿರುವ ವೈದ್ಯ ಸದಾಶಿವಯ್ಯನವರನ್ನು ವಿಜಾಪುರಕ್ಕೆ ಕಳಿಸಿ, ಆಯುರ್ವೇದ ತೀರ್ಥ ವೈದ್ಯ ಆದ್ಯ ಅನಂತಾಚಾರ್ಯರಿಂದ ಶಿಕ್ಷಣ ಕೊಡಿಸಿದರು. ಮತ್ತು ಗದುಗಿನಲ್ಲಿ ಗವಾಯಿಗಳವರ ಗುರುಕುಲದಲ್ಲಿ ವ್ಯವಸ್ಥಾಪಕರಾಗಿಯೂ ಇರುವ ವೈದ್ಯ ಅನ್ನದಾನಯ್ಯನವರನ್ನು ಬೆಂಗಳೂರಿಗೆ ಕಳಿಸಿ, ದಿವಂಗತ ಪಂಡಿತ ತಾರಾನಾಥರಾಯರಿಂದ ಶಿಕ್ಷಣ ಕೊಡಿಸಿ, 'ಆಯುರ್ವೇದ ಶಿರೋಮಣಿ' ಪದವೀಧರರನ್ನಾಗಿ ಮಾಡಿಸಿದರು. ಇಷ್ಟೇ ಅಲ್ಲ; ರಾಯಚೂರ ಜಿಲ್ಲೆಯ ಯಲಬುರಗಿಯಲ್ಲಿ ಔಷಧಾಲಯವನ್ನಿಟ್ಟರುವ ವೈದ್ಯ ಶರಣಯ್ಯನವರೂ ಗವಾಯಿಗಳ ಶಿಷ್ಯಪರಂಪರೆಗೆ ಸೇರಿದವರೇ.

ಹೀಗೆ ಗವಾಯಿಗಳವರು ಇನ್ನೂ ಅನಂತ ವಿದ್ಯಾರ್ಥಿಗಳನ್ನು ಆಯುರ್ವೇದ ಪ್ರವೀಣರನ್ನಾಗಿ ಮಾಡಬೇಕೆಂಬ ಸಂಕಲ್ಪವಿರಿಸಿಕೊಂಡಿದ್ದರು. ಆದರೆ ನಾಡಿನ ದುರ್ದೈವದಿಂದ ಅಷ್ಟರೊಳಗಾಗಿ ಅವರಿಗೆ ಕರೆ ಬಂದಿತು. ಗವಾಯಿಗಳ ಉತ್ತರಾಧಿಕಾರಿಗಳಾಗಿರುವ ಪಂಡಿತ ಪುಟ್ಟರಾಜರೂ ಆಯು-ರ್ವೇದವನ್ನು ಅಲಕ್ಷಿಸಿಲ್ಲ. ಅವರು ಈಗಾಗಲೇ ಕೊಪ್ಪಳ ಹಿರೇಮಠದ ಕುಮಾರ ಸ್ವಾಮಿಯವರನ್ನು ಮೈಸೂರ ಆಯುರ್ವೇದ ಕಾಲೇಜಿಗೆ ಕಳಿಸಿ, ಪದವೀಧರರನ್ನಾಗಿ ಮಾಡಿದರು. ಕುಮಾರಸ್ವಾಮಿಯವರು ಈಗ ಸರಕಾರಿ ಆಯುರ್ವೇದ ಔಷಧಾಲಯದಲ್ಲಿ ವೈದ್ಯರಾಗಿದ್ದಾರೆ.

ಪಂ. ಪುಟ್ಟರಾಜರ ಕೃಪಾಛತ್ರದಡಿಯಲ್ಲಿ ಇನ್ನೂ ಹೆಚ್ಚು ಹೆಚ್ಚು ವೈದ್ಯರು ನಿರ್ಮಾಣವಾಗಿ ಲಿಂ. ಗವಾಯಿಗಳವರ ಸಂಕಲ್ಪ ಈಡೇರಲೆಂದೂ ಅವರ ಜೀವನವು ನಾಡಿನ ನಂದಾದೀಪವಾಗಲೆಂದೂ ಹಾರೈಸುತ್ತೇನೆ.

# ಮಹಾಭಾಗ್ಯಶಾಲಿ ಶ್ರೀ ಪಂಚಾಕ್ಷರಿ ಗವಾಯಿಗಳು

ಪಂ. ನಾಗಭೂಷಣ ಶಾಸ್ತ್ರಿಗಳು, ಸಂಪಾದಕರು "ಸಾವಧಾನ"



### ಶಿವಯೋಗಿ ಕೃಪೆಪಡೆದ ಮಹಾನುಭಾವ

ನಮ್ಮ ಕನ್ನಡನಾಡು ಕಾಲಕಾಲಕ್ಕೂ ಮಹಾಪುರುಷರಿಗೆ ಜನ್ಮವೀಯುವ ತನ್ನ ಮಹಾಭಾಗ್ಯವನ್ನು ಅವಿಚ್ಛಿನ್ನವಾಗಿ ಕಾಯ್ದುಕೊಂಡು ಬಂದಿದೆ. ಈ ನೆಲದ ಗುಣಧರ್ಮವೇ ಅಂತಹುದು. ಇದು ಕನ್ನಡಿಗರಿಗೆ ವಿಶೇಷತಃ ವೀರಶೈವರಿಗೆ ಅತ್ಯಂತ ಅಭಿಮಾನಾಸ್ಪದ ಸಂಗತಿ.

ಈ ನಾಡಿನಲ್ಲಿ ಸನಾತನ ಶಿವಧರ್ಮವನ್ನು ಪ್ರತಿಷ್ಠಾಪಿಸಿ ಎಲ್ಲರನ್ನೂ ಉದ್ಧರಿಸಲೆತ್ನಿಸಿದ ಕಾರಣಿಕ ಮಹಾಪುರುಷರು ರೇಣುಕಾದ್ಯಾಚಾರ್ಯರು, ಬಸವಾದಿ ಪ್ರಮಥರು, ಪ್ರಭುಪ್ರಭೃತಿ ನಿರಂಜನ ಜಂಗಮರು. ಅವರು ಕ್ರಮವಾಗಿ ಶಿವಧರ್ಮ ಪುರುಷನ ಶರೀರ ಪ್ರಾಣ ಆತ್ಮಗಳ ಸ್ಥಾನಾಪನ್ನರಾಗಿರುತ್ತಾರೆ. ಶಿವ ಧರ್ಮವು ಕಾಲಕ್ರಮದಲ್ಲಿ ಖಿಲವಾಗ ಹತ್ತಿದಾಗ ಪುನಃ ಕಾರಣಿಕ ಮಹಾಪುರುಷರು ಉದಯಿಸಿ ಬರುವದು ಅನಿವಾರ್ಯ.

ಇಪ್ಪತ್ತನೆಯ ಶತಮಾನದಲ್ಲಿ ಶಿವಧರ್ಮದ ಉಚ್ಚ ಪರಂಪರೆಯನ್ನು ಸುರಕ್ಷಿತವಾಗಿಡಲು ಉದಯಿಸಿದವರಲ್ಲಿ ಲಿಂಗೈಕ್ಯ ಹಾನಗಲ್ಲ ಕುಮಾರ ಶಿವಯೋಗಿಗಳು ಒಬ್ಬರು. ಕಾರಣಿಕ ಮಹಾಪುರುಷರಲ್ಲಿ ಸ್ವಾಭಾವಿಕವಾಗಿರುವ ಸಚ್ಚಾರಿತ್ರ್ಯ, ತತ್ವನಿಷ್ಠೆ, ಪರಕಲ್ಯಾಣ ಪ್ರವೃತ್ತಿ, ದೂರದೃಷ್ಟಿ, ವಿಶಾಲಭಾವನೆ, ಕರ್ತೃತ್ವಶಕ್ತಿ, ಸತತ ಪರಿಶ್ರಮ, ಭಕ್ತಿ ಜ್ಞಾನ ವೈರಾಗ್ಯ ಮುಂತಾದವು ಕುಮಾರ ಶಿವಯೋಗಿಗಳಲ್ಲಿ ನೆಲೆಯಾಗಿ ನಿಂತಿದ್ದವು. ಅಷ್ಟೇಕೆ ಅವೆಲ್ಲವುಗಳ ಮೂರ್ತಿಮಂತ ಮಹಾವ್ಯಕ್ತಿಗಳೇ ಅವರಾಗಿದ್ದರು.

ಮಾನವರ ಸರ್ವಾಂಗೀಣವಾದ ಅಭ್ಯುನ್ನತಿಗೆ ಆಧ್ಯಾತ್ಮಿಕ ಸುಧಾರಣೆಯಷ್ಟೇ ಅಲ್ಲ ವ್ಯಾವಹಾರಿಕ ಸುಧಾರಣೆಯ ಅವಶ್ಯಕತೆಯೂ ಉಂಟು ಎಂಬುದು ಲಿಂಗಾನುಭಾವಿಗಳ ಮತ. ಅಂಥ ಸಮನ್ವಯಾತ್ಮಕ ಧರ್ಮವೇ ನಿಜವಾದ ಧರ್ಮ, ಪರಿಪೂರ್ಣ ಧರ್ಮ. ಅಂಥ ಧರ್ಮಮಾರ್ಗದಲ್ಲಿಯೇ ಜನರನ್ನು ನಡೆಯಿಸಲು

ಶಿವಯೋಗಿಗಳು ಪ್ರಯತ್ನಿಸಿದರು. ಅವರ ಪ್ರಯತ್ನದ ಫಲವಾಗಿ ಶ್ರೀ ಮದ್ವೀರಶೈವ ಶಿವಯೋಗಮಂದಿರ, ಅಖಿಲಭಾರತ ವೀರಶೈವ ಮಹಾಸಭೆ ಎಂಬ ಮಹಾಸಂಸ್ಥೆಗಳು ಜನ್ಮವೆತ್ತಿದವು. ಕುಮಾರ ಶಿವಯೋಗಿಗಳು ತಮ್ಮ ಜೀವನದ ಕೊನೆಯ ಗಳಿಗೆಯವರೆಗೂ ಮಾನವ ಸಮಾಜದ ಹೆಚ್ಚಾಗಿ ವೀರಶೈವ ಸಮಾಜದ ಕಲ್ಯಾಣವನ್ನೇ ತಮ್ಮ ಮುಂದೆ ಗುರಿಯಾಗಿಟ್ಟುಕೊಂಡು ಪ್ರಯತ್ನಿಸಿದರಲ್ಲದೆ ಕೇವಲ ತಮ್ಮ ಊರು ತಮ್ಮ ಮಠ ಎಂಬ ಸಂಕುಚಿತ ಭಾವನೆಗೆ ಎಷ್ಟೂ ಎಡೆಗೊಡಲಿಲ್ಲ. ಅಂಥ ಮಹಾಶಿವಯೋಗಿಯ ಕಾರ್ಯಕ್ಷೇತ್ರದಲ್ಲಿ ಅವರ ಕೃಪೆ ಪಡೆದವರೆಲ್ಲ ಕೃತಕೃತ್ಯರಾದ ರೆಂಬುವಲ್ಲಿ ಆಶ್ಚರ್ಯವೇನು ? ಆದರೆ ಅದಕ್ಕೂ ಒಂದು ಭಾಗ್ಯಬೇಕು. ಅಂಥ ಮಹಾಭಾಗ್ಯ ಪಡೆದವರಲ್ಲಿ ಲಿಂಗೈಕ್ಯ "ಗಾನಯೋಗಿ" ಪಂಚಾಕ್ಷರಿ ಗವಾಯಿಗಳೂ ಒಬ್ಬರು. ಒಬ್ಬ ಜನ್ಮಾಂಧ, ಬಡ ಜಂಗಮ ಬಾಲಕನು ಮುಂದೆ ಕನ್ನಡನಾಡಿನಲ್ಲಿಯೇ ತನ್ನ ಧವಲ ಕೀರ್ತಿಧ್ವಜವನ್ನು ಅಜರಾಮರವಾಗಿ ಮೆರೆಯಿಸಲು ಸಮರ್ಥನಾದುದು ಶಿವಯೋಗಿಯ ಕೃಪಾಪ್ರಭಾವವಲ್ಲದೆ ಮತ್ತೇನು ?

## ಸ್ವಕರ್ತವ್ಯನಿಷ್ಠರು

ಪರುಷ ಮುಟ್ಟಿದ ಲೋಹದಂತೆ ಶಿವಯೋಗಿ ಕೃಪೆಪಡೆದ ಪಂಚಾಕ್ಷರಿ ಗವಾಯಿಗಳು ಉಭಯಗಾನ ವಿಶಾರದರೂ, ಶಿವಕೀರ್ತನಪಟುಗಳೂ, ಲಿಂಗಪೂಜಾ ಧುರೀಣರೂ ಆಗಿ ಕರ್ನಾಟಕದ ಎಲ್ಲ ಭಾಗದಲ್ಲಿಯೂ ಕಂಡು ಬರುತ್ತಿದ್ದರು. ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತ ಶಿವಯೋಗಿ, ಘನಮಠಾರ್ಯ ಮುಂತಾದ ಪೂತಾತ್ಮರ ಸಹವಾಸದಲ್ಲಿದ್ದು ತನ್ನ ಪಾವಿತ್ರ್ಯವನ್ನು ಕಾಯ್ದುಕೊಂಡಿದ್ದ ಗಾನವಿದ್ಯಾಲಲನೆಯು ಕಾಲಾಂತರದಲ್ಲಿ ಆಚಾರ ಭ್ರಷ್ಟರ, ದುರ್ವ್ಯಸನಿಗಳ ಸಂಸರ್ಗದಿಂದ ತನ್ನ ಪಾವಿತ್ರ್ಯವನ್ನು ಕಳೆದುಕೊಂಡು ಕಳೆಗುಂದಿ ಪವಿತ್ರಾತ್ಮರ ನಿರೀಕ್ಷಣೆಯಲ್ಲಿರುವಾಗ ಸದಾಚಾರ ನಿಷ್ಠರಾದ ಗವಾಯಿಗಳು ಗಾನ ವಿದ್ಯಾಲಲನೆಗೆ ಆಶ್ರಯವಿತ್ತು ಗೌರವಿಸಿದರು. ಗಾನವಿದ್ಯೆಯು ಶ್ರೋತೃಗಳ ಮನಸ್ಸನ್ನು ವಿಕಾರಗೊಳಿಸುವದಲ್ಲ, ವಿಕಾಸಗೊಳಿಸುವದು ಎಂಬುವನ್ನು ಎಲ್ಲರಿಗೂ ತಿಳಿಯುವಂತೆ ಮಾಡಿದ ಶ್ರೇಯಸ್ಸು ಇತ್ತೀಚೆಗೆ ಪಂಚಾಕ್ಷರಿ ಗವಾಯಿಗಳಿಗೇ ಸಲ್ಲತಕ್ಕದ್ದು.

ಹಿಂದಿನ ಮಹಾನುಭಾವಿಗಳ ತತ್ತ್ವಗೀತಗಳನ್ನು ಭಕ್ತಿಯಿಂದ ಹಾಡುತ್ತ ಕನ್ನಡಿಗರನ್ನು ಸಂತೋಷಗೊಳಿಸುವ ಸ್ವಕರ್ತವ್ಯ ನಿಷ್ಠೆಯು ಗವಾಯಿಗಳಲ್ಲಿ ಅಸದೃಶ್ಯವಾಗಿತ್ತು. ತಮ್ಮಲ್ಲಿದ್ದ ಶಕ್ತಿಯನ್ನು ಯೋಗ್ಯರೀತಿಯಿಂದ

ಬಳಸುವ ವೃತ್ತಿನಿಷ್ಠೆಯೇ ಕರ್ತವ್ಯನಿಷ್ಠೆ ಎನಿಸುವದು. ಅದು ಜನ್ಮಾಂಧರಾಗಿದ್ದ ಗವಾಯಿಗಳೊಡನೆ ಹುಟ್ಟಿ ಬಂದಿತ್ತೆಂದು ತೋರುತ್ತದೆ. ಗವಾಯಿಗಳ ಅಂಧತನ ಹೊರಗಣ್ಣಿಗೆ ಮಾತ್ರ ಸಂಬಂಧಪಟ್ಟದ್ದು. ನಿಜವಾದ ಕಣ್ಣು ಹೊರಗಿನದಲ್ಲ, ಒಳಗಿನದು. ಅದಕ್ಕೆ ಅರಿವಿನ ಕಣ್ಣು ಎಂದು ಅನುಭವಿಗಳು ಹೇಳುವರು. ಅಂಥ ಕಣ್ಣನ್ನು ಕಳೆದುಕೊಂಡು ಕೇವಲ ಹೊರಗಣ್ಣುಳ್ಳವರನ್ನು ಆಧ್ಯಾತ್ಮಿಕ ದೃಷ್ಟಿಯಲ್ಲಿ ಕುರುಡರೆಂದೇ ಹೇಳಬೇಕಾಗುವದು. ಸ್ವಕರ್ತವ್ಯನಿಷ್ಠೆಯೇ ಗವಾಯಿಗಳ ಒಳಗಣ್ಣಿನ ಸೂಚಕವಾಗಿತ್ತು. ನಿಜವಾದ ಮಾನವತ್ವವೂ ಸ್ವಕರ್ತವ್ಯನಿಷ್ಠೆಯನ್ನೇ ಅವಲಂಬಿಸಿರುವದು. ಅದೇ ಮಾನವನಲ್ಲಿ ಹುದುಗಿದ್ದ ದೈವಿಶಕ್ತಿಯನ್ನು ಅರಳಿಸಿ ಪರಮ ಪದಕ್ಕೆ ಮುಟ್ಟಿಸುವದು.

## ಶಿಷ್ಯವತ್ಸಲರು

ಮನೋರಂಜನ ಹೂವು ತನ್ನ ಕಡೆಗೆ ಬರಬೇಕೆಂದು ಯಾರಿಗೂ ಆಮಂತ್ರಣ ಕಳಿಸುವದಿಲ್ಲ. ಆದರೂ ಅದರ ಸುಗಂಧದಿಂದ ಆಕರ್ಷಿತರಾದವರು ಅದರ ಲಾಭ ಪಡೆಯುವರು. ಹಾಗೆಯೇ ಗಾನವಿದ್ಯಾ ವಿಶಾರದರಾದ ಪಂಚಾಕ್ಷರಿ ಗವಾಯಿಗಳು ತಮ್ಮ ಕಡೆಗೆ ಬರಲು ಯಾರಿಗೂ ಆಮಂತ್ರಣವೀಯದಿದ್ದರೂ ಗಾನ ವಿದ್ಯಾ ಪ್ರೇಮಿಗಳು ಅವರನ್ನು ಸುತ್ತುವರೆಯ ಹತ್ತಿದರು. ತಾಯಿತಂದೆಗಳಿಲ್ಲಗಲಿ ಬಂದು ತಮ್ಮಲ್ಲಿ ಗಾನವಿದ್ಯಾಭ್ಯಾಸಮಾಡಬೇಕೆನ್ನುವ ಬಡವಿದ್ಯಾರ್ಥಿಗಳಿಗೆ ಅಶನ ವಸನ ವಸತಿಗಳ ಸೌಕರ್ಯವನ್ನು ಮಾಡಿಕೊಡುವ ಗುರುತರ ಭಾರವು ಗವಾಯಿಗಳ ಮೇಲೆ ಬಿದ್ದಿತು. ಗವಾಯಿಗಳು ತಮ್ಮ ಶಿಷ್ಯರನ್ನೆಲ್ಲ ಔರಸಪುತ್ರರಂತೆ ಪ್ರೀತಿಯಿಂದ ಕಂಡು ಅವರ ಭವಿಷ್ಯಜ್ಜೀವನ ಸುಖಮಯವಾಗುವಂತೆ ಪ್ರಯತ್ನಿಸುತ್ತಿದ್ದರು. ಅದಕ್ಕಾಗಿಯೇ ಅವರಿಗೆಲ್ಲ ಗಾನವಿದ್ಯೆಯ ಸಂಗಡ ಇತರ ವಿದ್ಯೆಗಳನ್ನೂ ಸಾಧ್ಯವಾದ ಮಟ್ಟಿಗೆ ಕಲಿಸುವ ವ್ಯವಸ್ಥೆ ಮಾಡಬೇಕಾಯಿತು. ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಶ್ರೀ ಪುಟ್ಟಯ್ಯನವರಲ್ಲಂತೂ ಅಸಾಧಾರಣವಾದ ವಾತ್ಸಲ್ಯವು ತಲೆಯೆತ್ತಿ ನಿಂತಿತ್ತು. ಪುಟ್ಟಯ್ಯನವರಾದರೂ ತಮ್ಮ ಗುರುಗಳ ಸತ್ಯಸಂಕಲ್ಪವನ್ನು ಈಡೇರಿಸಲು ಬೇಕಾದ ಕುಶಲಮತಿಯುಳ್ಳವರಾಗಿದ್ದರು. ತಮ್ಮ ಶಿಷ್ಯರು ತಮಗಿಂತ ಹೆಚ್ಚು ಬೆಳಕಿಗೆ ಬರಬೇಕೆಂಬುದು ಗವಾಯಿಗಳ ಸತ್ಯಸಂಕಲ್ಪ, ಅದನ್ನು ಈಡೇರಿಸುವದಕ್ಕಾಗೆ ಗವಾಯಿಗಳು ಶ್ರೀಪುಟ್ಟರಾಜರಿಗೆ ಗಾನವಿದ್ಯೆಯೊಡನೆ ಸಂಸ್ಕೃತ, ಕನ್ನಡ, ಸಾಹಿತ್ಯವನ್ನು ಅಭ್ಯಾಸ ಮಾಡುವ ಅವಕಾಶ ಕಲ್ಪಿಸಿಕೊಟ್ಟರು. ಸದ್ಗುರುಗಳಿಗೆ ಸಚ್ಛಿಷ್ಯರು ದೊರೆತರೆ ಆಗುವ ಆನಂದಕ್ಕೆ ಕಡೆಯಿಲ್ಲವಾಯಿತು. ಬಂಗಾರದ ಮೃದುತನ, ಅಕ್ಕಸಾಲಿಗನ ಜಾಣತನ ಎರಡೂ ಒಂದುಕಡೆ ಕೂಡಿ-

ದಂತಾಯಿತು. ಈ ಗುರು ಶಿಷ್ಯರ ಸಂಬಂಧ. ಗವಾಯಿಗಳು ತಮ್ಮ ಸಂಚಾರದಲ್ಲಿ ಕಂಡುಬರುವ ಎಲ್ಲ ಕನ್ನಡ ಪಂಡಿತರನ್ನು ಸಂಸ್ಕೃತ ಪಂಡಿತರನ್ನು ತಮ್ಮ ಸಚ್ಛಿಷ್ಯನಿಗಾಗಿ ಉಪಯೋಗಿಸುತ್ತಲಿದ್ದರು. ಹೀಗೆಯೇ ಅವರು ಸಂಚರಿಸುತ್ತ ಗದುಗಿಗೆ ಬಂದಾಗ 'ಹಾಲಕೆರೆ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳ ಸಂಸ್ಕೃತ ಪಾಠಶಾಲೆಯ ಅಧ್ಯಾಪಕನಾಗಿದ್ದ ಲೇಖಕನ ಹತ್ತಿರ ಬಂದು ತಮ್ಮ ಶಿಷ್ಯನಿಗೆ ವೇದಾಂತವನ್ನು ಕಲಿಸಬೇಕೆಂದು ಕೇಳಿದರು. ಅವರ ಹೇಳಿಕೆಯ ಪ್ರಕಾರ ಶ್ರೀ ಪುಟ್ಟಯ್ಯನವರಿಗೆ ವೇದಾಂತದಲ್ಲಿ ಪ್ರಮಾಣ ಗ್ರಂಥವೆನಿಸಿದ "ವೇದಾಂತ ಪರಿಭಾಷಾ" ಎಂಬ ಗ್ರಂಥವನ್ನು ಓದಿಸಲಾಯಿತು. ತರ್ಕಶಾಸ್ತ್ರದಲ್ಲಿ ಗತಿಯಿಲ್ಲದಿದ್ದರೂ ಆ ಗ್ರಂಥವನ್ನು ಚನ್ನಾಗಿಯೇ ಅಭ್ಯಾಸ ಮಾಡಿದರೆಂದು ನನಗನಿಸಿತು. ತಮ್ಮ ಶಿಷ್ಯರು ಅಭ್ಯಾಸಮುಗಿಸಿಕೊಂಡು ಹೋದಮೇಲೆ ನನ್ನ ಕಡೆಗೆ ಗವಾಯಿಗಳು ಬಂದು ಶಿಷ್ಯನ ಅಭ್ಯಾಸ ವಿಷಯವನ್ನು ಕೇಳಿ ತಮಗಾದ ಆನಂದವನ್ನು ವ್ಯಕ್ತಮಾಡುತ್ತಿದ್ದರು. ನಾನು ಒಂದು ದಿನ ಗವಾಯಿಗಳಿಗೆ ಹೀಗೆ ಹೇಳಿದ್ದೆ– ನಿಮ್ಮ ಶಿಷ್ಯರು ಜಾಣರಿದ್ದಾರೆ. ಪರಿಭಾಷೆಯು ಮುಗಿದೊಡನೆ ಬ್ರಹ್ಮಸೂತ್ರಭಾಷ್ಯವನ್ನು ಓದಿಸಬೇಕೆಂದಿರುವೆ. ಈ ಮಾತನ್ನು ಕೇಳಿದಾಗ ಅವರು ಎಷ್ಟು ಸಾರೆ ಗೋಣು ಹಾಕುತ್ತ ಲಟಿಗಿ ಹೊಡೆದರೋ ನನಗೆ ತಿಳಿಯದಾಯಿತು. ಅವರಲ್ಲಿದ್ದ ಶಿಷ್ಯವಾತ್ಸಲ್ಯವು ಬೆರಗುಗೊಳಿಸುವಂತಹದಾಗಿತ್ತು. ಮುಂದೆ ಗವಾಯಿಗಳು ಬೇರೆ ಕಡೆಗೆ ಹೋಗುವ ಪ್ರಸಂಗ ಬಂದ ನಿಮಿತ್ತ ನನ್ನ ಸಂಕಲ್ಪ ಸಾಧಿಸಲಿಲ್ಲ.

## ನಿಷ್ಠಾವಂತರು

ವ್ಯಕ್ತಿಯ ಯೋಗ್ಯತೆಯನ್ನು ತಿಳಿಯಲು ಆಪತ್ಕಾಲವೇ ಒರೆಗಲ್ಲಾಗಿದೆ. ಆಪತ್ಕಾಲದಲ್ಲಿ ಎದೆಗುಂದದೆ ತನ್ನ ಕರ್ತವ್ಯದಲ್ಲಿ ತೊಡಗುವ ವ್ಯಕ್ತಿಯ ವ್ಯಕ್ತಿತ್ವವು ಬಹು ಎತ್ತರದಾಗಿರುವದು ಹೊಸ ಎಲೆಗಳು ಮೂಡಿಬರುವದಕ್ಕಾಗಿಯೇ ಒಣ ಎಲೆಗಳು ಶರತ್ಕಾಲದಲ್ಲಿ ಉದುರುವವು. ಹಾಗೆಯೇ ಅಧಿಕ ಸುಖಕ್ಕಾಗಿಯೇ ಅಲ್ಪದುಃಖವನ್ನು ಭೋಗಿಸಬೇಕಾಗುವದು. ಪ್ರಭು ಯಾವ ಮಾರ್ಗದಿಂದ ಕಲ್ಯಾಣ ಮಾಡುವನೆಂಬುದು ತಿಳಿಯಲಾಗುವದಿಲ್ಲ. ಅದಕ್ಕಾಗಿ ಎಂಥ ವಿಪತ್ತುಗಳು ಬಂದರೂ ಪರಮಾತ್ಮನಲ್ಲಿ ಅವಿಚಲಿತ ವಿಶ್ವಾಸವನ್ನಿಟ್ಟವರು ಸುಖಿಗಳಾಗುವರು. ಇದಕ್ಕೆ ನಿದರ್ಶನ ಗವಾಯಿಗಳೇ ಎಂದು ಹೇಳಬಹುದು. ನೂರಾರು ಜನ ವಿದ್ಯಾರ್ಥಿಗಳನ್ನು ಕಟ್ಟಿಕೊಂಡು ಅವರ ಯೋಗಕ್ಷೇಮವನ್ನು ವಹಿಸಿದ ಗವಾಯಿಗಳ ನಿಷ್ಠೆಯನ್ನು ಪರೀಕ್ಷಿಸುವ ಕಾಲ ಬಂದೊದಗಿತು. ಎಲ್ಲ ಕಡೆಗೂ ಬರಗಾಲದ ಭೀಕರ ದೃಶ್ಯ. ಒಂದು

ಒಪ್ಪತ್ತಿನ ಊಟ ಸಿಕ್ಕರೆ ಸಾಕೆಂದು ಹೇಳುವ ಪರಿಸ್ಥಿತಿಯು ಕೂಡ ತಪ್ಪಿ ಬಾಯ್ಬಿಡುತ್ತ ಅತ್ತಿತ್ತ ಅಲೆದಾಡುವ ಪ್ರಸಂಗದಲ್ಲಿಯೂ ಗವಾಯಿಗಳು ತಮ್ಮ ಶಿಷ್ಯರನ್ನು ಕಡಿಮೆ ಮಾಡಬೇಕೆಂದು ಬಯಸಲಿಲ್ಲ. ಒಂದು ದಿನ ಲೇಖಕರೇ ಗವಾಯಿಗಳಿಗೆ ಹೀಗೆ ಹೇಳಬೇಕಾಯಿತು- "ಗವಾಯಿಗಳೇ ! ಈ ಬರಗಾಲ ಮುಗಿಯುವತನಕ ವಿದ್ಯಾರ್ಥಿಗಳನ್ನು ಅರವರವ ಊರಿಗೆ ಕಳಿಸಿರಿ. ಸುಮ್ಮನೇ ತೊಂದರೆಯನ್ನು ಅನುಭವಿಸುವದು ಬೇಡ." ಆಗ ಅವರಿಂದ ಉತ್ತರ ಬಂದುದು ಹೀಗೆ- "ನಾನೇನೂ ಬರಗಾಲಕ್ಕೆ ಹೆವರಿ ವಿದ್ಯಾರ್ಥಿಗಳನ್ನು ಊರಿಗೆ ಕಳಿಸುವದಿಲ್ಲ. ನಾನು ಯಾವದನ್ನೂ ಅಹಂಕಾರ ಮಮಕಾರದಿಂದ ಮಾಡುವದಿಲ್ಲ. ಸ್ವಾಮಿ ಹಚ್ಚಿದ ಕೆಲಸ; ಆತ ನಿಲ್ಲಿಸುವವರೆಗೂ ಇದು ಹೀಗೆಯೇ ಸಾಗುವದು." ಇದು ಗವಾಯಿಗಳ ದೃಢವಾದ ನಿಷ್ಠೆಯ ನಿದರ್ಶನ. ಪರಮಾತ್ಮನು ತನ್ನ ಭಕ್ತರನ್ನು ಅನೇಕ ರೀತಿಯಿಂದ ಪರೀಕ್ಷಿಸಿ ನೋಡುತ್ತಾನೆ. ಕಡೆಗೆ ಜಯ ಭಕ್ತನಿಗೆ. "ಕೊಲುವೆನೆಂಬ ಭಾಷೆ ದೇವನದು. ಗೆಲುವೆನೆಂಬ ಭಾಷೆ ಭಕ್ತನದು" ಎಂಬ ಮಹಾನುಭಾವಿ ಬಸವಣ್ಣನವರ ಅನುಭವೋಕ್ತಿಯನ್ನು ಸ್ಮರಿಸಿಕೊಳ್ಳಬಹುದು.

## ನಿರ್ಭಯರು

ಶಿವಯೋಗಿ ಕೃಪೆಪಡೆದ ಗವಾಯಿಗಳಿಗೆ ಯಾವುದರಿಂದಲೂ ಭಯವಿರಲಿಲ್ಲ. ತಮ್ಮ ಇಚ್ಛೆಯನ್ನು ಪ್ರಭುವಿನ ಇಚ್ಛೆಯಲ್ಲಿ ಕೂಡಿಸಿ ಪ್ರಭುವಿನ ಇಚ್ಛೆಯಂತೆ ನಡೆಯುವವರು ಈ ಲೋಕದ ಯಾವ ತೊಂದರೆಗಳಿಗೂ ಭಯಪಡಬೇಕಾಗಿಲ್ಲ. ವಿಪತ್ತುಗಳು ಕೂಡ ಅಂಥವರ ದೃಷ್ಟಿಯಲ್ಲಿ ಸಂಪತ್ತುಗಳಾಗಿಯೇ ಪರಿಣಮಿಸುವವು ನಿಜವಾದ ಭಕ್ತಿಯುಳ್ಳವನಿಗೆ ಭಯವಿಲ್ಲ, ಭಯವುಳ್ಳವನು ಎಂದೂ ನಿಜಭಕ್ತನಾಗಲಾರ.

ತಮ್ಮ ಆಚಾರ ವಿಚಾರಗಳನ್ನು ಕಾಯ್ದುಕೊಂಡು ತಾವು ಕೈಕೊಂಡ ಕಾಯಕವನ್ನು ನಿಷ್ಠೆಯಿಂದ ನೆರವೇರಿಸುತ್ತ ನಡೆದ ಗವಾಯಿಗಳಿಗೆ ಎಷ್ಟೋ ಅಡಚಣಿಗಳು ಬರುತ್ತಿದ್ದವು. ಆರ್ಥಿಕ ಅಡಚಣಿಯಂತೂ ಅವೆಲ್ಲವುಗಳ ಕೇಂದ್ರ ಸ್ಥಾನ. ಅಂಥ ಒಂದು ಪ್ರಸಂಗದಲ್ಲಿ ಲೇಖಕನು ಗವಾಯಿಗಳಿಗೆ ನಾಟಕದಿಂದ ನಿಮ್ಮ ಅಡಚಣಿ ಹಿಂಗುವದೆಂದು ಹೇಳಬೇಕಾಯಿತು. ಸದಾ-ಚಾರ ನಿಷ್ಠರೂ ಶಿವಯೋಗಿ ಕೃಪಾಪ್ರಪೂರ್ಣರೂ ಆದ ಅವರಿಗೆ ನಾಟಕವೆಂದರೆ ಒಮ್ಮೆಲೆ ಹಿಡಿಸಲಿಲ್ಲ. ದುರ್ವೃತ್ತಿಯವರ ಕೈಯಲ್ಲಿ ನಾಟಕ ಸಿಕ್ಕು ಅದು ತನ್ನ ಗೌರವವನ್ನೇ ಕಳೆದುಕೊಂಡದ್ದೇ ಇದಕ್ಕೆ ಕಾರಣ. ಮುಂದೆ

ಶಿವಯೋಗಿ ಪ್ರೇರಣೆಯಿಂದ ಅವರು ನಾಟಕವನ್ನೇ ಆಶ್ರಯಿಸಿ, ತಮ್ಮ ಎಲ್ಲ ಆರ್ಥಿಕ ಅಡಚಣಿಯನ್ನು ದೂರಮಾಡಿಕೊಂಡು ಒಳ್ಳೇ ಸಂತೋಷದಿಂದ ಇರಹತ್ತಿದರು.

ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಪರಿಶ್ರಮಪಡುವ ಗವಾಯಿಗಳಿಗೆ ತಮ್ಮ ಶರೀರದ ಆರೋಗ್ಯದ ಕಡೆಗೆ ಲಕ್ಷ್ಯಗೊಡುವದೇ ಕಡಿಮೆಯಾಗಿತ್ತು. ಬಿದ್ದು ಹೋಗುವ ಶರೀರವನ್ನು ಅಷ್ಟು ಮಮಕರಿಸುವದು ಗವಾಯಿಗಳಿಗೆ ಬೇಡಾಗಿ ತ್ತೆಂದು ತೋರುತ್ತದೆ. ರೋಗ ದೇಹಧರ್ಮ. ಅದಕ್ಕೆ ಯಾವದು ಯಾವಾಗ ಘಟಿಸುವದೋ ಹೇಳಲಿಕ್ಕಾಗುವದಿಲ್ಲ. ಗವಾಯಿಗಳಿಗೆ ಉದರ ರೋಗವಾಯಿತು. ಅವರು ಆಚಾರನಿಷ್ಠರಾದ್ದರಿಂದ ತಮ್ಮ ರೋಗ ಪರಿಹಾರಕ್ಕೆ ಚಿಕಿತ್ಸೆ ಮಾಡಿಸಿ ಕೊಳ್ಳುವಲ್ಲಿ ಉಪೇಕ್ಷೆ ಮಾಡುತ್ತ ಬಂದರು. ಗವಾಯಿಗಳಲ್ಲಿ ಅತ್ಯಂತ ಭಕ್ತಿ ಇಟ್ಟುಕೊಂಡ ಸಮರ್ಥ ಡಾಕ್ಟರರು ಸೇವಾ ಬುದ್ಧಿಯಿಂದ ಚಿಕಿತ್ಸೆ ಮಾಡಲು ಮುಂದೆ ಬಂದರೂ ತಮ್ಮ ಆಚಾರಕ್ಕೆ ಎಲ್ಲಿ ಚ್ಯುತಿ ಬರುವದೋ ಎಂದು ಒಪ್ಪಲಿಲ್ಲ. ರೋಗ ದಿನದಿನಕ್ಕೂ ಹೆಚ್ಚಾಗಹತ್ತಿತು. ಬಹು ಜನರು ಗವಾಯಿ ಗಳನ್ನು ಚಿಕಿತ್ಸೆ ಮಾಡಿಸಿಕೊಳ್ಳಲು ಪ್ರಾರ್ಥಿಸಿದರು. ಲೇಖಕನು ಒಂದು ದಿನ ಗವಾಯಿಗಳೇ ! ನೀವು ನಿಮಗಾಗಿ ಬದುಕಬೇಕೆಂದು ನಾನು ಹೇಳುವದಿಲ್ಲ. ಸಮಾಜಕ್ಕಾಗಿ ನೀವು ಬಹು ದಿನ ಬದುಕಬೇಕಾಗಿದೆ. ಅದಕ್ಕಾಗಿ ಚಿಕಿತ್ಸೆ ಮಾಡಿಸಿ ಕೊಳ್ಳಲು ಭಯಪಡಬೇಕಾಗಿಲ್ಲ ಎಂದು ಹೇಳಿದ ಕೂಡಲೇ ಅವರು " ನಾನು ಚಿಕಿತ್ಸೆ ಮಾಡಿಸಿಕೊಳ್ಳಬೇಕೆಂದು ನನ್ನ ಆರಾಧ್ಯಮೂರ್ತಿ ಕುಮಾರ ಶಿವಯೋಗಿಯ ಪ್ರೇರಣೆಯಾದರೆ ಮಾಡಿಸಿಕೊಳ್ಳಲು ಸಿದ್ಧನಿದ್ದೇನೆ " ಎಂದರು. ಪ್ರಾಣಹೋದರೂ ಅಡ್ಡಿಯಿಲ್ಲ; ಹಿಡಿದ ವ್ರತವನ್ನು ಬಿಡಲಾರೆ ಎಂಬುದೇ ಗವಾಯಿಗಳ ಛಲ.

## ಅವಸಾನ ಕಾಲ

ಗವಾಯಿಗಳು ಉದರ ರೋಗದಿಂದ ಪೀಡಿತರಾದಾಗಲೂ ತಮ್ಮ ಲಿಂಗಪೂಜಾಕ್ರಮದಲ್ಲಿ ಎಷ್ಟೂ ವ್ಯತ್ಯಾಸವಾಗದಂತೆ ಎಚ್ಚರವಹಿಸುತ್ತಿದ್ದರು. " ಶರಣರ ಅರಿವನ್ನು ಮರಣದಲ್ಲಿ ನೋಡು " ಎಂಬ ಅನುಭವಿಗಳ ಉಕ್ತಿಯಂತೆ ಗವಾಯಿಗಳ ಕೊನೆಯ ಜೀವನದಲ್ಲಿ ಅವರು ಎಷ್ಟು ಲಿಂಗನಿಷ್ಠೆಯುಳ್ಳವರಾಗಿದ್ದ ರೆಂಬುದು ಸ್ಪಷ್ಟವಾಗಿಯೇ ತೋರುತ್ತಿತ್ತು. ಬಾಹ್ಯಪ್ರಜ್ಞೆ ತಪ್ಪಿದಾಗ ಅಂತಃ ಪ್ರಜ್ಞೆಪೂರ್ಣ ಜಾಗೃತವಾಗಿದ್ದುದನ್ನು ಲೇಖಕನು ಪ್ರತ್ಯಕ್ಷ ಕಂಡಿರುವನು. ಸ್ನಾನಮಾಡಿ ಮಡಿ ಬಟ್ಟೆಯನ್ನುಟ್ಟುಕೊಂಡು ಗದ್ದುಗೆಯ ಮೇಲೆ ಕುಳಿತು

ಹಸ್ತದಲ್ಲಿದ್ದ ಇಷ್ಟಲಿಂಗವನ್ನು ಪೂಜಿಸುತ್ತ ಜಪಮಾಡುತ್ತಿರುವನ್ನು ನೋಡಿದರೆ ಇಂತಹ ಕರಾಲಕಾದಲ್ಲಿಯೂ ಶರಣರು ಇದ್ದಾರಲ್ಲಾ ! ಎಂಬ ಭಾವ ಜಾಗ್ರತ ವಾಗುತ್ತಿತ್ತು. ಕಡೆಗೆ ಶುಚಿಯಾಗಿದ್ದು ಶಿವಪೂಜೆ ಮಾಡುವಲ್ಲಿಯೇ ತಮ್ಮ ಕೊನೆಯ ಶ್ವಾಸವನ್ನು ಬಿಟ್ಟು ಅಮರರಾದರು. ಗವಾಯಿಗಳನ್ನು ಸಮಾಧಿಗೆ ಒಯ್ಯುವಾಗಲೂ ಕೂಡ ಮಡಿಯಾಗಿರುವವರೇ ಅವರನ್ನು ಹೊತ್ತುಕೊಂಡು ಹೇಗಬೇಕಾಯಿತು. ಸಮಾಧಿಯ ಕಾಲದಲ್ಲಿ ಒಂದು ಚರಮ ಪದ್ಯವನ್ನು ಮಾಡಿಸಿ; ಗವಾಯಿಗಳ ವಿದ್ಯಾರ್ಥಿಯಿಂದಲೇ ಅನಿಸಲಾಯಿತು. ಗವಾಯಿಗಳ ಸುದ್ದೈವವು ಹಾಲಕೆರೆ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳನ್ನು ಬರಮಾಡಿ ಕೊಂಡು ಅವಸಾನ ಕ್ರಿಯೆಗಳು ಮುಗಿಯುವತನಕ ಅವರೇ ನಡಕಟ್ಟಿ ನಿಲ್ಲು ವಂತೆ ಮಾಡಿತು. ಗವಾಯಿಗಳ ಅವಸಾನವನ್ನು ಸೂರ್ಯನು ನೋಡಲಿಕ್ಕಾಗದೆ ಪಶ್ಚಿಮ ಸಮುದ್ರದಲ್ಲಿ ಮುಳುಗಿದ ಕಾಲ. ಪರಮ ಶಿಷ್ಯರಾದ ಲಿಂಗೈಕ್ಯ ಬಸರಿಗಿಡದ ವೀರಪ್ಪನವರು ದಾನವಾಗಿ ಕೊಟ್ಟ ಠಾಣದಲ್ಲಿಯೇ ಸಮಾಧಿಕಾರ್ಯ ನಡೆಯಿತು. ಅದಕ್ಕಿಂತ ಪೂರ್ವದಲ್ಲಿ ಲೇಖಕನು ಅಲ್ಲಿಯೇ ಗವಾಯಿಗಳ ಬಗೆಗೆ ಉಪನ್ಯಾಸ ಮಾಡಿ ಅವರ ಕೊನೆಯ ಕಾಲದ ಮಹತ್ವವನ್ನು ಹೇಳಿದ್ದಾಯಿತು. ಪ್ರತಿವರುಷವೂ ಸಚ್ಛಿಷ್ಯರಾದ ವಿದ್ವಾನ್ ಪುಟ್ಟರಾಜ ಕವಿಗಳು ಗವಾಯಿಗಳ ಲಿಂಗೈಕ್ಯ ದಿನಾಚರಣೆಯನ್ನು ಒಳ್ಳೇ ವಿಜೃಂಭಣೆಯಿಂದ ಮಾಡುತ್ತಿರುವರು. ಭಕ್ತರು ಅನೇಕ ರೀತಿಯಿಂದ ನೆರವಾಗುತ್ತಿರುವರು.

ಶ್ರೀ ಪುಟ್ಟರಾಜರು ತನ್ನ ಗುರುಗಳ ಆಜ್ಞೆಯಂತೆ ಅವರ ಸಂಕಲ್ಪ ವನ್ನು ಮುಂದುವರಿಸಿಕೊಂಡು ಹೋಗುತ್ತಿರುವದು ಸಮಾಜಕ್ಕೂ ಕನ್ನಡನಾಡಿಗೂ ಭೂಷಣವಾಗಿದೆ.

ಗವಾಯಿಗಳನ್ನು ಲೇಖಕನು ಮೊದಲು ನೋಡಿದ್ದು ೧೯೧೮ನೇ ಇಸ್ವಿಯಲ್ಲಿ. ರೋಣ ತಾಲೂಕ ಇಟಗಿ ಗ್ರಾಮದಲ್ಲಿರುವ ಹಾಲಕೆರೆ ಶ್ರೀಗಳ ಮಠದಲ್ಲಿ. ಆಗ ಶ್ರಾವಣ ಮಾಸ, ಲಿಂಗೈಕ್ಯ ಬಸವಲಿಂಗಶಾಸ್ತ್ರಿಗಳು ದ್ಯಾವಾಪುರ ಅವರಿಂದ ಶ್ರೀ ಶರಣ-ಬಸವ ಪುರಾಣ ಪ್ರವಚನ ನಡೆದಿತ್ತು. ನಾನು ಸಂಸ್ಕೃತ ಪಾಠಶಾಲೆಗೆ ಹೊಸದಾಗಿ ಬಂದದ್ದು ಆಗಲೇ. ಪಾವನ ಮೂರ್ತಿಗಳ ಜೀವನ ಆದರ್ಶಮಯ ವಾಗಿದೆ. ಅವರ ಜೀವನದಿಂದ ನಾವು ಕಲಿತುಕೊಳ್ಳುವದು. ಒಳ್ಳೇ ಬಾಳನ್ನು ನಡಿಸುವದೆಂತು ! ಬಂದ ವಿಪ್ಪತ್ತುಗಳನ್ನು ಎದುರಿಸಿ, ಮುಂದೆನಾಗುವದು ಹೇಗೆ ? ಎಂಬುದು. ಒಳ್ಳೇ ಬಾಳನ್ನು ನಡೆಸುವವರು, ಒಳ್ಳೇ ಮರಣವನ್ನು

ಪಡೆಯುವರು. ಒಳ್ಳೇ ಮರಣವೆಂದರೆ ದೇಹತ್ಯಾಗದ ಭಯವಿಲ್ಲದೆ ಆತ್ಮಸ್ಮೃತಿಯಲ್ಲಿ, ದೇವರ ಧ್ಯಾನದಲ್ಲಿ ಪ್ರಾಣತ್ಯಾಗ ಮಾಡುವದು.

ಗವಾಯಿಗಳು ಸ್ಥೂಲಕಾಯದಿಂದ ದೂರಾಗಿದ್ದರೂ ಅವರ ಅಮರವಾದ ಕೀರ್ತಿಕಾಯವು ಎಂದೆಂದಿಗೂ ಅಬಾಧವಾಗಿಯೇ ಉಳಿಯುವದು. ಅವರ ಪಟ್ಟದ ಶಿಷ್ಯರಾದ ಪಂ. ಪುಟ್ಟರಾಜ ಗವಾಯಿಗಳು ಗುರುಗಳ ಆದರ್ಶವನ್ನೇ ತಮ್ಮ ಮುಂದಿಟ್ಟುಕೊಂಡು ತಮ್ಮ ಗುರುಗಳ ಕೀರ್ತಿ ಹೆಚ್ಚುವಂತೆ ವರ್ತನವನ್ನಿಟ್ಟುಕೊಂಡದ್ದು ನಮ್ಮ ಸಮಾಜದ ನಾಡಿನ ಮಹಾಭಾಗ್ಯ.

# ಕಾಯಕನಿರತ ಶ್ರೀ ಪಂಚಾಕ್ಷರಿ

ಶ್ರೀಮತಿ ಗುರುದೇವಿ, ಹಿರೇಮಠ, ಬೆಂಗಳೂರು

" ಮತ್ತು ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ " ಎಂಬ ಬಸವಣ್ಣನ ವಾಣಿಯನ್ನು ನಿದರ್ಶನ ಮಾಡಲೆಂಬಂತೆ, ಭೂಲೋಕಕ್ಕೆ ಹುಟ್ಟಿ ಬರುವಾಗಲೇ ಅಂಧರಾಗಿ ಹುಟ್ಟಿ ಬಂದರು ಶ್ರೀ ಪಂಚಾಕ್ಷರಿ ಗವಾಯಿಗಳು. ಆದರೆ, ಅವರ ಕಣ್ಣು ಕುರುಡಾದರೂ ಅವರ ಜ್ಞಾನ ಕುರುಡಾಗಿರಲಿಲ್ಲ ಜ್ಞಾನದ ಬೆಳಕಿನಿಂದಲೇ ಲೋಕವನ್ನು ತಿಳಿದು, ಮರೆತು ಮಾನವರಾಗದೆ ಆರಿತು ಶರಣರಾದರು.

ಮಹಾಭಾರತದ ಕಾಲದಲ್ಲಿ ಇಂದಿನ ಕನ್ನಡ ನಾಡಿನ ಹಾನಗಲ್ಲು ಅಂದು ಪಾಂಡವರಿಗೆ ಅಜ್ಞಾತ ವಾಸದಲ್ಲಿ ಆಶ್ರಯವಿತ್ತ ಸ್ಥಾನ. ಅದೇ ಇಂದು ಶ್ರೀ ಕುಮಾರೇಶ್ವರರ ಪಾದ-ಧೂಳಿಯಿಂದ ಪಾವನವಾದ ಹಾನಗಲ್ ತಾಲೂಕಿನಲ್ಲಿ ಕಾಡಶೆಟ್ಟಿಹಳ್ಳಿ ಎಂಬ ಚಿಕ್ಕಗ್ರಾಮದಲ್ಲಿ ವೀರಶೈವ ಧರ್ಮದ ಉಜ್ವಲ ಪರಂಪರೆಯಾದ ಚರಂತಿಮಠದ ಗುರುಪಾದಯ್ಯ ಹಾಗೂ ಅವರ ಧರ್ಮಪತ್ನಿ ನೀಲಮ್ಮ ಎಂಬ ದಂಪತಿಗಳಲ್ಲಿ ಜನ್ಮ ತಾಳಿದರು ಶ್ರೀ ಪಂಚಾಕ್ಷರಿ ಗವಾಯಿಗಳು ಬಾಲ ಗದ್ದಿಗಯ್ಯನಾಗಿ ಕ್ರಿ. ಶ. ೧೮೯೨ ನೆಯ ಫೆಬ್ರುವರಿ ದಿ. ೨ ರಂದು. ಆದರೆ, ಆ ಮಗು ಭೂಮಿಗೆ ಬಂದಾಕ್ಷಣವೇ ಕುರುಡನೆಂದು ತಿಳಿದಾಗ ತಾಯಿ-ತಂದೆಗಳಿಗೆ ಅಪಾರ ವ್ಯಸನವಾಯಿತು. ಆ ದಂಪತಿಗಳು ಹುಟ್ಟು ಕುರುಡ ಮುಂದೆ ಲೋಕದ ಕುರುಡನ್ನು ಕಳೆಯುವ ಮಹಾ ಪುರುಷನಾಗುವನೆಂಬುದನ್ನು ಅರಿವುದಾದರೂ ಹೇಗೆ ?

" ಹೆತ್ತವರಿಗೆ ಹೆಗ್ಗಣ ಮುದ್ದು " ಎಂಬ ನಾಣ್ಣುಡಿಯಂತೆ ಮಗು ಹೇಗಿದ್ದರೂ ತಾಯಿ ಆದವಳು ಪಾಲನ ಪೋಷಣ ಮಾಡುವ ಕರ್ತವ್ಯದ ಹೊಣೆಯನ್ನು ಹೊರಲೇಬೇಕಲ್ಲವೇ ! ಪದ್ಧತಿಯಂತೆ ಮಗುವಿಗೆ ಗದಿಗಯ್ಯನೆಂದು ತಂದೆ-ತಾಯಿಗಳು ನಾಮಕರಣ ಮಾಡಿದರು.

" ಬೆಳೆಯ ಸಿರಿ ಮೊಳಕೆಯಲ್ಲಿ ನೋಡಾ " ಎಂಬಂತೆ ಕುಮಾರ ಗದಿಗೆಯ್ಯನು ತನ್ನ ಚಿಕ್ಕವಯಸ್ಸಿನಲ್ಲಿಯೇ ದೇವರ ನಾಮವನ್ನು ಮತ್ತು ಭಜನೆ ಪದಗಳನ್ನು ಇಂಪಾಗಿ ಹಾಡುವದನ್ನು ಕಲಿತನು. ಆತನು ಹಾಡುವದು

ತಂದೆ- ತಾಯಿಗಳಿಗೆ ಬಹಳ ಆನಂದವನ್ನು ಉಂಟುಮಾಡುತ್ತಲಿತ್ತು. ಗದಿಗಯ್ಯನು ಚಲುವಾಗಿ ಇದ್ದನು. ಮಾಟವಾದ ಮೈಕಟ್ಟು, ವಿಶಾಲವಾದ ಹಣೆ-ಸುಲಕ್ಷಣಗಳಿಂದ ಬೆಳೆದ ಬಾಲಕನನ್ನು ನೋಡಿ, ತಂದೆ-ತಾಯಿಗಳು ಮುಂದಿನ ಆತನ ಭವಿಷ್ಯವನ್ನು ಕುರಿತು; ಹಗಲಿರುಳು ಚಿಂತೆಗೆ ಒಳಗಾಗುತ್ತಲಿದ್ದರು. ಆ ಚಿಂತೆಗೆ ದಾರಿ ದೀಪವಾಗಿ ನಿಂತಿತು ಶಿವಯೋಗ ಮಂದಿರ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಅನುಭವಮಂಟಪ ಸ್ಥಾಪಿಸಿ ತತ್ವಬೋಧನೆಯನ್ನು ಮಾಡಿದರು. ಅದರಂತೆ ಇಪ್ಪತ್ತನೆಯ ಶತಮಾನ ದಲ್ಲಿ ಹಾನಗಲ್ ಪೂಜ್ಯ ಶ್ರೀ ಕುಮಾರ ಸ್ವಾಮಿಗಳು ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ಕನ್ನಡ ನಾಡಿನಲ್ಲಿ ಶಿವಯೋಗ ಮಂದಿರವು ಸಿರಿಗನ್ನಡದ ಧಾರ್ಮಿಕ ಧ್ಯೇಯವುಳ್ಳ ಸಂಸ್ಥೆಗಳಲ್ಲಿ ಒಂದಾಗಿದೆ. ನಾಡಿನ ಮೂಲೆ ಮೂಲೆಗಳಿಂದ ವಿದ್ಯಾರ್ಥಿ ಗಳು ಬಂದು ಅಲ್ಲಿ ನೆಲೆಸಿ ವಿದ್ಯಾವಂತರಾಗುವರು. ವಿದ್ಯಾರ್ಥಿಗಳಿಗೆ ಉಚಿತ ಊಟ, ಹಾಗೂ ಬಟ್ಟೆಗಳನ್ನು ಕೊಟ್ಟು ವಿದ್ಯೆಗಳನ್ನು ಕಲಿಸುತ್ತಿರುವರು. ಅಲ್ಲಿ ಕುರುಡರು ಅಂಗವಿಕಲರನ್ನು ಕೂಡ ಸೇರಿಸಿಕೊಂಡು ಅವರಿಗೆ ಅನುಕೂಲವಾದ ಕಲೆಗಳಲ್ಲಿ ನೈಪುಣ್ಯತೆಯನ್ನು ಪಡೆಯುವಂತೆ ವಿದ್ಯಾದಾನ ನಡೆಸುತ್ತಲಿದ್ದರು.

ಶ್ರೀ ಕುಮಾರ ಸ್ವಾಮಿಗಳು ಬಾಲಕ ಗದಿಗಯ್ಯನನ್ನು ಕಣ್ತುಂಬ ನೋಡಿದರು. ಆತನ ಹಾಡುಗಳನ್ನು ಕೇಳಿ ಸಂತೋಷಪಟ್ಟರು. ತಮ್ಮ ಅಂತ-ರಾತ್ಮದಿಂದ ಮುಂದೆ ಈ ಬಾಲಕನಿಗೆ ಸಂಗೀತದಲ್ಲಿ ಭವಿತವ್ಯವಿದೆಯೆಂಬುದನ್ನು ಅರಿತು ಬಾಲಕ ಗದಿಗಯ್ಯನನ್ನು ತಮ್ಮ ಸಂಸ್ಥೆಯಲ್ಲಿ ಸೇರಿಸಿಕೊಂಡರು; ಮತ್ತು ಆತನ ಅಭಿರುಚಿಯಾದ ಸಂಗೀತವನ್ನು ಕಲಿಸುವ ಏರ್ಪಾಡನ್ನು ಮಾಡಿದರು. ಯಾವ ಕಲೆಗಾರರನ್ನು ಯಾವ ಕಾಯಕದವರನ್ನು ಕಂಡರೂ ಅವರವರ ಆಯಾ ಕಲೆ ಕಾಯಕಗಳ ಕೌಶಲ್ಯದ ಆಳವನ್ನು ನಿರೀಕ್ಷಿಸದೆ ಅವರಿಗೆ ತೃಪ್ತಿಯಾಗು ತ್ತಿದ್ದಿಲ್ಲ. ವಿದ್ಯಾರ್ಥಿಗಳಿಗೆ ಉತ್ತೇಜನ ಕೊಟ್ಟು ಉತ್ತಮ ಸ್ಥಿತಿಗೆ ಬರುವಂತೆ ಮಾರ್ಗದರ್ಶನ ಮಾಡಿಕೊಡುತ್ತಲಿದ್ದರು. ಇವರಿಂದ ಆ ಸಂಸ್ಥೆಯಲ್ಲಿ ಅನೇಕ ಕಲಾವಂತರು ಕಾರ್ಯರಂಗದಲ್ಲಿ ಬೆಳಗಿದರು. ಇಂಥ ಮಹಾ ಸಂಸ್ಥೆಯಾದ ಶಿವಯೋಗ ಮಂದಿರದಲ್ಲಿ ಬಾಲಕ ಗದಿಗಯ್ಯನು ಕಲಾವಂತನಾಗಿ ಕಾಯಕ ಶೀಲನಾಗಿ ಶ್ರೀ ಕುಮಾರೇಶ್ವರನ ಕೃಪಾಪಾತ್ರಕ್ಕೆ ಪಾತ್ರನಾಗಿ ಬೆಳಗಿದನು.

ಕೆಲವು ವರ್ಷಗಳಲ್ಲಿ ಗದಿಗಯ್ಯನು ಕರ್ನಾಟಕ ಮತ್ತು ಹಿಂದುಸ್ಥಾನಿ ಸಂಗೀತಗಳನ್ನು ಕಲಿತನು. ಅಂದು ಬಾಗಲಕೋಟೆಯಲ್ಲಿ ಸೇರಿದ ವ.ಹಾ

ಸಭೆಯಲ್ಲಿ ಆತನು ಹಾಡಿದನು. ಆಗ ಶ್ರೀ ಕುಮಾರ ಸ್ವಾಮಿಗಳು ತಮ್ಮ ಶಿಷ್ಯನ ಸಂಗೀತವನ್ನು ಕೇಳಿ, ಅತ್ಯಂತ ಸಂತೋಷಭರಿತರಾಗಿ ಕುಮಾರ ಗದಿಗಯ್ಯನಿಗೆ "ಪಂಚಾಕ್ಷರಿ" ಎಂಬ ಹೊಸ ನಾಮಕರಣ ಮಾಡಿದರು. ಮತ್ತು ಆತನಿಗೆ "ನೀನು ಆಜನ್ಮ ಬ್ರಹ್ಮಚಾರಿಯಾಗಿದ್ದು ಸಂಗೀತವನ್ನೇ ನಿನ್ನ ಧ್ಯೇಯವಾಗಿ ಇಟ್ಟುಕೊಂಡು ಸಂಗೀತ ಪ್ರಸಾರಮಾಡು ಇದೇ ನಿನ್ನ ಶಿವಪೂಜೆ" ಎಂದು ಆಜ್ಞೆಯಿತ್ತರು. ಗುರುಗಳ ಆಜ್ಞೆಯನ್ನು ಶಿರಸಾವಹಿಸಿ, ಮುಂದೆ ಪಂಚಾಕ್ಷರಿಯು ಸಂಗೀತವನ್ನೇ ತನ್ನ ಕಾಯಕ ಎಂದು ಅರಿತು ಅದರಲ್ಲಿಯೇ ನಿರತನಾದನು.

ಮುಂದೆ ೧೯೧೪ರಲ್ಲಿ ರೋಣ ತಾಲೂಕಿನಲ್ಲಿ ನಿಡಗುಂದಿಕೊಪ್ಪ ಎಂಬ ಗ್ರಾಮದಲ್ಲಿ ಒಂದು ಸಂಗೀತ ವಿದ್ಯಾಲಯವು ಸ್ಥಾಪಿತವಾಯಿತು. ಅಲ್ಲಿ ಪಂಚಾಕ್ಷರಿ ಗವಾಯಿಗಳು ಸಂಗೀತ ಶಿಕ್ಷಕರಾದರು. ಗವಾಯಿಗಳು ವಿದ್ಯಾರ್ಥಿಗಳಲ್ಲಿ ಜಾತಿ-ಮತಗಳನ್ನು ಎಣಿಸದೆ ಎಲ್ಲ ವಿದ್ಯಾರ್ಥಿಗಳಿಗೆ ಉಚಿತ ಅನ್ನ-ಬಟ್ಟೆಗಳನ್ನು ಕೊಡುವ ಏರ್ಪಾಡು ಮಾಡಿದರು. ಸಂಗೀತ ಕಲಿಯುವ ಹಂಬಲ ಇದ್ದವರಿಗೆಲ್ಲ ತಮ್ಮ ಸಂಸ್ಥೆಯಲ್ಲಿ ಅನುವು ಮಾಡಿಕೊಟ್ಟರು. ಅಲ್ಲಿ ಅನೇಕ ಜನರು ಕುರುಡರು ಮತ್ತು ಅಂಗವಿಕಲರು ಸಹ ಬಂದು ಆ ಸಂಸ್ಥೆಯಲ್ಲಿ ಸೇರಿ ಅವರವರು ತಮ್ಮ ಪಾಲಿನ ಕಾಯಕದಲ್ಲಿ ನಿರತರಾದರು. ಪಂಚಾಕ್ಷರಿ ಗವಾಯಿಗಳು ಸಂಗೀತ ಪ್ರಸಾರಕ್ಕಾಗಿ ತಮ್ಮ ಶಿಷ್ಯರೊಂದಿಗೆ ನಾಡಿನ ನಾನಾಕಡೆಗಳಲ್ಲಿ ಸಂಚರಿಸಿದರು.

೧೯೩೪ರಲ್ಲಿ ಪಂಚಾಕ್ಷರಿ ಗವಾಯಿಗಳು ಸಂಚಾರಗೈಯುತ್ತ ಧಾರವಾಡ ಜಿಲ್ಲೆ ಹಾವೇರಿ ತಾಲೂಕಿಗೆ ಆಗಮಿಸಿದ್ದರು ಆ ಸಮಯದಲ್ಲಿ ನಾವು ಹಾವೇರಿಯಲ್ಲಿಯೇ ಇದ್ದೆವು. ಅಂದು ಅವರನ್ನು ನಾವು ಸಂದರ್ಶಿಸಿದಾಗ ಅವರ ಆರ್ಥಿಕ ಸ್ಥಿತಿ ಅಷ್ಟು ಅನುಕೂಲವಿರಲಿಲ್ಲವೆಂದು ಕಂಡು ಬಂದಿತು. ಆಗ ಅವರಿಗೆ ಸಹಾಯಧನ ಕೊಡಿಸಿಕೊಡಬೇಕೆಂದು ನಿಶ್ಚಯಿಸಿ ಏರ್ಪಾಟು ಮಾಡಲಾಯಿತು. ಅದರಂತೆ ಗವಾಯಿಗಳಿಗೆ ತಿಳಿಸಿದೆವು. ಅದಕ್ಕೆ ಅವರು ಒಪ್ಪಲಿಲ್ಲ. "ಸಹಾಯ ಕೊಡಬೇಕೆನಿಸಿದರೆ ನನ್ನ ಗಾಯನದ ಏರ್ಪಾಟು ಮಾಡಿರಿ. ನಾನು ನನ್ನ ಕಾಯಕ ಮಾಡದೆ ಹಣ ಪಡೆಯಲಾರೆನು" ಎಂದು ತಿಳಿಸಿದರು. ನಮಗಂತೂ ಆಶ್ಚರ್ಯವೆನಿಸಿತು. ಅವರಿಗೆ ಯಾವ ಶ್ರಮವಿಲ್ಲದೆ ಹಣ ಕೊಡಿಸಿಕೊಡುತ್ತೇವೆ ಎಂದು ತಿಳಿಸಿದರೂ ಬೇಡವೆಂದು ತನ್ನ ಕಾಯಕದಿಂದಲೇ ಜೀವಿಸುವೆನೆಂಬ ಈ ಮಹಾತ್ಮನ ಪರಿಚಯ ಅಂದಾಯಿತು. ಇದನ್ನು ಅರಿತು ನಾವು ಅವರ ಗಾಯನಕ್ಕೆ ಏರ್ಪಾಟು ಮಾಡಿದೆವು. ಶ್ರೀ ಪಂಚಾಕ್ಷರಿ

ಗವಾಯಿಗಳು ಹಿಂದುಸ್ಥಾನಿ ಸಂಗೀತ ಮತ್ತು ಕರ್ನಾಟಕ ಸಂಗೀತವನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದರು. ಅಂದು ಸಂಗೀತ ಕೇಳಲು ಹಾವೇರಿ ಭಾಗದ ಸುತ್ತುಮುತ್ತಲಿನ ಹಳ್ಳಿಯ ಜನರು ಕೂಡ ಆಗಮಿಸಿದ್ದರು. ಜನರ ಮನಸ್ಸಿನ ಮೇಲೆ ಪ್ರಭಾವ ಬೀರುವಂತೆ ಅವರು ಬಸವಣ್ಣನವರ ವಚನ ಮತ್ತು ನಿಜಗುಣಿ ಯೋಗಿಗಳ ಮತ್ತಿತರ ಶರಣರ ಹಾಡುಗಬ್ಬಗಳನ್ನು ಬಹಳ ಭಕ್ತಿಯಿಂದ ಹಾಡುತ್ತಲಿದ್ದರು. ಅವರು ಹಾಡುವದನ್ನು ಕೇಳುವವರಿಗೆ ಭಕ್ತಿಯ ಭಾವ ತುಂಬಿ ಬರದೇ ಇರದು ಗಂಟೆಗಳು ಕಳೆದರೂ ಜನ ಅವರ ಗಾನಗಂಗೆಯ ನಾದ ಲೋಕದಲ್ಲಿ ತನ್ಮಯರಾಗಿ ತೇಲುತ್ತಿದ್ದರು. ನಾದಬ್ರಹ್ಮನಲ್ಲಿ ಗವಾಯಿಗಳು ತಾದಾತ್ಮ್ಯಹೊಂದಿ ಸ್ವರ್ಗ ಸಂಗೀತವಂತೆ ಭೂಲೋಕದಲ್ಲಿ "ಗಂಧರ್ವ" ಲೋಕವನ್ನು ಸೃಜಿಸುತ್ತಲಿದ್ದರು. ಅವರ ಹೆಸರು ಕರ್ನಾಟಕವಲ್ಲಿ ಬಹಳ ಪ್ರಖ್ಯಾತಿಗೆ ಬಂದಿತು. ಅವರ ಶಿಷ್ಯವರ್ಗವು ಬೆಳೆಯಹತ್ತಿತು.

## ಪಂಚಾಕ್ಷರಿ ಗವಾಯಿಗಳ ಉಪದೇಶ

"ದುಡಿಮೆಯೇ ದೇಹದ ಚೆಲುವಿನ ಮೂಲ" ಎಂಬಂತೆ ಮಾಡಿದರೆ ಪ್ರಕೃತಿ; ಇಲ್ಲದಿದ್ದರೆ ವಿಕೃತಿ. ಕಾಯಕವಂತರ ಕಾಯ, ವಾಕ್, ಮನ, ಬುದ್ಧಿ ಮತ್ತು ಆತ್ಮ ಎಲ್ಲವೂ ಪುಷ್ಟಿಗೊಂಡಿರುತ್ತವೆ. ಆಲಸ್ಯವನ್ನು ಹೊಡೆದೋಡಿಸಬೇಕು. ಸ್ವಂತ ದುಡಿದು ಉಣ್ಣಬೇಕು. ಎಂಥಾ ಕಷ್ಟಕಾಲ ಬಂದರೂ ಹೆದರಬಾರದು. ನಾವು ಕುರುಡರೆಂದು ವ್ಯಸನಪಡೆದೆ ಸ್ವಾವಲಂಬನದ ಜೀವನವನ್ನು ಸಾಗಿಸಲು ಕಲಿಯಬೇಕು- ಎಂದು ಶಿಷ್ಯರಿಗೆ ಮನಮುಟ್ಟುವಂತೆ ಉಪದೇಶ ಮಾಡಿ ಅನೇಕ ಕುರುಡರಿಗೆ ವಿದ್ಯಾದಾನ ಮಾಡುತ್ತಲಿದ್ದರು. ೧೯೪೦ ರಲ್ಲಿ ದೇಶಕ್ಕೆ ದೊಡ್ಡ ಬರಗಾಲ ಬಂದಿತು. ಆಗ ಅನ್ನದ ಅಭಾವ ತಲೆಭಾರವಾಗಿ ನಿಂತಿತು. ಇನ್ನೂ ನಮ್ಮ ದೇಶ ಸ್ವತಂತ್ರವಾಗಿರಲಿಲ್ಲ. ಅಂತಹ ಕಷ್ಟಕಾಲದಲ್ಲಿ ಪಂಚಾಕ್ಷರಿ ಗವಾಯಿಗಳ ಹತ್ತಿರ ಸಾಧಾರಣವಾಗಿ ನೂರ್ವೆವತ್ತಕ್ಕೂ ಮಿಕ್ಕಿ ಜನ ಶಿಷ್ಯರಿದ್ದರು. ಅಷ್ಟು ಜನರಿಗೆ ಅನ್ನ ಬಟ್ಟೆ ದೊರಕಿಸುವದು ಸುಲಭ ಸಾಧ್ಯವಿರಲಿಲ್ಲ. ಆಗಲೇ ಶಾಲೆಗಾಗಿ ಎಂಟು–ಹತು ಸಾವಿರ ರೂ. ಸಾಲ ಮಾಡಿದ್ದರು. ತ್ಯಾಗಿಗಳಿಗೆ ಮೇಲಿಂದ ಮೇಲೆ ಕಷ್ಟಗಳು ಬಂದು ಅವರ ಸತ್ವಪರೀಕ್ಷೆ ಆಗುವದುಂಟು. ಆದರೆ ಅವರು ನಿರಾಶರಾಗದೆ ಕಾಯಕದಲ್ಲಿ ದೃಢನಂಬಿಕೆ ಇಟ್ಟರು. ಶಿಷ್ಯರನ್ನು ಕೈಬಿಡಲಿಲ್ಲ. ಅವರವರ ಪಾಲಿನ ಕಾಯಕ ಅವರು ಮಾಡಿಯೇ ತೀರಬೇಕೆಂದು ಕಟ್ಟಪ್ಪಣೆ ವಿಧಿಸಲಾಯಿತು. ಆದ್ದರಿಂದ ಧರ್ಮ, ಕಲೆ, ವಿದ್ಯೆಗಳ ಸಂಗಮವಾಗಿ ಆರ್ಥಿಕ ಬಲಕ್ಕಿಂತಲೂ ಆತ್ಮ ಬಲದ

ಮೇಲೆ ಕ್ರಿಯಾಶಕ್ತಿಯನ್ನು ಹೆಚ್ಚಿಸಿಕೊಂಡು ಕಾಯಕ ಧರ್ಮವನ್ನು ಅವಲಂಬಿಸಿ ಮುನ್ನಡೆದರು ಗವಾಯಿಗಳು.

"ಪರೋಪಕಾರಾರ್ಥಮಿದಂ ಶರೀರಂ" ಎಂಬುದನ್ನು ಕ್ರಿಯೆಯಲ್ಲಿ ತಂದು ಎಲ್ಲ ಶಿಷ್ಯವರ್ಗದವರಿಗೆ ಜ್ಞಾನವನ್ನು ಉಣಬಡಿಸುವದರ ಜೊತೆಯಲ್ಲಿ ಕ್ರಿಯೆಗೆ ಜೀವನದಲ್ಲಿ ಅನುವು ಮಾಡಿಕೊಟ್ಟರು. ಎಲ್ಲರಿಗೂ ಕಾಯಕ ನಿರತ ರಾಗಲು ಮಾರ್ಗದರ್ಶನ ಮಾಡಿದರು. ಅಂಗವಿಕಲರಿಗೆ ಮತ್ತು ಸದೃಢ ಕಾಯದವರಿಗೆ ಅವರವರ ಪಾಲಿನ ಕಾಯಕ ಅವರು ಮಾಡಿಯೇ ತೀರಬೇಕೆಂದು ಕಟ್ಟಪ್ಪಣೆಮಾಡಿ, ಹೊಸದಾರಿಯತ್ತ ಸಾಗಿದರು ಗವಾಯಿಗಳು. ಅಂದು ಅವರು ಒಂದು ನಾಟಕ ಸಂಘವನ್ನು ಸ್ಥಾಪಿಸಿದರು. ನಾಟಕ ಸಂಸ್ಥೆ ನಾಡಿನ ಜನರ ಮನ್ನಣೆಯನ್ನೂ ಗಳಿಸಿತು. ಅವರ ಆಶ್ರಮಕ್ಕೆ ಹಣವನ್ನೂ ತಂದಿತು.

## ವೀರೇಶ್ವರ ಪುಣ್ಯಾಶ್ರಮ

ಮುಂದೆ ಸಂಚಾರಗೈಯುತ್ತ ೧೯೪೨ ರಲ್ಲಿ ಗವಾಯಿಗಳು ಗದುಗಿಗೆ ಹೋದರು. ಆಗ ಅಲ್ಲಿ ದಾನಶೂರ ಎಂಬ ಪ್ರಖ್ಯಾತಿ ಪಡೆದ ಕೈ|| ಶ್ರೀಮಾನ್ ಬಸರಿಗಿಡದ ವೀರಪ್ಪನವರು ಮತ್ತು ಅನೇಕ ದಾನಿಗಳು ಅವರ ಸಹಾಯಕ್ಕೆ ಮುಂದೆ ಬಂದರು. ಆಗ ಗದುಗಿನಲ್ಲಿ "ವೀರೇಶ್ವರ ಪುಣ್ಯಾಶ್ರಮ" ಎಂಬ ವಿದ್ಯಾಲಯವು ಸ್ಥಾಪಿತವಾಯಿತು. ಆ ವಿದ್ಯಾಲಯಕ್ಕೆ ಗವಾಯಿಗಳು ಗುರುಗಳಾದರು. ಅವರು ಕೇವಲ ಹಣದ ಆಶೆಗಾಗಿ ತಮ್ಮ ಶಿಷ್ಯರಿಗೆ ಕಲಿಸುತ್ತಿರಲಿಲ್ಲ. ತಮ್ಮ ಜೀವಿತದ ಕೊನೆಯವರೆಗೂ ಅಲ್ಲಿಯೇ ನೆಲೆಸಿದರು. "ದೇಶ ಸೇವೆಯೇ ಈಶ ಸೇವೆ" ಎಂದು ಪಂಚಾಕ್ಷರಿ ಗವಾಯಿಗಳು ದಿನಾಲು ಬೆಳಿಗ್ಗೆ ನಾಲ್ಕು ಘಂಟೆಗೆ ಎದ್ದು ತಮ್ಮ ಶಿಷ್ಯರಿಗೆ ಸಂಗೀತ ವಿದ್ಯೆಯನ್ನು ಹೇಳುತ್ತಿದ್ದರು. ಶಿಷ್ಯರಿಗೆ ಪಾಠ ಹೇಳುವದು, ಶಿವಪೂಜೆಯಷ್ಟೇ ಪವಿತ್ರವಾಗಿದೆ ಎಂದು ಅವರು ತಿಳಿದಿದ್ದರು. ಅವರಿಗೆ ಕರ್ನಾಟಕ ಮತ್ತು ಹಿಂದುಸ್ತಾನಿ ಸಂಗೀತ ಪದ್ಧತಿಯ ಜ್ಞಾನವಿದ್ದುದರಿಂದ ಅವರಿಗೆ ಉಭಯ 'ಗಾನವಿಶಾರದ' ಎಂಬ ಬಿರುದನ್ನು ನಾಡಿನವರು ಇತ್ತಿದ್ದರು. 'ಕಾಯಕವೇ ಕೈಲಾಸ' ಎಂದು ತಿಳಿದು ತಮ್ಮ ಪವಿತ್ರವಾದ ಸಂಗೀತ ವಿದ್ಯೆಯಲ್ಲಿ ಅವರು ಎಡೆಬಿಡದೆ ದುಡಿಯುತ್ತಲಿದ್ದರು.

"ಕಾಯಕದಿಂದ ಲಿಂಗದರ್ಶನ" ಎಂಬಂತೆ ಸದಾವಕಾಲವಲ್ಲಿಯೂ ಪಂಚಾಕ್ಷರಿ ಗವಾಯಿಗಳು ತಮ್ಮ ಕೆಲಸ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಬರಬರುತ್ತ ಅವರ ಆರೋಗ್ಯವು ಕೆಡಹತ್ತಿತು. ಆದರೆ ಶಿಷ್ಯರಿಗೆ ಪಾಠ ಹೇಳು

ವದನ್ನು ಬಿಡಲಿಲ್ಲ. ಲಿಂಗಪೂಜೆ ನಿಲ್ಲಿಸಲಿಲ್ಲ. ಆತ್ಮಜ್ಞಾನದಿಂದ ಅವರು ಲಿಂಗ ದರ್ಶನ ಮಾಡುತ್ತ ಕಾಯಕದಲ್ಲಿಯೇ ಶಿವನೊಲುಮೆ ಎಂದು ತಿಳಿಯುತ್ತಿದ್ದರು. ಅವರ ಎತ್ತರವಾದ ನಿಲುವು, ಮಾಟವಾದ ಮೈಕಟ್ಟು, ವಿಶಾಲವಾದ ಹಣೆ, ಯಾವಾಗಲೂ ನಗುಮುಖವನ್ನು ನೋಡಿದರಿಗೆ ಮನಕರಗದೆ ಇರದು. ಜೂನ ತಿಂಗಳ ೧೧ ನೇ ತಾರೀಖು ೧೯೪೪ ನೆಯ ಇಸವಿ. ಕಾಯಕ ನಿರತ ಪಂಚಾಕ್ಷರಿ ಗವಾಯಿಗಳು ಲಿಂಗಪೂಜೆಗೆ ಕುಳಿತವರು ಲಿಂಗದಲ್ಲಿಯೇ ಲೀನರಾದರು. “ ಶರಣರ ನೆನವು ಮನದಲ್ಲಿ ನೋಡಾ ” ಎಂಬಂತೆ ಶರಣರ ಮಾರ್ಗದಂತೆ ಕಾಯಕ ನಿರತರಾಗಿ ನಡೆದು ತೋರಿಸಿದರು, ಆ ಮಹಾಪುರುಷ ಪಂಚಾಕ್ಷರಿ ಗವಾಯಿಗಳು.

ಇಂದು ನಮ್ಮ ಕನ್ನಡ ನಾಡಿನಲ್ಲಿ ಅನೇಕ ಜನ ಅಂಗವಿಕಲರೂ ಬೂದಿಮುಚ್ಚಿದ ಕೆಂಡದಂತೆ ಇರುವದು ಕಂಡ:ಬರುತ್ತದೆ. ಪಂಚಾಕ್ಷರಿ ಗವಾಯಿಗಳಂತೆ ಅವರ ಶಿಷ್ಯರಾದ ಪುಟ್ಟರಾಜ ಗವಾಯಿ:ಗಳು ಕೂಡಾ ಸಂಗೀತ ಸೇವೆಯಲ್ಲಿ ಆರಾಧನೆ ಮಾಡುವದರಲ್ಲಿಯೂ ಮತ್ತು ಸಾಹಿತ್ಯರಂಗದಲ್ಲಿಯೂ ತಮ್ಮ ಅಪಾರ ಸೇವೆ ಸಲ್ಲಿಸುತ್ತಿರುವದು ಕಂಡುಬರುತ್ತದೆ. ಆದರೆ! ಅದೇ ಒಬ್ಬ ಅಮೇರಿಕ ಹೆಣ್ಣುಮಗಳಾದ ಹೆಲನ್‌ಕೆಲರ್ ಇವರು ಪ್ರಪಂಚದಲ್ಲಿಯೇ ಖ್ಯಾತಿಪಡೆದಳು. ನಮ್ಮ ಪಂಚಾಕ್ಷರಿ ಗವಾಯಿಗಳು ಅಮೇರಿಕಾದಲ್ಲಿ ಇದ್ದಿದ್ದರೆ ಅವರು ವಿಶ್ವವಿಖ್ಯಾತರಾಗುತ್ತಿದ್ದರು. ಆದರೆ ಅವರ ದುರ್ದೈವ ಕನ್ನಡಿಗರಾದ:ದೆ!

# ಕಲಾ ಮಹರ್ಷಿ

## ಶ್ರೀ ಎಚ್. ಟಿ. ಮಹಾಂತೇಶ ಶಾಸ್ತ್ರಿ, ಗದಗ

ಕನ್ನಾಡಿನ ಕಲಾಪ್ರಪಂಚದಲ್ಲಿ ಕಲಾಮಹರ್ಷಿ ಪಂಚಾಕ್ಷರಿ ಗವಾಯಿಗಳ ತಪೋಫಲ ಕಂಡರಿಯದ ವ್ಯಕ್ತಿ ಸಿಕ್ಕುವದು ದುರ್ಲಭ. ಸಂಗೀತ, ಸಾಹಿತ್ಯ, ಕಲೆ ತ್ರಿವಿಧ ದಾಸೋಹದಂತೆಯೇ ಅವರ ಅಂಗಾಗಗಳಲ್ಲಿ ಸಮಾವೇಶವಾಗಿದ್ದವು. ಅವರ ವಿದ್ವತ್ಸನ್ನಿಧಿಯಲ್ಲಿ ಅವರ ರೀತಿ, ನೀತಿ, ಆಚಾರ, ವಿಚಾರಕ್ಕೆ ಪುರಸ್ಕಾರವೇ ವಿನಾ ಜಾತಿ-ಮತಗಳಿಗಲ್ಲ. ಸರ್ವಶ್ರೇಷ್ಠ ಮಠದ ಸ್ವಾಮಿಗಳನ್ನೂ ಮೀರಿಸುವ ಪೂಜೆ, ನಿಷ್ಠೆ, ತಪ, ಬ್ರಹ್ಮಚರ್ಯ ವ್ರತಸ್ಥರಾಗಿದ್ದರೂ, ವಿದ್ಯಾದಾನದಲ್ಲಿ ಎಳ್ಳಿನಿತೂ ಜಾತೀಯ ಉಚ್ಚ-ನೀಚ ಭಾವನೆ ಸುಳಿಯುತ್ತಿರಲಿಲ್ಲ. ಜಾತಿಯಿಂದ ಯಾವನೇ ಆಗಿರಲಿ, ಪ್ರತಿಯೊಬ್ಬ ವಿದ್ಯಾರ್ಥಿಯಲ್ಲಿಯೂ ಸದಾಚಾರ, ಸದುವಿನಯ, ಸದ್ವ-ರ್ತನೆಯನ್ನು ಕಠೋರವಾಗಿ ಆಶಿಸುತ್ತಿದ್ದರು. ಇವರ ವಿದ್ಯಾಸಂಸ್ಥೆಯಲ್ಲಿ ಎಲ್ಲರಿಗೂ ಒಂದೇ ವಿಧದ ಊಟ, ನಿಯಮ, ನಿಷ್ಠೆ. ನಾವು ಬ್ರಾಹ್ಮಣ ಲಿಂಗಾಯತರೆಂದು ತಲೆ ಎತ್ತುವಂತಿಲ್ಲ. ಕೊರವರು-ಕಮ್ಮಾರರೆಂದು ತಲೆ ತಗ್ಗಿಸುವ ಸಂದರ್ಭ ಬರುವಂತಿಲ್ಲ. ಸರ್ವರಿಗೂ ಒಂದೇ ದಿಟ್ಟಿಯ ಪ್ರೀತಿ, ಮಮತೆ, ಅಂತಃಕರುಣೆ, ಶಿಕ್ಷೆ, ಶಿಕ್ಷಣ ಸಿಗುತ್ತಿತ್ತು—ಸಿಗುತ್ತಿದೆ. ಅಂತೆಯೇ ಕಲಾ ಮಹರ್ಷಿಗಳ ಕಲಾ ತಪೋವನ— ಶ್ರೀ ವೀರೇಶ್ವರ ಪುಣ್ಯಾಶ್ರಮದ ಕೀರ್ತಿ-ಪಾವಿತ್ರ್ಯಗಳು, ಅಲ್ಪಾವಧಿಯಲ್ಲಿ ಭರತಖಂಡವನ್ನೇ ಬೆರಗುಗೊಳಿಸುವ ಮಟ್ಟದಲ್ಲಿ ಬೆಟ್ಟದಂತೆ ಬೆಳೆದು ನಿಂತಿವೆ.

ಪಂಚಾಕ್ಷರಿ ಗವಾಯಿಗಳು ಉಭಯ ಗಾನ ವಿಶಾರದರು. ಕರ್ನಾಟಕಿ-ಹಿಂದುಸ್ಥಾನಿ ಎರಡೂ ಪ್ರಕಾರದ ಸಂಗೀತ ಶಾಸ್ತ್ರದಲ್ಲಿ ಪ್ರಕಾಂಡ ಪಂಡಿತರು. ವಾದ್ಯ ನುಡಿಸುವ ಕಲೆಯಲ್ಲಿಯೂ ಅಷ್ಟೇ ಪಾರಂಗತರು. ಅಂದರೆ ಹೇಳಿ ಕೊಡುವ (ಥೇರಿ) ಮಟ್ಟಿಗಲ್ಲ, ಸ್ವತಃ ಪ್ರತಿಯೊಂದು ವಾದ್ಯವನ್ನು ನುಡಿಸಿ, ಬಿಡಿಸಿ ಹೇಳಬಲ್ಲ (ಪ್ರಾಕ್ಟಿಕಲ್) ಶಕ್ತಿಯೇ ಅವರಲ್ಲಿ ಅಗಾಧವಾಗಿತ್ತು. ಉಭಯ ಗಾಯನದಲ್ಲಿ, ವಾದ್ಯಪ್ರಾವೀಣ್ಯತೆಯಲ್ಲಿ ಸಾವಿರಾರು ಜನ ಶಿಷ್ಯಶ್ರೇಷ್ಠರನ್ನು ತರಬೇತುಗೊಳಿಸಿ, ಭಾರತದೆಲ್ಲೆಡೆ ಪಸರಿಸಿ ಪ್ರಸಿದ್ಧರಾಗಿದ್ದಾರೆ ಉತ್ತಮ ವಾಗ್ಮಿಗಳೂ, ಕೀರ್ತನಕಾರರೂ ಆಗಿದ್ದ ಪೂಜ್ಯ ಪಂಚಾಕ್ಷರಿ ಗವಾಯಿಗಳ ಶಿಷ್ಯ ವರ್ಗದಲ್ಲಿ ಪಂ. ಗಂಗಾಧರ ಶಾಸ್ತ್ರಿಗಳು ಚಿತ್ತರಗಿ ( ಪಂ. ಪುಟ್ಟರಾಜ ಗವಾಯಿಗಳಂತೂ ಸರಿಯೇ ) ಮುಂತಾದವರೂ ಕೀರ್ತನ ಪಟುಗಳಾಗಿ ಬೆಳಗುತ್ತಿದ್ದಾರೆ.

ಸಂಗೀತ ಬಂಧನಕ್ಕಿಲ್ಲದ ಶರಣರ ವಚನ ರಚನೆಗಳಿಗೆ ಸುಮಧುರ ಸಂಗೀತ ಸಂಪದ ಒದಗಿಸಿ ಪ್ರಸಿದ್ಧಿಗೆ ಪ್ರಕಾಶಕ್ಕೆ ತಂದ ಶ್ರೇಯಸ್ಸು ಪ್ರಥಮದಲ್ಲಿ ಈ ಮಹರ್ಷಿಗಳಿಗೇ ಸಲ್ಲುವದು.

**ವಿಗುಣೋಽಪಿ ಕಾವ್ಯಬಂಧಃ ಸಾಧೂನಾಮಾನನಂ ಗತಃ ಸ್ವದತೇ ।**
**ಪೂತ್ಕಾರೋಽಪಿ ಸುವಂಶೈರಸ್ಯೂದಮಾನಃ ಶ್ರುತಿಂ ಹರತಿ ॥**

ಎನ್ನುವಂತೆ ಸಂಗೀತ ತಾಳ ಗುಣರಹಿ ಈ ವಚನ ಕಾವ್ಯಗಳು ಕೂಡ ಸುಜ್ಞಾನಿಗಳಾದ ಇವರ ಮುಖದಿಂದ ಹೊರಹೊಮ್ಮಿ ರಸಮಯವಾದವು. ಬರೀ ಗಾಳಿ ಎನಿಸುವ ಫೂತ್ಕಾರವು ಕೊಳಲಿನಿಂದ ಹೊರಬರುವ ಸುಮಧುರ ಸ್ವರದಂತೆ ವಚನ ಸಾಹಿತ್ಯ ದೇವರಿಗೆ, ಸಂಗೀತ ದೇವಿಯ ಕೈಹಿಡಿಸಿದ ಬೆಡಗನ್ನು ಅಡಗಿಸ ಬೇಕೆಂದು ಆಣಕವಾಡಿದ ಅಸೂಯಾಮಯ ಟೀಕೆ-ಟಿಪ್ಪಣಿಗಳಿಗೆ ಬೆದರಲಿಲ್ಲ. ಪಂಡಿತ ಮಹರ್ಷಿಗಳ ಮಂಟಪದಲ್ಲಿ ಮದುವೆಯಾದ ಶರಣರ ವಚನ ಸಾಹಿತ್ಯ-ಸುಮಧುರ ಸಂಗೀತ ಸತಿ-ಪತಿಗಳ ಪ್ರತಿಭಾಯುಕ್ತ ಮಾಧುರ್ಯ ಮನೆ-ಮನೆಗೂ ಭವ್ಯಬೆಳಕನ್ನು ಬೀರುತ್ತಿದೆ.

**ನಾಸ್ತಿ ಕಾಮಸಮೋ ವ್ಯಾಧಿರ್ನಾಸ್ತಿ ಕ್ರೋಧಸಮೋ ರಿಪುಃ ।**
**ನಾಸ್ತಿ ವಿದ್ಯಾಸಮೋ ಬಂಧುರ್ನಾಸ್ತಿ ಜ್ಞಾನಸಮಂ ಸುಖಂ ॥**

"ಕಾಮಕ್ಕೆ ಸಮನಾದ ರೋಗವಿಲ್ಲ, ಕೋಪಕ್ಕೆ ಸಾಟಿಯಾಗುವ ಶತ್ರುವಿಲ್ಲ, ವಿದ್ಯೆಗೆ ಸಮವಾದ ಬಂಧುವಿಲ್ಲ, ಜ್ಞಾನಕ್ಕೆ ಸಮವಾದ ಸುಖವಿಲ್ಲ" ಎಂಬುದನ್ನು ಅಕ್ಷರಶಃ ಆಚರಣೆಯಲ್ಲಿ- ಅಂತರ್ಯದಲ್ಲಿ ನಡೆದು ತೋರಿದರೀ ಮಹರ್ಷಿಗಳು. ಸರ್ವಸಂಗ ಪರಿತ್ಯಾಗಮಾಡಿ, ಘೋರ ತಪೋಬಲದಿಂದಾಗಿ ರಾಜರ್ಷಿ ಎನಿಸಿದ ವಿಶ್ವಾಮಿತ್ರ ಮುನಿಯು, ಗಡ್ಡೆ-ಗೆಣಸು ತಿಂದು ತಪೋಮಗ್ನನಾಗಿ ಅರಣ್ಯದಲ್ಲಿ ಕಾಮರೋಗಕ್ಕೆ ಬಲಿಯಾದ. ಭೃಗು- ದೂರ್ವಾಸ- ಜಮದಗ್ನಿಗಳಂಥ ಮಹಾನ್ ಋಷಿಶ್ರೇಷ್ಠರೂ ಕ್ರೋಧವೈರಿಯಿಂದ ಹತರಾಗಿ ಮತಿಹೀನರೆನಿಸಿದರು. ಆದರೆ ಮಠಪೀಠದ ಸನ್ಯಾಸ ಸ್ವೀಕರಿಸದೆ, ಸಂಸಾರಿಗಳಂತೆ, ಪಕ್ವಾನ್ನ ಭುಜಿಸಿ, ಷಡ್‌ರಿಪುಗಳ ಸದಾ ಸಂಚಾರಿ ಶಹರ-ಗ್ರಾಮಗಳಲ್ಲಿ ನೆಲಿಸಿ ಅಖಂಡ ಬ್ರಹ್ಮಚರ್ಯ ವ್ರತ-ಪೂಜೆ-ನಿಷ್ಠೆಯನ್ನು ಅವಿಚಲವಾಗಿ ಕಾಯ್ದುಕೊಂಡು ಜ್ಞಾನ ದಾಸೋಗ ನಡೆಸಿದ ಈ ಕಲಾಮಹರ್ಷಿಗಳಿಗೆ ಗತಕಾಲದ ಯಾವ ಋಷಿಪುಂಗವ ಸಾಟಿಯಾದಾನು ? "ನೂರಾರು ಸಾವಿರಾರು ಕಲಾರ್ಜನೆಯ ಪುತ್ರರು ನಮ್ಮ ಪಾಲಿಗಿರುವಾಗ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಪದಕ್ಕೇಕೆ ಬೆಲೆ ಕೊಡಬೇಕು ? ನನ್ನನ್ನು ತಂದೆಯಂತೆ ಭಾವಿಸಿ, ಮಾನ-ಮರ್ಯಾದೆ, ಯಶ-ಕೀರ್ತಿ ತಂದು

ಕೊಡಬಲ್ಲರು' ಎನ್ನುತ್ತಿದ್ದರು ಅಂಥ ಪ್ರಸಂಗ ಒದಗಿಬಂದಾಗ. ಕಲಾ ಪ್ರಪಂಚದಲ್ಲಿ ಬೆಳಗುವಾಗ, ತಮ್ಮ ಕೀರ್ತಿ ಕಹಳೆ ಮೊಳಗುವಾಗ, ಮಡದಿ-ಮಕ್ಕಳೊಂದಿಗೆ ನಲಿಯುವಾಗ- ಉಲಿಯುವಾಗ ಅವರ ಅನಂತ ಶಿಷ್ಯಕೋಟಿ ತಮ್ಮ ಪಿತೃಗುರು । ಪಂಚಾಕ್ಷರಿಯನ್ನು ಪಂಚಾಕ್ಷರೀ ಮಂತ್ರಕ್ಕಿಂತಲೂ ಪವಿತ್ರವೆನಿಸಿಕೊಂಡು ಸ್ಮರಿಸಲಾರರೇ ?

ಗುರುವಿನ ಚರಣ-ಕರುಣ ಪ್ರಸಾದ ತ್ರಿಕಾಲವೂ ಬೇಕು ಅವರಿಗೆ. ಗುರು—ಚರಮೂರ್ತಿ ಸದಾ ಜೊತೆಯಲ್ಲಿ— ಎಲ್ಲಿ ಹೋದರೂ ಇರಬೇಕು. ಶಿವಪೂಜೆ, ಶಿವಧ್ಯಾನ ಇಹ-ಪರ ಶಕ್ತಿ-ಮುಕ್ತಿಯ ಧರ್ಮ ತಪಸ್ಸಾಗಿತ್ತು. ಮನಸ್ಸಿನಂತೆ ದೇಹವನ್ನೂ ಪರಮ ಪವಿತ್ರವಾಗಿಟ್ಟುಕೊಂಡಿದ್ದರು. ಕಾಮ-ಕ್ರೋಧಾದಿಗಳಿಂದ ಮಾತ್ರವಲ್ಲ, ಔಷಧಿ ಸೇವೆಯಲ್ಲೂ ಜಾಗರೂಕರಿದ್ದರು. ವಿದೇಶಿ ಔಷಧಿಗಳನ್ನು ಸೇವಿಸಲಿಲ್ಲ, ಇಂಜೆಕ್ಶನ್(ಸೂಜಿಮದ್ದು)ದೇಹದಲ್ಲಿ ಸೇರಗೊಡಲಿಲ್ಲ. ಮಹರ್ಷಿಗಳ ಅಂತ್ಯಸಮಯದ ಸನ್ನಿವೇಶ ಒದಗಿದಾಗ. ಇಲ್ಲಿಯ ಪ್ರಸಿದ್ಧ ಡಾಕ್ಟರರು 'ಒಂದೆರಡು ಇಂಜೆಕ್ಶನ್ನಿನಲ್ಲಿ ಅವರ ಜೀವ ಉಳಿಯಬಹುದು, ಯಾರಾದರೂ [illegible] ಒಲಿಸಿ' ಎಂದು ಕೇಳಿಕೊಂಡರು. ಮಹರ್ಷಿಗಳು ಈ ಲೋಕದೆಚ್ಚರವಿರುವವರೆಗೂ ಅದಕ್ಕೊಪ್ಪಲಿಲ್ಲವಷ್ಟೇ ಅಲ್ಲ, ಆ ಲೋಕದೆಡೆ ತಮ್ಮ ಹೃದಯ ಹರಿಬಿಡುವ (ಸ್ಮೃತಿ ತಪ್ಪುವ) ಮೊದಲು "ಪರಮಾತ್ಮನ ಕರೆ ಬಂದಿದೆ ನನಗೆ; ಶಸ್ತ್ರ, ಸೂಜಿಮದ್ದಿನ ಚಿಕಿತ್ಸೆಗೊಪ್ಪಿ ನನ್ನ ದೇಹದ ಅಖಂಡ ಪಾವಿತ್ರ್ಯಕ್ಕೆ ಕಲಂಕ ತರಬೇಡಿ. ಇದೋ ಈ ದೇಹ, ಈ ದೇಹದ ಪಾವಿತ್ರ್ಯ ನಿಮಗೊಪ್ಪಿತು" ಎಂದು ಅಲ್ಲಿಯೇ ಸಮೀಪದಲಿದ್ದ ಚರಮೂರ್ತಿ ಗುರುಗಳಿಗೆ ವಂದಿಸಿದರು. "ನಮ್ಮ ಗುರುವಿನ ತಂದೆಯ ಮಹಾ ಜೀವನವನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಿ, ನಮಗಿನ್ನೂ ಬೇಕಿರುವ ಕಲಾಋಷಿಗಳನ್ನು ಶಿವನಿಗರ್ಪಿಸಲಾರೆವು" ಎಂದು ಅವರ ಶಿಷ್ಯ-ಕೋಟಿ ಗೋಗರೆದು ಗೋಳಿಟ್ಟರೂ ಚಿಕಿತ್ಸೆಗೆಂದು ಅವರ ದೇಹ ಸ್ಪರ್ಶಿಸುವ ಧೈರ್ಯ ಯಾರಿಗೂ ಆಗಲಿಲ್ಲ. ಇಂಥ ನಿಶ್ಚೇತನ ಸಮಯದಲ್ಲೂ ನಿತ್ಯತ್ರಿಕಾಲದ ಎಡಹಸ್ತದ ( ಲಿಂಗರಹಿತ ) ಭಾವ ಲಿಂಗಕ್ಕೆ, ಬಲ ಹಸ್ತದ ಪತ್ರಪುಷ್ಪ ( ಅವೂ ದರ್ಶಕರಿಗೆ ಕಾಣುತ್ತಿರಲಿಲ್ಲ) ಧಾರಣ ನಡದೇ ಇತ್ತು. ಪರಶಿವನ ಅನಂತ ನಾಮ ಸ್ಮರಣೆ ಅಸ್ಫುಟವಾಗಿ ನಡೆದಿರುವದನ್ನು ಸುತ್ತುವರಿದ ಜನ ತದೇಕಚಿತ್ತದಿಂದ ನಿರೀಕ್ಷಿಸುತ್ತಿದ್ದರು.

**ಪರೋಪಕಾರಾಯ ಫಲಂತಿ ವೃಕ್ಷಾಃ, ಪರೋಪಕಾರಾಯ ವಹಂತಿ ನದ್ಯಃ।**
**ಪರೋಪಕಾರಾಯ ದುಹಂತಿ ಗಾವಃ, ಪರೋಪಕಾರಾರ್ಥಮಿದಂ ಶರೀರಂ॥**

ಎಂಬಂತೆ ತಮ್ಮ ದೇಹ, ಜೀವ- ಜೀವನವನ್ನೇ ಪರೋಪಕಾರಕ್ಕೆ ಮೀಸಲಿಟ್ಟ ಮಹಾನ್ ಮಾನವ, ಪರಮ ಪವಿತ್ರ ಕಲಾಮಹರ್ಷಿ ಅಜರಾಮರರಾದರು. **ಅಪೂರ್ವಃ ಕೋsವಾ ಕೋಶೋsಯಂ ವಿದ್ಯತೇ ತವ ಭಾರತಿ। ವ್ಯಯತೋ ವೃದ್ಧಿಮಾಯಾತಿ ಕ್ಷಯಮಾಯಾತಿ ಸಂಚಯಾತ್॥** "ತಾಯೇ! ಶಾರದೇ ! ನಿನ್ನ (ವಿದ್ಯಾ) ಕೋಶವೊಂದು ಅಪೂರ್ವ ನಿಧಿ. ಉಳಿದ ನಿಧಿಗಳೆಲ್ಲ ವೆಚ್ಚಮಾಡಿದರೆ ಬರಿದಾಗುವವು. ( ಕೂಡಿಸಿಟ್ಟರೆ ತುಂಬುವವು ಮಾತ್ರ ) ಆದರೆ ನಿನ್ನ ಭವ್ಯ-ದಿವ್ಯ ಭಾಂಡಾರ ಮಾತ್ರ ಜನರಿಗೆ ಕೊಟ್ಟಷ್ಟೂ-ಕಲಿಸಿ ಖರ್ಚಿಸಿದಷ್ಟೂ ಹೆಚ್ಚುತ್ತ ಹೋಗುವದು. ಕೊಡದಿದ್ದರೆ ಮಾತ್ರ ಇರುವವನಲ್ಲೇ ನಶಿಸಿ ಹೋಗುವದು." ಇದನ್ನು ಅಕ್ಷರಶಃ ಪಾಲಿಸಿ, ತಾಯಿ ಸರಸ್ವತಿಯ ಶ್ರೇಷ್ಠ ಪುತ್ರರೆನಿಸಿದರು ಪೂಜ್ಯ ಪಂಚಾಕ್ಷರಿ ಗವಾಯಿಗಳು.

ಈ ಮಹಾನ್ ದಿವ್ಯ ಜ್ಞಾನಜ್ಯೋತಿಯ ನ್ನು- ವೃದ್ಧಿಗೊಳ್ಳುತ್ತಲೇ ಇರುವ ಜ್ಞಾನತೈಲವನ್ನು ಪಂಚಾಕ್ಷರಿ ಎಂಬ ಪ್ರಣತಿಯಲ್ಲಿ ಸುರುವಿ, ಬ್ರಹ್ಮಚರ್ಯ ಸದಾಚಾರ ಬತ್ತಿ ಇಟ್ಟು, ತಪೋಫಲ ಸಿದ್ಧಹಸ್ತಗಳಿಂದಾಶೀರ್ವದಿಸಿದ ಕಡ್ಡಿ ಗೀರಿ ಹೊತ್ತಿಸಿದವರು ಹಾನಗಲ್ ಶ್ರೀ ಕುಮಾರೇಶ್ವರ ಶಿವಯೋಗಿ ಪುಂಗವರು. ಕಲಾಮಹರ್ಷಿ ಶ್ರೀ ಪಂಚಾಕ್ಷರಿ ಗವಾಯಿಗಳ ಚರಿತ್ರಾರಂಭದಲ್ಲಿ ತಂದೆಯ ಸ್ಥಾನದಲ್ಲಿ ಸ್ಮರಣಾರ್ಹ ಶಕ್ತಿ-ವ್ಯಕ್ತಿ ಶ್ರೀ ಕುಮಾರೇಶ್ವರರು. ಅಂತೆಯೇ ಋಷಿವರರ ಚರಿತ್ರೆಯ ಕೊನೆಯಲ್ಲಿ ಅಥವಾ ಶ್ರೀ ವೀರೇಶ್ವರ ಪುಣ್ಯಾಶ್ರಮದ ದಿವ್ಯ ಚರಿತ್ರೆಯ ದ್ವಿತೀಯ ಭಾಗದಾರಂಭದಲ್ಲಿ (ಜ್ಯೇಷ್ಠಪುತ್ರನ ಸ್ಥಾನದಲ್ಲಿ) ಬರೆಯಲ್ಪಡುವ ಮಹಾನ್ ವ್ಯಕ್ತಿಯೆಂದರೆ ಪಂ. ಪುಟ್ಟರಾಜ ಗವಾಯಿಗಳು "**ಏಕೇನಾಪಿ ಸುಪುತ್ರೇಣ ಸಿಂಹೀ ಸ್ವಪಿತಿ ನಿರ್ಭಯಂ**" ಸಿಂಹಿಣಿಗೆ ಒಂದೇ ಶಿಶು ಜನಿಸಿದರೂ ಸಾಕು, ಅದು ಎಚ್ಚರವಾಗಿದ್ದರೆ ನಿರ್ಭೀತಿಯಿಂದ ಮಲಗುವದು. ಅಂತೆಯೇ ಶಿವಸನ್ನಿಧಿ ಸೇರಿದ ಕಲಾಮಹರ್ಷಿ ಶ್ರೀ ಪಂಚಾಕ್ಷರಿ ಗವಾಯಿಗಳ ಅಮರ ಆತ್ಮವಿಂದು ಶಾಂತಿ- ಸಮಾಧಾನದಿಂದಿದೆ, ತಾವು ಹೊತ್ತಿಸಿದ ಸಾವಿರಾರು ಕಲಾ ಜ್ಞಾನಜ್ಯೋತಿಗಳಂತೆ, ಜ್ಯೇಷ್ಠಪುತ್ರ ಪುಟ್ಟರಾಜರೂ ಲಕ್ಷಾನುಲಕ್ಷ ಕಲಾವಿದ ಜ್ಯೋತಿಗಳನ್ನು ಹೊತ್ತಿಸುವ ಹಿರಿ ತಪಸ್ವಿಗಳೆಂಬ ಅಚಲ ವಿಶ್ವಾಸದಿಂದ.

**" ಅತಿರಿಚ್ಯತೆ ಸುಜನ್ಮಾ ಕಶ್ಚಿಜ್ಜನಕಂ ನಿಜೇನ ಚರಿತೇನ "**

ಎಂಬಂತೆ ಕಲಾಮಹರ್ಷಿ ಪಿತರನ್ನೂ- ಪಂ. ಪುಟ್ಟರಾಜ ಪುತ್ರರು ಕಾವ್ಯ ನಾಟಕ, ವಾಕ್‌ಪ್ರೌಢಿಮೆಗಳಲ್ಲಿ ಮೀರಿ ಮುನ್ನಡೆದಿದ್ದಾರೆ; ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ಸಂಗೀತ ಸಂಸ್ಥೆಯನ್ನು, ಶ್ರೀ ಕುಮಾರೇಶ್ವರ ಕೃಪಾಪೋಷಿತ

ನಾಟ್ಯಸಂಘವನ್ನು ಶ್ರಮ–ಕಷ್ಟಗಳಿಗಂಜದಳುಕದೆ ಮುನ್ನಡೆಸಿಕೊಂಡು ಹೊರಟಿದ್ದಾರೆ. ನಟರಾಜ– ಸರಸ್ವತಿಯರು, ಶ್ರೀಗುರು ಕುಮಾರೇಶ್ವರರು, ಪಿತೃ ಪಂಚಾಕ್ಷರಿಗಳು ಪಂ. ಪುಟ್ಟರಾಜರಿಗೆ ಘಟ್ಟ ಸದೃಶ ಶಕ್ತಿಯ ವರ ಹರಿಕೆಯ ನೀಡುತ್ತಿರಲೆಂದೂ ಶ್ರೀ ವೀರೇಶ್ವರ ಪುಣ್ಯಾಶ್ರಮವು ಸಂಗೀತ, ಸಾಹಿತ್ಯಾಭಿನಯದ ಸರಿಯಾದ ನಿದರ್ಶನ ದೊರಕಿದ್ದರೆ ಇಷ್ಟರಲ್ಲೇ ಇದು ಸರಕಾರೀ ಕಲಾವಿಶ್ವ-ವಿದ್ಯಾಲಯವಾಗಬಹುದಿತ್ತು. ಯಾನ ಯೋಗ್ಯತೆ, ಯೋಗ್ಯರೂ ಇಲ್ಲದೆಯೇ ಇಂಥ ಸಂಸ್ಥೆ ಜೀವಿಸಿದೆಯೆಂದು ತೋರಿಸಿ, ಸರಕಾರದ ಸಹಾಯ ಪಡೆಯುವವರೂ ಉಂಟು. ಆದರೆ ಪಂ. ಪುಟ್ಟರಾಜರು ಅಂಥ ಸಹಾಯಧನ ಮಾತ್ರದ ಗುರಿ ಇಟ್ಟುಕೊಳ್ಳದೆ, ಆಯಾ ಕಲೆಯಲ್ಲಿ ಶ್ರೇಷ್ಠತೆಯನ್ನು ಪಡೆದ ಇಬ್ಬಿಬ್ಬರನ್ನು ವಿಶಾಲ ಹೃದಯದಿಂದ ಕರೆಯಿಸಿಕೊಂಡು ವಿಮರ್ಶಿಸಿ (ಶಿಷ್ಯರಲ್ಲದವರಾದರೂ ಸರಿ) 'ವಿಶ್ವಕಲಾಲಯ'ನಿರ್ಮಿತಿಗೆ ಪ್ರಯತ್ನಿಸಬೇಕಾಗಿಯೂ ವಿಶ್ವವಿದ್ಯಾಲಯವಾಗುವಂತೆ ಪ್ರಯತ್ನಿಸುವ ಪಥ ಕಾಣಲೆಂದೂ ಹಾರೈಸುವೆ.

# ಪರಮ ನಾದಯೋಗಿ

## ಶ್ರೀ ಚಂದ್ರಶೇಖರ ದೇವರು, "ಕಾವ್ಯತೀರ್ಥ"

ಪರಶಿವನ ವರಕರುಣೆಯಿಂದ ಮಾನವನ ಜೀವನಕ್ಕೆ ಸಾಧನೋಪಾಯಗಳಾಗಿ ಅನಂತ ಕಲೆಗಳು ಮೈದಾಳಿದವು. ಅವುಗಳಲ್ಲಿ ವಾಸ್ತುಶಿಲ್ಪ, ಮೂರ್ತಿಕಲೆ, ಚಿತ್ರಕಲೆ, ಸಂಗೀತ ಮತ್ತು ಸಾಹಿತ್ಯ ಇವು ಐದು ಲಲಿತ ಕಲೆಗಳೆಂದು ಪರಿಗಣಿತವಾಗಿವೆ. ಈ ಲಲಿತ ಕಲೆಗಳಲ್ಲಿ ಸಾಹಿತ್ಯವು ಪರಿಪೂರ್ಣಕಲೆಯೆಂದು ಹೇಳಿದರೆ ಸಂಗೀತವು ಸಾಹಿತ್ಯಕ್ಕೆ ಪೋಷಕವಾದ ಅನಿವಾರ್ಯವಾದ ಸಹಕಾರಿ ಕಲೆಯಾಗಿದೆಯೆಂದು ಹೇಳಬಹುದು. ರಸಾತ್ಮಕವಾದ ಸಾಹಿತ್ಯವು ಸಂಗೀತದ ಸಹಕಾರವಿಲ್ಲದೆ ಪರಿಪೂರ್ಣತೆಯನ್ನು ಪಡೆಯದು. ಸಂಗೀತದಿಂದ ಸಾಹಿತ್ಯಕ್ಕೆ ಹೆಚ್ಚಿನ ಮೆರಗು ಬರುತ್ತದೆ. ಅದರ ಕಲಾಸೌಂದರ್ಯ ಹೆಚ್ಚುತ್ತದೆ.

ಭಾರತೀಯ ಜನಜೀವನದಲ್ಲಿ ಕಲೆಗಳಿಗೆ ಪ್ರಾಚೀನ ಕಾಲದಿಂದಲೂ ಬಹು ಮುಖ್ಯವಾದ ಸ್ಥಾನವಿದೆ, ಮೌರ್ಯ, ಗುಪ್ತ, ಪಲ್ಲವ, ರಾಷ್ಟ್ರಕೂಟ, ಚಾಲುಕ್ಯ ಮೊದಲಾದ ಭಾರತೀಯ ಚಕ್ರವರ್ತಿಗಳು ಈ ಲಲಿತ ಕಲೆಗಳಿಗೆ ಬಹಳ ಪ್ರೋತ್ಸಾಹ ಕೊಟ್ಟು ಅವನ್ನು ಬೆಳೆಸಿ ಉಳಿಸಿದರು. ಅವರ ಆಸ್ಥಾನಗಳಲ್ಲಿ ಯೋಧರಿಗಿದ್ದಷ್ಟೇ ಸನ್ಮಾನ ಶಿಲ್ಪಿಗೆ, ಕವಿಗೆ, ಗಾಯಕನಿಗೆ ದೊರೆಯುತ್ತಿತ್ತು. ಮುಂದಿನ ಕೆಲವು ಮೊಗಲ ಸಮ್ರಾಟರೂ ಈ ಪರಂಪರೆಯನ್ನು ಪಾಲಿಸಿಕೊಂಡು ಬಂದರು.

ದಕ್ಷಿಣ ಭಾರತದಲ್ಲಿ ಅನೇಕ ದೇವಸ್ಥಾನಗಳು ಭಾರತೀಯ ಶಿಲ್ಪ ಮತ್ತು ಚಿತ್ರಕಲೆಗಳ ಗತವೈಭವದ ಚಿರಸ್ಮಾರಕವಾಗಿವೆ. ದಕ್ಷಿಣಾದಿ ಸಂಗೀತವು ಕರ್ನಾಟಕದ ಕಲಾತ್ಮಕ ಮತ್ತು ಭಕ್ತಿಮಯ ಸಂಸ್ಕೃತಿಯ ದ್ಯೋತಕವಾಗಿದೆ. ಇಂದಿಗೂ ಗಾಯಕರು "ವಾತಾಪಿ ಗಣಪತಿ"ಯನ್ನು ಭಜಿಸಿ ಹಾಡುವ ಪರಿಪಾಠವಿದೆ. ಬಾದಾಮಿಯ ಚಾಲುಕ್ಯರಾಜರ ಆಸ್ಥಾನದ ಗಾಯಕರೇ ಕರ್ನಾಟಕ ಸಂಗೀತವನ್ನು ರೂಪಿಸಿರಬಹುದೆಂದು ಊಹಿಸಬಹುದಾಗಿದೆ.

ಭಕ್ತಿಪಂಥವು ದಕ್ಷಿಣದಲ್ಲಿಯೇ ಹುಟ್ಟಿ ಉತ್ತರದಲ್ಲಿ ವಿಕಾಸ ಪಡೆಯಿತೆಂದು ಮಹಾತ್ಮಾ ಕಬೀರನು ಹೇಳುತ್ತಾನೆ. ದಕ್ಷಿಣದ ಅರುವತ್ತು ಮೂರು

ಪುರಾತನರು, ಅಳ್ವಾರರು, ವೀರಶೈವ ಶರಣ-ಶಿವಯೋಗಿಗಳು, ವೈಷ್ಣವ ದಾಸರು ಹಾಗೂ ಉತ್ತರದ ಸಂತರು ಸಂಗೀತ ಮುಖವಾಗಿಯೇ ಭಕ್ತಿಯನ್ನು ಪ್ರಚುರಗೊಳಿಸಿ ಸಾಮಾನ್ಯ ಜನಜೀವನವನ್ನೂ ಪರಮ ಪಾವನಗೊಳಿಸಿದ ಮಹಾಕಾರ್ಯವೆಸಗಿದ್ದಾರೆ.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥರು ವಚನ ರಚನೆಯನ್ನು ಮಾಡಿ ಜನತೆಗೆ ಭಕ್ತಿಯ ಬೆಳಗನ್ನು ತೋರಿದರು. ನಿಜಗುಣ, ಮುಪ್ಪಿನ ಷಡಕ್ಷರಿ, ಜುಗುನಿ ಮರುಳದೇವ ಮೊದಲಾದ ಶಿವಯೋಗಿಗಳು ಭಕ್ತಿಯ ಗೀತಗಳನ್ನು ಹಾಡಿ 'ರಸರಾಗ ತರಂಗಿಣಿ'ಯನ್ನು ಹರಿಸಿವರು. ವಿಜಯನಗರದ ಅರಸರ ಕಾಲದಲ್ಲಿ ವೀರಶೈವ ವಿರಕ್ತರು ಮತ್ತು ವೈಷ್ಣವ ದಾಸರು ಸಂಗೀತಮಯವಾದ ಸುಲಲಿತ ಮತ್ತು ಸರಳ ಭಾಷೆಯಲ್ಲಿ ಸುಲಭ ಶೈಲಿಯಲ್ಲಿ ತತ್ವಪದಗಳನ್ನು ಹಾಡಿ ಜನಮನವನ್ನು ತಿದ್ದುವ ಮಹೋದ್ಯೋಗ ಮಾಡಿ ಮಹಾತ್ಮರೆನಿಸಿದರು. ಅದರಂತೆಯೇ ಗೋರಕ್ಷನಾಥರಂತಹ ಯೋಗಿಗಳಿಂದ ಉತ್ತರದಲ್ಲಿ ಭಾಕ್ತಿಕ ಮತ್ತು ತಾತ್ವಿಕ ಹಾಡುಗಳ ರೂಪದಲ್ಲಿ ಗಾನಗಂಗೆಯು ಪ್ರವಹಿಸಿ ಬಂದಿದೆ. ಸೂರ, ತುಲಸಿ, ಕಬೀರ, ರೈ, ಮೀರಾ ಮುಂತಾದ ದಾಸ–ಸಂತರ ರಾಗಮಯ ಹಿಂದೀ ಪದಗಳು ಇಂದಿಗೂ ಜನತೆಯ ನಾಲಿಗೆಯ ಮೇಲೆ ಕುಣಿಯುತ್ತಿವೆ. ಇವರೆಲ್ಲರೂ ಭಕ್ತಿಗೀತೆಗಳನ್ನು ರಚಿಸಿ ನುಡಿಸಿ ಸಾಹಿತ್ಯಕ್ಕೆ ಸಂಗೀತವನ್ನು ಜೀವಾಳವನ್ನಾಗಿಸಿದರು.

ತಾನಸೇನನು ಗಾಯಕರಲ್ಲಿ ಬಹು ಪ್ರಸಿದ್ಧಿಯನ್ನು ಪಡೆದಿರುವನು. ಅವನು ಮೊದಲು ಶಿವಭಕ್ತ ಬ್ರಾಹ್ಮಣನಾಗಿದ್ದನು. ಅವನ ಭಕ್ತಿರಸಮಯ ಗೀತಗಳನ್ನು ನೋಡಿದರೆ ಅವನು ಮತಾಂತರ ಹೊಂದಿದ ಮಾತು ಕಟ್ಟುಕತೆಯಾಗಿರಬಹುದೆನ್ನಿಸುತ್ತದೆ. ತಾನಸೇನನು ರಚಿಸಿರುವ ಶಿವಪರ ಸ್ತುತಿಗಳು ಅಮರ ಕೃತಿಗಳಾಗಿವೆ.

ಹದಿನೈದನೆಯ ಶತಮಾನದಲ್ಲಿ ಗ್ವಾಲಿಯರದ ತೋಮರ ವಂಶದ ಮಾನಸಿಂಹನೆಂಬ ರಾಜನು ವೈಜೂ ಹಾಗೂ † ವಿಜಯ ಜಂಗಮರೆಂಬ ಗಾಯಕರಿಗೆ ಉದಾರಾಶ್ರಯವನ್ನಿತ್ತನು. ವಿಜಯ ಜಂಗಮನು ಗ್ವಾಲಿಯರದಲ್ಲಿ ಸಂಗೀತ

---

† ಶ್ರೀ ವೃಂದಾವನಲಾಲ ವರ್ಮಾ ಅವರು ಹಿಂದಿಯಲ್ಲಿ ಪ್ರಸಿದ್ಧ ಐತಿಹಾಸಿಕ ಕಾದಂಬರಿಕಾರರು. ಅವರ ಉತ್ತಮ ಕೃತಿ "ಮೃಗನಯನಿ" ಎಂಬ ಕಾದಂಬರಿಯಲ್ಲಿ ವಿಜಯ ಜಂಗಮನ ಪಾತ್ರ ಬಹು ಮುಖ್ಯವಾದ ಆದರ್ಶ ಚಿತ್ರವಾಗಿದೆ. ವಿಜಯ ಜಂಗಮನು ವೀರಶೈವ (ಲಿಂಗಾಯತ) ನೆಂದು ಶ್ರೀ ವರ್ಮಾ ಅವರೇ ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ಬರೆದಿರುವರು. —ಸಂ.

ಶಾಲೆಯನ್ನು ಸ್ಥಾಪಿಸಿ ಸಂಗೀತ ಪ್ರಸಾರ ಮಾಡಿದನು. ಇದೇ ತೆರನಾಗಿ ಇಪ್ಪತ್ತ ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಪ್ರಜ್ಞಾಚಕ್ಷುವೆನಿಸಿದ ಮಹಾಮಹಿಮನೊಬ್ಬ ಉಚಿತವಾಗಿ ಸಂಗೀತ ವಿದ್ಯೆಯನ್ನು ಪ್ರಚುರಗೊಳಿಸಿದನು. ಆತನೇ ಗಾನಯೋಗಿ ಪಂಚಾಕ್ಷರಿಯು.

ಸಂಗೀತವು ನಾದಮಯವಾಗಿದೆ. ಸಮ್ಯಕ್ ಗೀತವೇ ಸಂಗೀತವೆನಿಸುವದು. ಸಂಗೀತವು ಮಾನವನ ಹೃದಯಾಂತರಾಳದಿಂದ ಹೊರಹೊಮ್ಮುವ ಹರುಷದ ಧ್ವನಿಯಾಗಿದೆ ಈ ನಾದವಿದ್ಯೆಯು ಅನಾದಿಯಾದುದು. ಚತುರ್ವೇದಗಳಲ್ಲಿ ಸಾಮವೇದವು ಸಂಗೀತಮಯವಾಗಿದೆ. ಉಪನಿಷತ್ತುಗಳು ನಾದವನ್ನು ಬ್ರಹ್ಮವೆಂದು ಘೋಷಿಸಿವೆ. ನಾದ-ಬಿಂದು- ಕಲೆಗಳು ಶಿವಾಂಶಗಳಾಗಿವೆ. ಓಂಕಾರವೇ ಚಿನ್ನಾದವಾಗಿದೆ. ಶಿವನು ನಾದಮಯ; ಅಂತೆಯೇ ಜೀವನೂ ನಾದಪ್ರಿಯ, ನಾದಲೋಲ. ನಾದದಲ್ಲಿ ಮಹತ್ತರವಾದ ಶಕ್ತಿಯಿದೆ. ಗಾಯಕನ ಕಂಠದಿಂದ ಹೊರಹೊಮ್ಮಿದ ಸುಸಂಗೀತವು ಕಲ್ಲನ್ನೂ ಕರಗಿಸಬಹುದು, ನಂದಿದ ಜ್ಯೋತಿಯನ್ನೂ ಪ್ರಕಾಶಿಸಬಹುದು, ಮೇಘಗಳಿಂದ ಮಳೆಗರಿಸಬಲ್ಲುದು. ದೀಪಕ ಮೇಘಮಲ್ಲಾರ ರಾಗಗಳಲ್ಲಿ ಅಂತಹ ಶಕ್ತಿಯಿದೆಯೆಂದು ಸಂಗೀತ ಶಾಸ್ತ್ರಕಾರರು ಹೇಳುತ್ತಾರೆ.

ಪರ ಸಂಗೀತವು ಇದಕ್ಕಿಂತಲೂ ಮಿಗಿಲಾದುದು. ಅದುವೇ ಪರಮ ಸಂಗೀತ. ಪರಮದ ಅರ್ಥವನ್ನು ಹೀಗೆ ಹೇಳಬಹುದು:

'ನಿರತಿಶಯತ್ವೇ ಸತಿ ಕ್ಷಯಶೂನ್ಯತ್ವಂ ಪರಮತ್ವಮ್'

ನಿರತಿಶಯವೂನಾಶರಹಿತವೂ ಆದುದೇ ಪರಮವೆನಿಸುವುದು. ಪರಮ ಸಂಗೀತ ಪಾರಮಾರ್ಥಿಕವಾದುದು. ಲೌಕಿಕ ಸಂಗೀತವು ಲೋಕದ ಜೀವಿಗಳನ್ನು ಮರುಳು ಮಾಡುವುದು, ಆನಂದಪರವಶೆಯನ್ನುಂಟು ಮಾಡುವದು. ಆದರೆ ಪರಮ ಸಂಗೀತವು ಶಿವಸಾಮರಸ್ಯದ ಮಹದಾನಂದವನ್ನು ನೀಡುವದು.

ತ್ರಿವರ್ಗಫಲದಾಃ ಸರ್ವೇ ಜ್ಞಾನಯಜ್ಞಜಪಾದಯಃ ।
ಏಕಂ ಸಂಗೀತವಿಜ್ಞಾನಂ ಚತುರ್ವರ್ಗಫಲಪ್ರದಮ್ ॥

ಸಕಲ ಲೌಕಿಕ ಜ್ಞಾನ, ದಾನ, ಯಾಗ, ತಪಾದಿಗಳು ಮುಖ್ಯವಾಗಿ ಮೂರು ಪುರುಷಾರ್ಥ (ಧರ್ಮ, ಅರ್ಥ, ಕಾಮ) ಗಳನ್ನೇ ಸಾಧಿಸುವವು. ಆದರೆ ಸಂಗೀತ ವಿಜ್ಞಾನವು ನಾಲ್ಕು ಪುರುಷಾರ್ಥಗಳನ್ನು ಸಾಧಿಸುವ ಮಹೋಪಾಯವಾಗಿದೆ. ಆ ಪುರುಷಾರ್ಥಗಳಲ್ಲಿ ಮಾನವ ಜೀವನದ ಚರಮ ಪ್ರಯೋಜನ

ವಾದ ಮೋಕ್ಷವನ್ನು, ಕೈವಲ್ಯವನ್ನು ಸಾಧಿಸುವದೇ ಪರಮ ಸಂಗೀತವು. ಇಂತಹ ಪರಮ ಸಂಗೀತ ಸಾಧನೆಯಿಂದ ಶಿವಯೋಗ ಸಿದ್ಧಿಯನ್ನು ಪಡೆದ ಮಹಾ ಮಹಿಮನು ಉಭಯ ಗಾನ ವಿಶಾರದ, ಗಾಯಕ ಪರಮ ಗುರು, ಪರಮ ಸಂಗೀತ ಪ್ರಚಾರಕ ಪಂಚಾಕ್ಷರ ಗಾನಯೋಗಿಯು. ಪರಮ ಪೂಜ್ಯರಾದ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಬಹು ವಿಶಾಲಹೃದಯರು, ದೂರದರ್ಶಿಗಳು. ಅವರ ಅನುಗ್ರಹದಿಂದಲೇ ಶ್ರೀ ಪಂಚಾಕ್ಷರಿಯು ಬರಿಯ ಗವಾಯಿಯಾಗದೆ ಪರಮ ಗಾನಯೋಗಿಯಾದುದು. ಅವರ ಸಂಗೀತ ಬರಿಯ ಸಂಗೀತವಲ್ಲ; ಶಿವಸಂಗೀತ; ಲೋಕದ ಮಾನವರಿಗೆ ಕಲ್ಯಾಣವನ್ನುಂಟು ಮಾಡುವ ಸ್ವರವಿದ್ಯೆ.

'ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯಾ' ಎಂಬ ಅಣ್ಣ ಬಸವಣ್ಣನವರ ಅಮೃತವಾಣಿಯು ನಾದಮಯ ಸಂಗೀತದಿಂದ ವಿಮುಖ ಗೊಳಿಸಬಹುದು. ಆದರೆ ಅದನ್ನು ಅಪೂರ್ಣ ತಿಳಿದಾಗ ಮಾತ್ರ. ಅದರ ಇಂಗಿತವು ಮರ್ಮಪೂರ್ಣವಾಗಿದೆ. ಗವಾಯಿಯು ಕೇವಲ ಕಲೆಯ ದೃಷ್ಟಿ ಯಿಂದಾಗಲಿ, ಅರ್ಥ ಸಂಪಾದನೆಗಾಗಲಿ, ಮನೋರಂಜನೆಗಾಗಲಿ ತನ್ನ ಕಲೆ ಯನ್ನು ಪ್ರದರ್ಶಿಸಿದರೆ ಅದು ಲೌಕಿಕ ಸಂಗೀತವೆನಿಸುವದು. ಪರಮ ಸಂಗೀತ ದಲ್ಲಿ ಭಕ್ತಿಯ ಬೆಳಕು ಬೆಳಗಬೇಕು. "ಯೋಗಿ ನಿಜಾನಂದದೊಳು ನುಡಿಸುವ ವೀಣೆ ರಾಗರಸದ ತರಂಗಿಣಿ" ಎಂದು ನಿಜಗುಣ ಶಿವಯೋಗಿಗಳು ಹಾಡಿರುವದು ಇಂತಹ ಶಿವಯೋಗ-ಸಂಗೀತವನ್ನೇ ಕುರಿತು. ಅಂತೆಯೇ ಭಕ್ತಿಭಂಡಾರಿ ಬಸವಣ್ಣನವರು ಕಾಯಕವನ್ನೇ ದಂಡಿಗೆಯನ್ನಾಗಿ ಬತ್ತೀಸ ರಾಗವನ್ನು ನುಡಿಸಿದವರು:

ಎನ್ನ ಕಾಯುವ ದಂಡಿಗೆಯ ಮಾಡಯ್ಯಾ
ಎನ್ನ ಸಿರವ ಸೋರೆಯ ಮಾಡಯ್ಯಾ !
ಎನ್ನ ನರವ ತಂತಿಯ ಮಾಡಯ್ಯಾ !
ಎನ್ನ ಬೆರಳ ಕಡ್ಡಿಯ ಮಾಡಯ್ಯಾ !
ಬತ್ತೀಸ ರಾಗವ ಹಾಡಯ್ಯಾ !
ಉರದಲೊತ್ತಿ ಬಾರಿಸು, ಕೂಡಲಸಂಗಮ ದೇವಾ !

ಇಂತಹ ಪರಮ ಸಂಗೀತವನ್ನು ಸಾಧಿಸಿದ್ದರಿಂದಲೇ ಬಸವಣ್ಣನವ ರನ್ನು ಪಾಲ್ಕುರಿಕೆ ಸೋಮನಾಥ ಕವಿಯು 'ಗಾಯಕ ಚಕ್ರವರ್ತಿ' ಎಂದು ಸಂಬೋಧಿಸಿರುವದು. ಮಲುಹಣ ದೇವನು ಭಕ್ತಿಯ ಬೆಳಗನೊಳಗೊಂಡ ಸಂಗೀತದಿಂದ ಶಿವನೊಲುಮೆಯ ಪಡೆದನು. ಮಹಾಕವಿ ಹಂಪೆಯ ಹರೀಶ್ವರನು

ಭಕ್ತಿಯ ಗೀತಗಳನ್ನು ಪಾಡಿ ಪಂಪಾಪತಿಯನ್ನು ಮೆಚ್ಚಿಸಿದನು 'ಉಭಯ ಕವಿ ಕಮಲರವಿ' ಯೆಂದೆನಿಸಿದ ರಾಘವಾಂಕನು ಕಳೆದುಕೊಂಡ ಹಲ್ಲುಗಳನ್ನು ಸಿದ್ದರಾಮ ಶಿವಯೋಗಿಯಂತಹ ಶಿವಶರಣರ ಚರಿತ್ರೆಯನ್ನು ಸಂಗೀತಮಯವಾಗಿ ಕಟ್ಟಿ ಹಾಡಿ ಪಡೆದನು, ಗುರುಕೃಪೆಗೆ ಪಾತ್ರನಾದನು. ವಿದ್ಯಾಕೇಂದ್ರವೆನಿಸಿದ ಕಾಶಿಯಲ್ಲಿ ಪಂಡಿತ ಸಾರ್ವಭೌಮವೆನಿಸಿದ ಜಗನ್ನಾಥ ಕವಿಯು ಗಂಗಾಲಹರಿಯನ್ನು ಹಾಡಿ ಗಂಗಾದೇವಿಯ ಕೃಪೆ ಪಡೆದು ಪುನೀತನಾದನು.

ವಿಭೂಷಿತಾನಂಗರಿಪೂತ್ತಮಾಂಗಾ
ಸದ್ಯಃಕೃತಾಽನೇಕ ಜನಾರ್ತಿಭಂಗಾ ।
ಮನೋಹರೋತ್ತುಂಗಚಲತ್ತರಂಗಾ
ಗಂಗಾ ಮಮಾಂಗಾನ್ಯಮಲೀಕರೋತು ॥

'ಕಾಮನನ್ನು ಗೆಲಿದ ಶಿವನ ಜಡೆಯಲ್ಲಿ ಶೋಭಿಸುವ, ಅನೇಕ ಪ್ರಾಣಿಗಳ ದುಃಖವನ್ನು ಆ ಕೂಡಲೇ ಕಳೆಯುವ, ಅಂದವಾದ ಮತ್ತು ಹೊಯ್ದಾಡುವ ದೊಡ್ಡ ದೊಡ್ಡ ತೆರೆಗಳುಳ್ಳ ತಾಯಿ ಗಂಗೆ ನನ್ನ ಎಲ್ಲ ಅಂಗಗಳನ್ನು ಪಾವನಗೊಳಿಸು' ಎಂದು ಪರಮ ಭಕ್ತಿ-ಭಾವದಿಂದ ಹಾಡುತ್ತ ಶಿವಕವಿ ಜಗನ್ನಾಥನು ಗಂಗಾಮಾತೆಯಲ್ಲಿ ಲಯಹೊಂದಿದನು. ಈ ಪರಮ ಸಂಗೀತದ ವಿದ್ಯೆಯ ಪರಂಪರೆಯಲ್ಲಿಯೇ ನಮ್ಮ ಗಾನಯೋಗಿ ಪಂಚಾಕ್ಷರ ಗವಾಯಿಗಳವರು ಬಾಳಿ ಬಂದರು. ಕೊನೆಗೂ ಶಿವನನ್ನು ಶಿವಶರಣರನ್ನು ಸ್ಮರಿಸಿ ಹಾಡುತ್ತಲೇ ಶಿವನಲ್ಲಿ ಬೆರೆದು ಒಂದಾದರು. ಅವರು ನಿಜಾನಂದದ ನಿಜ ಯೋಗಿಗಳು.

ಶ್ರೀ ಪಂಚಾಕ್ಷರ ಗವಾಯಿಗಳು ತಮ್ಮ ಪಟ್ಟಶಿಷ್ಯರಾದ ಶ್ರೀ ಪುಟ್ಟರಾಜರನ್ನೂ ತಮ್ಮಂತೆ ಪರಮ ಸಂಗೀತ ತಜ್ಞರನ್ನಾಗಿ ಮಾಡಿ ಆಶೀರ್ವದಿಸಿ ಶಿವನಾದಮಯ ಶಿವಯೋಗ ಸಮಾಧಿಯನ್ನೈದಿ ನಿಜಮುಕ್ತರಾದರು.

# ಮಂಗಲಾತ್ಮಕ ಗಾನಯೋಗಿ

## ಶ್ರೀಕಂಠ ಶಾಸ್ತ್ರಿಗಳು, ನಲವಡಿ

ಕನ್ನಡ ನಾಡಿನಲ್ಲಿ ಗಾನಯೋಗಿ ಶ್ರೀ ಪಂಚಾಕ್ಷರ ಗವಾಯಿಗಳವರ ಭೌತಿಕ ಶರೀರವು ಕಣ್ಮರೆಯಾದರೂ ಅವರ ಕೀರ್ತಿಕಾಯವು ಅಮರವಾಗಿದೆ. ಪರಹಿತವೇ ಅವರ ಧ್ಯೇಯ! ಅವರ ಸರ್ವೋತ್ತಮ ಗುಣಗಳು ಅಮೇಯ! ಅವರು ಪ್ರತಿನಿತ್ಯ ವೀರಶೈವ ಧರ್ಮಶಾಸ್ತ್ರೋಕ್ತ ಪಂಚಾಕ್ಷರಗಳನ್ನು ತಮ್ಮ ಬಳಿಕೆ ಯಲ್ಲಿ ತಂದುಕೊಂಡು ವ್ರತ-ನಿಯಮ-ಶೀಲ ಸಂಪನ್ನರಾಗಿ ಎರಡು-ಮೂರು ತಾಸು ಲಿಂಗಪೂಜೆಯಲ್ಲಿ ಮೈಮರೆಯುತ್ತಿದ್ದರು. ಆಗ ಅವರ ಲಿಂಗಪೂಜೆಯನ್ನು ನೋಡಿದವರಿಗೆ ಅವರ ಲಿಂಗನಿಷ್ಠೆ ಎಂತಹದೆಂಬುದು ಗೋಚರವಾಗುತ್ತಿತ್ತು. ಸುನಾಯಿ, ಬಜಂತ್ರಿ, ಘಂಟೆ-ಜಾಂಗಟೆಗಳ ವಾದ್ಯದಲ್ಲಿ ಅವರ ದೈನಿಕ ಶಿವಪೂಜೆ ನಡೆಯುತ್ತಿತ್ತು. ಈ ರೀತಿಯಾಗಿ ಅವರು ಮನದಣಿ ಲಿಂಗಪೂಜೆ ಮಾಡಿದ ಮೇಲೆಯೇ ಪ್ರಸಾದವನ್ನು ಸೇವಿಸುತ್ತಿದ್ದರು. ಈ ನಿತ್ಯವ್ರತವನ್ನು ಅವರು ಜನ್ಮಾವಧಿ ಪಾಲಿಸಿದರು. ಅವರಿಗೆ ದೇಹಾವಸಾನದ ಮೊದಲು ದೇಹದಲ್ಲಿ ಒಂದು ಅಸಹ್ಯ ವ್ಯಾಧಿಯುಂಟಾಯಿತು. (ಅದು ಉದರ ರೋಗ) ಆಗ ಅವರು ಶಸ್ತ್ರಚಿಕಿತ್ಸೆ ಹೊಂದಿದ್ದರೆ, ಆ ರೋಗದಿಂದ ಮುಕ್ತರಾಗಬಹುದಾಗಿತ್ತು. ಆದರೆ ನಿಷ್ಠಾವಂತರಾದ ಗವಾಯಿಗಳು, ಶಸ್ತ್ರ ಚಿಕಿತ್ಸೆಯಿಂದ ತಮ್ಮ ನಿತ್ಯ ವ್ರತಭಂಗ ವಾಗುವದೆಂದು ನೋವಿಗಂಜದೆ ಸಾವಿಗೆ ಸಮ್ಮುಖರಾದರು. ಎಂದಾದರೂ ಸಾವು ಬಿಟ್ಟಿದ್ದಲ್ಲವೆಂಬ ಕಠೋರ ನಿರ್ಧಾರದಿಂದ ಸಾವನ್ನಪ್ಪಿದರು. ಶಿಷ್ಯರ ಕಣ್ಮರೆ ಯಾದರು. ಈ ಲೋಕವನ್ನು ತೊರೆದು ಲಿಂಗದಲ್ಲಿ ಬೆರೆದರು. ಕೊನೆಯ ಉಸಿರು ಬಿಡುವವರೆಗೆ ಲಿಂಗಪೂಜಾಲೀನರಾಗಿ ಲಿಂಗಕ್ಕೆ ಬಿಲ್ವಾರ್ಪಣೆ ಮಾಡುತ್ತ ಶಿವೈಕ್ಯತೆಯನ್ನು ಪಡೆದರು. ಇದಲ್ಲವೇ ಲಿಂಗನಿಷ್ಠೆ! ಲೋಕಮಾನ್ಯರಾದ ಪಂ. ಪಂಚಾಕ್ಷರ ಗವಾಯಿಗಳು "ಕಾಯಕವೇ ಕೈಲಾಸ" ವೆಂದು ಬಡ-ಮಕ್ಕಳಿಗೆ ತಮ್ಮ ಸಂಗೀತ ವಿದ್ಯೆಯನ್ನು ಹೇಳುವದರಲ್ಲಿ ತಮ್ಮ ಆಯುಷ್ಯವನ್ನು ಸವೆಸುತ್ತಿ ದ್ದರಲ್ಲದೆ ಒಂದು ಕ್ಷಣವಾದರೂ ವ್ಯರ್ಥ ಕಾಲಕಳೆಯುತ್ತಿದ್ದಿಲ್ಲ. ಇಂತಾಗಿ ಅವರು ಕಾಯಕದಲ್ಲಿಯೇ ಕೈಲಾಸವನ್ನು ಕಾಣುತ್ತಿದ್ದರು. ಈ ಪ್ರಕಾರವಾಗಿ ತಾವು ಕಲಿತ ಸಂಗೀತ ವಿದ್ಯೆಯನ್ನು ಕುರುಡ ಕುಂಟರೆ ಮೊದಲಾದ ಅಂಗವಿಕಲರಿಗೂ ಕಂಡಿದ್ದು ನಿರ್ಗತಿಕರಾದ ಬಡ-ಮಕ್ಕಳಿಗೂ ನೀಡಿದರು. ಅನ್ನ ಕೊಟ್ಟು ಸಲಹಿ ದರು. ನಿಃಸ್ವಾರ್ಥ ದಾನ ಮಾಡಿದರು. ಇಂತಾದ ಇವರ ಕೀರ್ತಿ ಕನ್ನಡನಾಡಿನ

ಮೂಲೆ ಮೂಲೆಗೂ ಹಬ್ಬಿತು. ಗವಾಯಿಗಳು ಎಲ್ಲ ಜಾತಿಯ ಮಕ್ಕಳನ್ನೂ ತಮ್ಮ ಸಂಸ್ಥೆಯಲ್ಲಿ ಸೇರಿಸಿಕೊಂಡು ಭಿನ್ನಭಾವವಿಲ್ಲದೆ ಎಲ್ಲರಿಗೂ ವಿದ್ಯೆಯನ್ನು ಕಲಿಸುತ್ತಿದ್ದರು ವಿದ್ಯಾರ್ಥಿಗಳು ತಮ್ಮ ಸಂಸ್ಥೆಯಲ್ಲಿ ಸೇರಿದ ಬಳಿಕ ಅವರು ನೀತಿ-ಸಂಪನ್ನರಾಗಬೇಕೆಂದು ಅವರಿಗೆ ಕೆಲವು ನಿರ್ಬಂಧಗಳನ್ನು ಮಾಡಿದ್ದರು. ಆ ನಿರ್ಬಂಧಗಳು ವಿದ್ಯಾರ್ಥಿಗಳನ್ನು ಒಳ್ಳೆಯ ಮಾರ್ಗಕ್ಕೆ ತರುವ ಉತ್ತಮ ಸಂಸ್ಕಾರಗಳೇ ಆಗಿದ್ದವು. ನೀತಿ-ನಿರ್ಬಂಧಗಳ ಮೇಲೆ ನಡೆಯುತ್ತಿರುವ ಗವಾಯಿಗಳ ಸಂಗೀತ ಸಂಸ್ಥೆಯಲ್ಲಿ ವಿದ್ಯಾರ್ಥಿಗಳು ಸಂಗೀತವನ್ನು ಸಂಪೂರ್ಣವಾಗಿ ಅಭ್ಯಾಸ ಮಾಡಿ ಕನ್ನಡ ನಾಡಿನಲ್ಲಿ ಕೀರ್ತಿಯನ್ನು ಸಂಪಾದಿಸಿದ್ದಾರೆ. ಈ ವಿಧವಾಗಿ ಮಾನವ ಕುಲದ ಕಲ್ಯಾಣಚಿಂತನೆಯಲ್ಲಿ ಕಾಲ ಕಳೆದು ತಮ್ಮ ಜೀವನವನ್ನು ಸಾರ್ಥಕಗೊಳಿಸಿದ ಉಭಯ ಗಾನವಿಶಾರದರಾದ ಸರ್ವಮಾನ್ಯ ಶ್ರೀ ಪಂಚಾಕ್ಷರ ಗವಾಯಿಗಳು ಕರ್ನಾಟಕದಲ್ಲಿ ಓರ್ವ ಆದರ್ಶ ವ್ಯಕ್ತಿಗಳಾಗಿದ್ದರು. ಗಾಯನಾಚಾರ್ಯರೆನಿಸಿ ಮೆರೆದ ಗವಾಯಿಗಳಿಗೆ ದಾನ-ಶೂರ ಬಸರೀಗಿಡದ ವೀರಪ್ಪನವರ ಆಶ್ರಯ ದೊರೆತು ಅವರಿಂದ ಬಡ-ಮಕ್ಕಳ ಕಲ್ಯಾಣವಾದದ್ದು ಚಿರಸ್ಮರಣೀಯವಾಗಿದೆ. ಉಳ್ಳವರು ಜಗತ್ತಿಗೆ ಬೇಕಾದ ಉಪಕಾರ ಮಾಡಬಹುದು. ಕಂಣಿಲ್ಲದ ಅಸಹಾಯ ಸ್ಥಿತಿಯಲ್ಲಿದ್ದ ನಮ್ಮ ಗವಾಯಿಗಳು ಕಂಣಿಲ್ಲದವರಿಗೂ, ನಿರ್ಗತಿಕರಿಗೂ ಗಾನ ವಿದ್ಯಾದಾನ ಮಾಡಿದ್ದೆಂದರೆ ಜೀವದಾನ ಮಾಡಿದಂತಾಗಿದೆ ಜಗತ್ತಿನಲ್ಲಿ ಇವಕ್ಕಿಂತ ಹೆಚ್ಚಿನ ಉಪಕಾರ ಮತ್ತಾವುದು ? ಇಂತಹ ಪುಣ್ಯಾತ್ಮರನ್ನು ನಾವು ಬಂಣಿಸಿ ಬರೆಯದಿದ್ದರೆ ನಾವು ಏನು ಬರೆದು ಏನು ಪ್ರಯೋಜನ !

ಲಿಂಗ ತತ್ವವನರಿದ
ಲಿಂಗ ಯೋಗದಿ ನಲಿದ
ಲಿಂಗ ನಿಷ್ಠೆಯಿಂ ಪ್ರೈಮನಗಳಂ ಮರೆದ
ಮಂಗಲಾತ್ಮಕ ಗಾನಯೋಗಿ ಪಂಚಾಕ್ಷರಂ
ಲಿಂಗದೋಳ್ ಬೆರೆದಂ.

# ಶ್ರೀ ಗವಾಯಿಗಳವರ ಸಮತ್ವ ದೃಷ್ಟಿ

ಶ್ರೀ ಗಂಗಾಧರ ಶಾಸ್ತ್ರಿ, ಚಿತ್ತರಗಿ

ಆತ್ಮವನ್ನು ಅರಿತವರೇ ಅಮರ ಜೀವಿಗಳು. ಅವರೇ ಲೋಕದಲ್ಲಿ ಸಮತ್ವ ದೃಷ್ಟಿಯುಳ್ಳವರು. ಶ್ರೀ ಗವಾಯಿಗಳವರು ಅಮರ ಜೀವಿಯಾಗಿ ಬಾಳಿ ಉಳಿದಿರುವುದಕ್ಕೆ ಅವರಲ್ಲಿ ಸದಾ ಜಾಗ್ರತವಾಗಿದ್ದ ಆ ದಿವ್ಯ ದೃಷ್ಟಿಯೇ ಮುಖ್ಯ ಕಾರಣವಾಗಿದೆ. ಅವರು ಸಕಲರಲ್ಲಿ ದಯೆಯನ್ನು ತೋರಿ ಆತ್ಮೌಪಮ್ಯ ದೃಷ್ಟಿಯುಳ್ಳ ಮಹಾತ್ಮರಾಗಿದ್ದರು. ಶ್ರೀಗುರು ಕುಮಾರೇಶನಿಂದ ಅವರು ಈ ದೃಷ್ಟಿಯನ್ನು ಪಡೆದಿದ್ದರು. ಅಂತೆಯೇ ಅವರು ಶ್ರೀಕುಮಾರೇಶನನ್ನು ತಮ್ಮ ಅಧಿದೇವರೆಂದು ನಂಬಿದರು. ಅವರ ತತ್ವಗಳನ್ನು ಅವರು ತಮ್ಮ ಆತ್ಮದ ಉಸಿರೆಂದು ತಿಳಿದು ಕೊಂಡು ನಡೆದರು. ಆದುದರಿಂದಲೇ ಅವರಿಗೆ ಈ ಬಾಹ್ಯ ಜಡಚಕ್ಷುವಿನ ಆವಶ್ಯಕತೆ ಇರಲಿಲ್ಲ. ಶ್ರೀ ಗವಾಯಿಗಳವರು ಒಳಗಣ್ಣಿನ ತಿಳಿಬೆಳಗಿನಲ್ಲಿ ಹೊಳೆಯುವ ಜಗತ್ತನ್ನೆಲ್ಲ ಸಮನ್ವಯ ದೃಷ್ಟಿಯಿಂದಲೇ ಕಾಣುತ್ತಿದ್ದರು. ಹೊರಗಣ್ಣಿಗೆ ಹೊರಳುವ, ಮುಚ್ಚುವ, ತೆರೆಯುವ ಆಲಿಯಾಟವು ವಿಚಿತ್ರವಾಗಿರುತ್ತದೆ. ಒಂದೊಂದು ಸಲ ವಿದ್ಯೆ, ಧನ, ಕೀರ್ತಿ, ಬಲ ಇವುಗಳಿಂದ ಉಬ್ಬಿದ ಹೊರಗಣ್ಣು ತೆರೆದಿದ್ದರೂ ಏನನ್ನೂ ಯಾರನ್ನೂ ಕಾಣದಂತೆ ವರ್ತಿಸುತ್ತವೆ ಆದರೆ ಗವಾಯಿಗಳವರ ಸಮತ್ವದ ದೃಷ್ಟಿ ಮಾತ್ರ ಯಾವಾಗಲೂ ವಿಕಸಿತವಿದ್ದು, ಅಚಲವಿದ್ದು, ಯಾವ ದೋಷಕ್ಕೂ ಎಡೆಯಿಲ್ಲದೆ, ಎಲ್ಲವನ್ನು ಎಲ್ಲರನ್ನು ತನ್ನಂತೆ ನೋಡಿಕೊಳ್ಳುತ್ತಿದ್ದಿತು. ಅಂತೆಯೇ ಅವರು ವಿಶ್ವಾತ್ಮರಾಗಿ ಅಮರ ಜೀವಿಗಳಾಗಿ ಬಾಳಿದರು.

ಒಂದು ಸಲ ಶಿಷ್ಯನೊಬ್ಬನು ಆಶ್ರಮದ ನೇಮವನ್ನು ಮೀರಿ ರಾತ್ರಿಯಲ್ಲಿ ಸಿನೇಮಾ ನೋಡಲಿಕ್ಕೆ ಹೋಗಿದ್ದನು. ಆ ತಪ್ಪಿಗಾಗಿ ಗವಾಯಿಗಳು ಅವನನ್ನು ಆಶ್ರಮದಿಂದ ಹೊರಗೆ ಹಾಕಿದರು. ಆಗ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟ ಶಿಷ್ಯನು ಗುರುವರ್ಯ ಗವಾಯಿಗಳ ಕಪಾಳಕ್ಕೆ ಚೆನ್ನಾಗಿ ಬಿಗಿದುಬಿಟ್ಟನು. ಅಂಥವನನ್ನು ಕ್ಷಮಿಸಿ ಇಟ್ಟುಕೊಳ್ಳುವ ಉದಾರ ಗುಣವು ಇನ್ನಾರಿಗೆ ಉಂಟು ? ಅವರೂ ನನ್ನ ಮಕ್ಕಳೆಂಬ ಕರುಣಾದೃಷ್ಟಿಯೆ ಅದಕ್ಕೆ ಕಾರಣವಲ್ಲದೆ ಇನ್ನೇನು? ಸೇವೆಗೈದು, ಮನವೊಲಿಸಿದವನಾಗಲಿ, ಕಪಾಳಕ್ಕೆ ಹೊಡೆದವನಾಗಲಿ, ಇಬ್ಬರಿಗೂ ಒಂದೇ ಭಾವದಿಂದ ವಿದ್ಯಾದಾನ ಮಾಡುತ್ತಿದ್ದ ಶ್ರೀ ಗವಾಯಿಗಳವರ ಸಮತ್ವ ದೃಷ್ಟಿ ಅನುಪಮವಾದುದು.

ಒಂದು ಸಲ ಶ್ರೀ ಗವಾಯಿಗಳು ಪರಿವಾರದೊಂದಿಗೆ ಬಾಗಲ ಕೋಟೆಯಲ್ಲಿ ಮುಕ್ಕಾಮು ಮಾಡಿದ್ದರು. ಆರ್ಥಿಕ ಮುಗ್ಗಟ್ಟ ನೂರಾರು ವಿದ್ಯಾರ್ಥಿಗಳಿಗೆ ಪ್ರಸಾದದ ವ್ಯವಸ್ಥೆ ಕಠಿಣವಾಗಿತ್ತು. ಎಲ್ಲ ಹುಡುಗರಿಗೆ ಹಾಲು ಕೊಡುವದನ್ನು ನಿಲ್ಲಿಸಿ ಗವಾಯಿಗಳ ಮಟ್ಟಿಗೆ ಹಾಲಿ ವ್ಯವಸ್ಥೆ ಮಾಡಿದೆನು. ಇದು ಗವಾಯಿಗಳಿಗೆ ತಿಳಿಯಿತು. ಅವರು ಹಾಲನ್ನು ಲಿಂಗಕ್ಕೆ ಅರ್ಪಿತ ಮಾಡಲಿಲ್ಲ. ನನ್ನನ್ನು ಕರೆಯಿಸಿ "ಮಕ್ಕಳನ್ನು ಬಿಟ್ಟ ನನಗೊಬ್ಬನಿಗೇ ನೀನು ಹಾಲು ಕುಡಿ ಎಂದು ಹೇಳುವೆಯಾ? ಮನೆಯ ನೀನು ಹಸಿದ ನಿನ್ನ ಮಕ್ಕಳನ್ನು ಬಿಟ್ಟು ನೀನೊಬ್ಬನೇ ಊಟ ಮಾಡುವೆಯಾ ಹೇಳು. ಇದು ತಂದೆಯ ಧರ್ಮವೇ ?" ಎಂದು ಕೇಳಿದಾಗ ನಾನು ಮೂ ನಾಗಿ ನಿಂತು ಬಿಟ್ಟೆ. ಆಗ ಅವರು "ಹೋಗು. ಕೊಡುವ ಶಿವನಿಗೆ ಬಡ ನವೇ ? ಗುರು ಕುಮಾರೇಶನು ನಾಳೆ ಹಣ ಕಳಿಸುತ್ತಾನೆ. ಹಾಲು ತರಿಸ ಎಲ್ಲ ವಿದ್ಯಾರ್ಥಿಗಳಿಗೂ ಕೊಡು." ಎಂದು ಹೇಳಿದರು. ಅವರ ಮಾತನ್ನ ಮೀರದೆ ಹಾಲು ತರಿಸಿ ಎಲ್ಲರಿಗೂ ಕೊಟ್ಟೆ. ನೂರು ಮಕ್ಕಳನ್ನು ಸೇರಿಕೊಂ ಹಿಗ್ಗಿನಿಂದ ನಗುತ್ತ ಅಂದು ಹಾಲು ಲಿಂಗಾರ್ಪಿತ ಮಾಡಿ ಗವಾಯಿಗಳು ನಿಶ್ಚಿಂ ಯಿಂದ ನಿದ್ದೆ ಹೋದರು. ಆದರೆ ಉದ್ದರಿ ಉಪದ್ರವದಿಂದ ನನಗೆ ನಿದ್ರೆ ಬ ಲಿಲ್ಲ. ಬೆಳಗ್ಗೆ ಎದ್ದು ಗವಾಯಿಗಳ ಹತ್ತಿರ ಹೋಗಿ– "ಎಲ್ಲರಿಗೂ ಪಾಠ ಹೇ ದಣಿಯುವ ತಮಗೆ ಹಾಲು ಬೇಕು. ಉಳಿದವರಿಗೆಲ್ಲ ಏಕೆ ?" ಎನ್ನುವಷ್ಟ ಪೋಸ್ಟ್‌ಮನ್ನನು ಬಂದನು. ಅದಾರೊ ಅರಿಯದ ಭಕ್ತರೊಬ್ಬರು ಸಂಸ್ಥೆ ಸಹಾಯಕ್ಕೆಂದು ಎರಡು ನೂರು ರೂಪಾಯಿ ಮನಿಯಾರ್ಡರ್ ಕಳಿಸಿದ್ದ ಗವಾಯಿಗಳು ಎದ್ದವರೇ ಕುಣಿಯುತ್ತ "ನಮ್ಮ ಸ್ವಾಮಿ ದೊಡ್ಡವನು. ತೆಗೆದುಕೋ ಹಾಲಿನ ಬಾಕಿಯನ್ನು ತೀರಿಸು." ಎಂದು ಹೇಳಿ ನನ್ನ ಕೈಗೆ ಹಣ ವಿತ್ತರು. ಇದಕ್ಕಿಂತ ಆತ್ಮೀಯತೆಯ, ದೂರದ, ದಯಾಮಯ ದೃಷ್ಟಿ ಇನ್ನ ಬೇರೆ ಬೇಕೆ ?

ಅವರಿಗೆ ಕಣ್ಣಿರಲಿಲ್ಲವೆಂದು ಹೇಳುವವರಿಗೆ ನನ್ನದೊಂದೇ ಉತ್ತರ ಅವರನ್ನು ನೀವು ಕಂಡೇ ಇಲ್ಲ ಎಂದು. ಅವರ ನಿಕಟವರ್ತಿಯಾಗಿ ಬಾ ಅವರ ಶಿಷ್ಯನೆಂದು ಹೇಳಿ, ಅವರನ್ನೂ ಅವರ ಆತ್ಮವನ್ನೂ ಅರಿಯದಿದ್ದರೆ ಹೇಗೆ ಅವರ ಮೈಯೆಲ್ಲ ಕಣ್ಣು. ಅವರ ಕೈಯೆಲ್ಲ ಕಣ್ಣು. ತೆರೆದ ಹೃದಯದ ಕಣ್ಣಿ ನಿಂದ ಎಲ್ಲರನ್ನು ತಮ್ಮಂತೆ ಕಾಣುವ ದಿವ್ಯ ಚಕ್ಷು ಗವಾಯಿಗಳವರಲ್ಲಿ ವಾಗಿತ್ತು. ಅಂತೆಯೇ, ಅವರು ಕರೆದು ತಲೆಯ ಮೇಲೆ ಕೈಯಿಟ್ಟು ಹೃದಯ ಉಕ್ಕಿ ಹರಸಿದರೆ ಎಂಥವನೂ ಮನುಷ್ಯನಾಗುತ್ತಿದ್ದ. ಕೆಲವರು ಮಾನವರ

ಬಾಳಿದರೆ, ಕೆಲವರು ಅದೇ ಹರಕೆಯನ್ನು ಬೆಳೆಸಿಕೊಂಡು ದೇವಶಕ್ತಿಯನ್ನು ಪಡೆದರು. ಅವರು ಶ್ರೀ ಪುಟ್ಟರಾಜ ಗವಾಯಿಗಳು. ತಮ್ಮನಂತರ ತಮ್ಮದನ್ನು ಉಳಿಸಿಕೊಂಡು ಹೋಗುವ ಮಹಾಪುರುಷ ಬೇಕಾಗಿದ್ದ. ಅಂಥವರನ್ನೇ ಹುಡುಕಿ ಸಂಸ್ಕಾರ ಕೊಟ್ಟು ಕೊಡಿಸಿ ಪರಮಪೂಜ್ಯ ಗುರುವರ್ಯ ಹಾನಗಲ್ಲ ಕುಮಾರೇಶನ ಬಯಕೆ, ತಮ್ಮ ಕರ್ತವ್ಯದ ಫಲಶ್ರುತಿ ಇವೆರಡನ್ನೂ ಬದುಕಿಸಬಲ್ಲ, ಬೆಳೆಸಬಲ್ಲ ಕಾರಣಿಕ ಶಕ್ತಿಯನ್ನು ಕರುಣಿಸಿದರು. ಹೆಸರು ಪುಟ್ಟವಾದರೂ ಅವರಲ್ಲಿ ಮಹದಂತ ಬೆಳಗು ರಾಜಿಸಿತು. ಇದು ಗುರುವರ್ಯ ಗವಾಯಿಗಳವರ ದಿವ್ಯದೃಷ್ಟಿಯ ಪ್ರಭಾವ.

ತಮ್ಮ ಅಂಗದ ಮೇಲಿನ ಅಭಿಮಾನವನ್ನೇ ಲಿಂಗದ ಮೇಲಿಟ್ಟು, ಮರಣವನ್ನು ಮಂಗಲಮಯ ಹಬ್ಬವನ್ನಾಗಿಸಿ ಇಷ್ಟಲಿಂಗದೇವನನ್ನು ಬಿಟ್ಟು ಬಿಡದೆ ಪೂಜಿಸುತ್ತ ಅಂಗವೆ ಲಿಂಗವಾದರು; ಅಮರಕಾಯರಾದರು. ಅಮರ ಜೀವಿ ಪರಮಗುರು ಪಂಚಾಕ್ಷರ ಗವಾಯಿಗಳು ಶಿವನಲ್ಲಿ ಬೆರೆದ ಶಿವಯೋಗಿಗಳೆನಿಸಿದ ದಿನವಲ್ಲವೇ ಇದು ಜ್ಯೇಷ್ಠ ಬಹುಳ ಪಂಚಮಿಯ ಪುಣ್ಯ ದಿನ. ಅಂತೆಯೆ, ಬಹು ಜನ ಪುಣ್ಯ ಸಾಹಿತಿಗಳ ಲೆಕ್ಕಣಿಕೆಯಿಂದ ನಿರ್ಮಲವಾದ ಅಮೃತವನ್ನು ತುಂಬಿಕೊಂಡು ಸೂಸಿ ಹರಿಯುವ ಗಂಗೆಯಂತೆ ಪವಿತ್ರವಾದ ಸ್ಮಾರಕ ಗ್ರಂಥವಿದು ಹೊರ ಬರುತ್ತಿದೆ. ಈ ಮಂಗಲಪ್ರಸಂಗದಲ್ಲಿ ಗುರುವರ್ಯರ ಉಜ್ವಳ ಕೀರ್ತಿಯೇ ಮೈದಾಳಿ ಬಂದಿರುವಂತೆ ಅವರ ಅಮೃತ ಶಿಲಾಮೂರ್ತಿಯು ನಮ್ಮ ಮುಂದೆ ಕಂಗೊಳಿಸುತ್ತಿದೆ. ಸ್ಮಾರಕಗ್ರಂಥವನ್ನು ಪೂರೈಸುವದು ಶ್ರೀ ಪುಟ್ಟರಾಜರ ಮಹಾ ಪ್ರಯತ್ನವಾಗಿದ್ದು, ಮೂರ್ತಿಯನ್ನು ಸ್ಥಾಪಿಸುವದು ನನ್ನ ಹೊಣೆಯಾಗಿದೆ. ಗುರುವರ್ಯ ಶ್ರೀ ಗವಾಯಿಗಳವರ ಸಮಸ್ತವಿಯ ಕೃಪಾದೃಷ್ಟಿ ಈ ರೂಪದಲ್ಲಿ ಪ್ರಕಟವಾಗಿದೆಯೆಂದು ಹೇಳಲು ನನಗೆ ಹೆಮ್ಮೆಯೆನಿಸುತ್ತಿದೆ. ಆ ಮಹಾಶಕ್ತಿಯೇ ನಮ್ಮನ್ನು ಮುಂದೆ ನಿಲ್ಲಿಸಿ ಈ ಕಾರ್ಯಗಳನ್ನು ಪೂರ್ಣಗೊಳಿಸುತ್ತಿದೆ-ಯೆಂದು ನಾನು ನಂಬಿರುವೆನು. ಈ ಸೇವಾಭಾಗ್ಯವನ್ನು ನನಗೆ ವಹಿಸಿದ ಶ್ರೀ ಪುಟ್ಟರಾಜನ್ನೂ ಆ ಸಾಮರ್ಥ್ಯವನ್ನು ಅನುಗ್ರಹಿಸಿದ ಗುರುವರ್ಯ ಶ್ರೀ ಪಂಚಾಕ್ಷರಸ್ವಾಮಿಯನ್ನೂ ಶಿರಸಾ ನಮಸ್ಕರಿಸಿ ವಿರಮಿಸುವೆನು.

# ಗ್ರಂಥ ಸಂಶೋಧನಾನುರಾಗಿ

## ಶ್ರೀ ಕಲ್ಲಿನಾಥ ಶಾಸ್ತ್ರಿ, ಹಿರೇಮಠ, ದ್ಯಾಂಪುರ

ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಪ್ರಾರಂಭಿಸಿದ ಗ್ರಂಥ ಸಂಶೋಧನೆಯ ಮಹಾ ಕಾರ್ಯವನ್ನು ಅವರು ಲಿಂಗೈಕ್ಯರಾದ ನಂತರ ಅವರ ಧ್ಯೇಯಾನುವರ್ತಿಗಳಾದ ಪಂ. ಪಂಚಾಕ್ಷರ ಗವಾಯಿಗಳು ಮುಂದುವರಿಸಿಕೊಂಡು ಬಂದರು.

ದ್ಯಾಂಪುರ ಹಿರೇಮಠದ ಪಂ. ಮಹಾಲಿಂಗಯ್ಯನವರು ಲಿಂ. ಹಾನಗಲ್ಲ ಶ್ರೀಗಳವರ ಅಪ್ಪಣೆಯ ಮೇರೆಗೆ ಶಿವಯೋಗಮಂದಿರಲ್ಲಿ ಅವರ ನಿಕಟವರ್ತಿಗಳಾಗಿದ್ದುಕೊಂಡು, ವೀರಶೈವ ತತ್ತ್ವಜ್ಞಾನವನ್ನೂ ವಚನ ವಾಙ್ಮಯವನ್ನೂ ಆಳವಾಗಿ ಅಭ್ಯಾಸ ಮಾಡಿ ಶಿವಾನುಭವ ಶಾಸ್ತ್ರವನ್ನು ಸಂಪಾದಿಸಿದವರು. ಲಿಂ. ದ್ಯಾಂಪುರದ ಚೆನ್ನಕವಿಗಳು, ಹುಕ್ಕೇರಿಯ ಪಂ. ಸದಾಶಿವ ಶಾಸ್ತ್ರಿಗಳು, ಮತ್ತು ದ್ಯಾಂಪುರದ ಪಂ. ಮಹಾಲಿಂಗಯ್ಯನವರು, ಹಾನಗಲ್ಲ ಶ್ರೀಗಳ ಮಾರ್ಗದೋರಿಕೆಯಲ್ಲಿ ಮುಂದುವರಿದು ಕವಿತ್ವ ಶಕ್ತಿಯನ್ನು ಸಂಪಾದಿಸಿದರು. ಪಂ. ಮಹಾಲಿಂಗಯ್ಯನವರ ಕವಿತ್ವ ಶಕ್ತಿ ಸಹಜವಾದುದು. ಅವರ ಬರೆಹ ಮತ್ತು ಪದ್ಯಗಳು 'ಸುಕುಮಾರ' ದಲ್ಲಿ ಪ್ರಕಟವಾಗಿವೆ. ಅವರು ಮಂದಿರದ ಸಾಧಕರಿಗೆ ಕನ್ನಡ ಕಾವ್ಯಗಳನ್ನೂ ವಚನ ಶಾಸ್ತ್ರದ ಪಾಠ ಪ್ರವಚನಗಳನ್ನೂ ಹೇಳುತ್ತಿದ್ದರು.

ಪಂ. ಮಹಾಲಿಂಗಯ್ಯನವರು ಹಾನಗಲ್ಲ ಶ್ರೀಗಳವರ ಅಪ್ಪಣೆಯಂತೆ ಮಂದಿರದ ಗ್ರಂಥಾಲಯದಲ್ಲಿ ಸಂಗ್ರಹಿಸಿದ ತಾಳೆಗರಿ ಮತ್ತು ಕೋರಿ ಕಾಗದದ ಗ್ರಂಥಗಳನ್ನು ಸಂಶೋಧಿಸಿದರು. ಭೀಮಕವಿಯು ಬಸವಪುರಾಣದಲ್ಲಿ ಹೇಳಿರುವ ಬಸವಣ್ಣನವರ ಮೂವತ್ತು ನಾಲ್ಕು ಪ್ರತಿಜ್ಞೆಗಳನ್ನು ಟೀಕೆ ತಾತ್ಪರ್ಯಗಳೊಂದಿಗೆ ಸಂಗ್ರಹಿಸಿ 'ಬಸವ ಭಾಷೆ' ಎಂಬ ಗ್ರಂಥವನ್ನು ೧೯೩೬ ರಲ್ಲಿ ಪ್ರಕಟಿಸಿದರು. ಶ್ರೀ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯ ಎರಡನೆಯ ಪ್ರಕರಣದಲ್ಲಿ ಸೂತ್ರರೂಪವಾಗಿ ವಿವೇಚಿಸಿರುವ ಅರವತ್ತು ನೀತಿಯ ವಾಕ್ಯಗಳನ್ನು ವಿಶೇಷಾರ್ಥ–ವಿವರಣೆ ಸಹಿತ 'ನೀತಿ ಸಂಗ್ರಹ' ಎಂಬ ಗ್ರಂಥದಲ್ಲಿ ಸಂಪಾದಿಸಿರುವರು. ಮತ್ತು 'ಮಹಾಕೂಟ ಮಹಾತ್ಮ್ಯ' ಎಂಬ ಗ್ರಂಥವನ್ನು ಸರಸವಾಗಿ ವಚನ ರೂಪದಲ್ಲಿ ಬರೆದಿರುವರು.

ನಿಜಗುಣರ ಷಟ್ ಶಾಸ್ತ್ರಗಳನ್ನು ಸಂಶೋಧಿಸಿ, ಪರಿಷ್ಕರಿಸಿ, ಪ್ರಕಟಿಸುವ ಯೋಜನೆಯನ್ನು ಹಾನಗಲ್ಲ ಶ್ರೀಗಳವರಿಟ್ಟುಕೊಂಡಿದ್ದರು ಈ ಮಹಾ ಕಾರ್ಯಕ್ಕೆ ದ್ಯಾಂಪುರದ ಪಂ. ಮಹಾಲಿಂಗಯ್ಯನವರನ್ನು ನಿಯಮಿಸಲಾಗಿರಿಸಿದ್ದರು. ಅವರು 'ಪಾರಮಾರ್ಥ ಪ್ರಕಾಶಿಕೆ'[1] 'ವಿವೇಕ ಚಿಂತಾಮಣಿ' ಮತ್ತು 'ಕೈವಲ್ಯ ಪದ್ಧತಿ' ಗಳನ್ನು ಶುದ್ಧವಾಗಿ ಬರೆಯಲು ಪ್ರಾರಂಭಿಸಿದರು. 'ವಿವೇಕ ಚಿಂತಾಮಣಿ'[2] ಯ ಮುದ್ರಿತ ಪ್ರತಿಗಳಿಗೂ ಓಲೆಗರಿಯ ಪ್ರತಿಗಳಿಗೂ ಸರಿಹೋಲಿಸಿ ನೋಡಿ, ಅವುಗಳಲ್ಲಿ ಬಹು ವ್ಯತ್ಯಾಸವಿರುವದನ್ನು ಕಂಡು ಹಿಡಿದು, ಅದರ ಶುದ್ಧ ಪ್ರತಿಯನ್ನು ಅವರು ಬಹು ಪರಿಶ್ರಮವಹಿಸಿ ಬರೆದಿರುವರು.

ಸಮಾಜದ ದುರ್ದೈವದಿಂದ ಹಾನಗಲ್ಲ ಶ್ರೀಗಳು ಲಿಂಗೈಕ್ಯರಾಗಲು ಅವರ ಘನೋದ್ದೇಶಗಳಲ್ಲೊಂದಾದ ಗ್ರಂಥ ಸಂಶೋಧನೆಯ ಮಹಾಕಾರ್ಯವು ಅಂಬರಲ್ಲಿ ನಿಂತು ಬಿಟ್ಟಿತು. ಆಗ ಹಾನಗಲ್ಲ ಶ್ರೀಗಳವರ ಧ್ಯೇಯವನ್ನೇ ತಮ್ಮ ಧ್ಯೇಯವಾಗಿರಿಸಿಕೊಂಡಿದ್ದ ಪಂ. ಪಂಚಾಕ್ಷರಿಗವಾಯಿಗಳವರು ಪರಮ ಸಾತ್ತ್ವಿಕ ವೃತ್ತಿಯ, ಸರಳ ಜೀವನದ, ಹಿರಿಯ ಶಿವಾನುಭಾವಿಗಳಾದ ಪಂ. ಮಹಾಲಿಂಗಯ್ಯನವರನ್ನು ತಮ್ಮ ಶ್ರೀ ಕುಮಾರೇಶ್ವರ ಸಂಗೀತ ಸಾಹಿತ್ಯ ಮಹಾವಿದ್ಯಾಲಯದ ಗುರುಕುಲದಲ್ಲಿ ಕನ್ನಡ ಪ್ರಾಧ್ಯಾಪಕರನ್ನಾಗಿ ನಿಯಮಿಸಿಕೊಂಡು, ನಿಂತು ಹೋಗಿದ್ದ ಗ್ರಂಥ ಸಂಶೋಧನೆಯ ಮಹಾಕಾರ್ಯವನ್ನು ಅವರಿಂದಲೆ ಮುಂದುವರಿಸಿದರು. 'ಪಾರಮಾರ್ಥ ಪ್ರಕಾಶಿಕೆ' 'ವಿವೇಕ ಚಿಂತಾಮಣಿ' ಮತ್ತು 'ಕೈವಲ್ಯ ಪದ್ಧತಿ' ಮೊದಲಾದ ಗ್ರಂಥಗಳ ಶುದ್ಧ ಪ್ರತಿ ಬರೆಯುವ ಅರ್ಧಕ್ಕೆ ನಿಂತು ಹೋಗಿದ್ದ ಕಾರ್ಯ ಲಿಂ. ಗವಾಯಿಗಳ ಸಾನ್ನಿಧ್ಯದಲ್ಲಿ ಪೂರ್ಣಗೊಂಡಿತು. ಈ ಮಹತ್ಕಾರ್ಯವನ್ನು ಶ್ರೀ ಗವಾಯಿಗಳು ತಮ್ಮ ಜೀವನದ ಕೊನೆಯುಸಿರಿನ ವರೆಗೂ ನಡಿಸಿಕೊಂಡು ಬಂದರು.

---

1. ಈ 'ಪಾರಮಾರ್ಥ ಪ್ರಕಾಶಿಕೆ' ಯನ್ನು ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳು ಓಲೆಗರಿ ಪ್ರತಿಗಳಿಂದ ಪರಿಶೋಧಿಸಿ ಪಾಠಾಂತರ ಮತ್ತು ಟಿಪ್ಪಣಿಗಳೊಂದಿಗೆ ಶ್ರೀ ಶಿವಯೋಗಮಂದಿರದ 'ಸುಕುಮಾರ' ಗ್ರಂಥಮಾಲೆಯ ವತಿಯಿಂದ ಪ್ರಕಟಿಸಿರುವರು.

2. ಇದನ್ನೂ ಹುಬ್ಬಳ್ಳಿಯ ಜ. ಮೂರು ಸಾವಿರಮಠದ ಧರ್ಮ ಸಂಶೋಧನ ಮಂಡಳದ ವತಿಯಿಂದ ಪ್ರೊ. ಜಿ. ಎಂ. ಉಮಾಪತಿ ಶಾಸ್ತ್ರಿಗಳು ಪರಿಶೋಧಿಸಿ ಪ್ರಕಟನೆಗೆ ಅಣಿ ಮಾಡುತ್ತಿರುವರು.

ಶ್ರೀ ಗವಾಯಿಗಳ ತರುವಾಯ ಪಂ. ಮಹಾಲಿಂಗಯ್ಯನವರು ಗವಾಯಿಗಳ ಮತ್ತು ಹಾನಗಲ್ಲ ಶ್ರೀಗಳ ಉದ್ದೇಶಕ್ಕನುಸರಿಸಿ, ತಮ್ಮ ನಿಷ್ಠ ಬಾಳನ್ನು ಗ್ರಂಥ ಸಂಶೋಧನೆಯಲ್ಲಿಯೆ ಸವೆಯಿಸಿ, ಅವರು ದಿ. ೮-೧೨-೧೯೬೩ ರಂದು ತಮ್ಮ ೯೫ ನೆಯ ವಯಸ್ಸಿನಲ್ಲಿ ಲಿಂಗೈಕ್ಯರಾದರು. ಸುಮಾರು ಮೂವತ್ತು ವರ್ಷ ಅವಿಶ್ರಾಂತ ಶ್ರಮವಹಿಸಿ, ಗ್ರಂಥ ಸಂಶೋಧಿಸಿ, ಅವರು ಬರೆದಿಟ್ಟು ಹೋದ ಅಮುದ್ರಿತ ಕೈಬರಹದ ಗ್ರಂಥಗಳು ಎಷ್ಟೋ ಇವೆ. ಅವುಗಳನ್ನು ಶಿವಾನುಭಾವಿಗಳು ಅವಲೋಕಿಸಬೇಕಾಗಿದೆ.

ಹೀಗೆ ಲಿಂ. ಹಾನಗಲ್ಲ ಶ್ರೀಗಳವರಿಂದ ಪ್ರಾರಂಭಿಸಲ್ಪಟ್ಟು ನಿಂತು ಹೋಗಿದ್ದ ಗ್ರಂಥಸಂಶೋಧನೆಯ ಮಹಾ ಕಾರ್ಯವನ್ನು ಮುಂದುವರಿಸಿಕೊಂಡು ಬಂದ ಜನ್ಮಾಂಧರಾದ ಪಂ. ಪಂಚಾಕ್ಷರ ಗವಾಯಿಗಳವರ ಸಾಹಸವು ಅಸಾಧಾರಣವಾದುದು ! ಅನುಪಮವಾದುದು ! !

# ಒಡೆಯ ಗುರು ಪಂಚಾಕ್ಷರರ ನಡೆ-ನುಡಿ

ಶ್ರೀ ಗುರುಸ್ವಾಮಿ, ಕಲಕೇರಿ, "ಸಂಗೀತ ವಿಶಾರದ"

ಒಂದು ವಸ್ತುವು ಮೈದಾಳಲು, ರೂಪುಗೊಳ್ಳಲು, ಬೆಳೆದು ಬಾಳಲು ಎರಡರ ಜೋಡಿ ಬೇಕು. ಗಿಡ ಸುರಕ್ಷಿತವಾಗಿರಬೇಕಾದರೆ ತಾಯಿ ಬೇರು, ಅಂಟು ಬೇರುಗಳೆರಡೂ ಬೇಕು. ಅಂತೆಯೇ ಮಾನವನ ಜೀವನ ಪರಿಪೂರ್ಣ ವಿಕಾಸ ಪಡೆಯಲು ನಡೆ-ನುಡಿಗಳ ಪರಸ್ಪರ ಸಹಕಾರ ಸಹಯೋಗ ಬೇಕೇಬೇಕು. ನುಡಿಯಂತೆ ನಡೆ, ನಡೆಯಂತೆ ನುಡಿ ಇದ್ದಾಗಲೇ ಬಾಳಿನಲ್ಲಿ ಬೆಳಗು ಮೂಡು ವದು. ಹಗಲು-ರಾತ್ರಿ ಎರಡರಲ್ಲಿಯೂ ಕತ್ತಲು ಕಳೆಯುವ ರವಿ-ಚಂದ್ರರಂತೆ ನಡೆ-ನುಡಿಯೊಂದಾದಾಗ ಜೀವನ ಪಾವನ. ನಡೆ-ನುಡಿಯೆರಡೂ ಪಾವನವಾಗಿರ ಬೇಕು. ಆಗ ಮಾತ್ರ ಜೀವನ ದಿವ್ಯವಾಗಬಲ್ಲುದು.

ಸಾಹಿತ್ಯಕ್ಕೆ ಛಂದಸ್ಸು ಅಲಂಕಾರಗಳ ಅಗತ್ಯವಿದೆ, ಸಂಗೀತಕ್ಕೆ ಸ್ವರಲಯಗಳ ಔಚಿತ್ಯವಿದೆ. ಸಂಗೀತ ಸಾಹಿತ್ಯಗಳೆರಡರ ಸಂಗಮ ವಿರಳ. ಇವೆರಡನ್ನೂ ವ್ಯಕ್ತಿಯೊಬ್ಬ ಸಾಧಿಸಲೂ ಬಹುದು. ಆದರೆ ಆ ವ್ಯಕ್ತಿಯ ವ್ಯಕ್ತಿತ್ವ ಸತ್ವಯುತವಾಗಬೇಕಾದರೆ ಅವನ ಬಾಳಿನಲ್ಲಿ ನಡೆ-ನುಡಿಗಳೆರಡೂ ಕೂಡಿ ಬರಬೇಕು. ಅದುವೇ ಜೀವನದ ಪರಿಪೂರ್ಣತೆ. ಅಂತಹ ಪರಿಪೂರ್ಣ ಯೋಗ "ಗಾನಯೋಗಿ" ಶ್ರೀಗುರು ಪಂಚಾಕ್ಷರಿಯಲ್ಲಿ ಮೂಡಿ ಬಂದಿದ್ದಿತು. ಅವರೊಬ್ಬ ಮಹಾ ವಿಭೂತಿ, ಯುಗಾವತಾರಿ ಶಕ್ತಿಯಾಗಿ ಬೆಳಗಿದರು.

## ನಡೆ

ನಡೆ—ಆಚರಣೆ ಚೆನ್ನಾಗಿರಬೇಕು, ಚಿನ್ನವಾಗಿರಬೇಕು. ನಮ್ಮ ನಡೆ ಯಲ್ಲಿ ಪಾವಿತ್ರ್ಯ ತುಂಬಿ ಬರಬೇಕು. ಅದಿಲ್ಲದ ನಡೆ ಬರಿಯ ಆಡಂಬರ. ಹೊರ ಗಿನ ಥಳಕು ಬಹುಕಾಲ ಬಾಳದು, ಚಣಕಾಲ ಜನಮೆಚ್ಚುಗೆಯನ್ನು ಪಡೆದರೂ ಶಿವನೊಲುಮೆಯನ್ನು ಪಡೆಯದು. ವ್ಯಕ್ತಿ ವ್ಯಕ್ತಿಯ ನಡೆ ಚನ್ನಾಗಿದ್ದರೆ ನಾಡೆಲ್ಲ ಚೆನ್ನ. ಜಗದಲ್ಲಿ ಒಳ್ಳೆಯ ನಡತೆಗೆ ಎಂದಿಗೂ ಬೆಲೆ ಇದೆ. ಒಂದು ವಸ್ತುವು

ಘನತೆ ಪಡಯುಬೇಕಾದರೆ ಅದರ ನಡೆ ಚೆನ್ನಾಗಿರಬೇಕು. ಯಾವುದೇ ಮರ ಒಳ್ಳೆಯ ಫಲ ಕೊಡಬೇಕಾದರೆ ಆದರ ನಡೆ ( ಬೆಳವಣಿಗೆ ) ಸರಿಯಾಗಿರಬೇಕು; ಅದಕ್ಕೆ ಸರಿಯಾದ ಸತ್ವಶಾಲಿಯಾದ ಮಣ್ಣು-ನೀರು ಬೇಕು. ಅಂತೆ ಮಾನವನ ಜೀವನದಲ್ಲಿಯೂ ನಡತೆಯ ಮಹತ್ವ. ಮಾನವ ಒಳ್ಳೆಯ ಪರಿಸರದಲ್ಲಿ ವಾತಾವರಣದಲ್ಲಿ ನಡೆದಾಗ ಮಾತ್ರ ಅವನ ಜೀವನ ಪರಿಶುದ್ಧವಾಗಬಲ್ಲುದು. ಅದಕ್ಕಾಗಿಯೇ ಶರಣರು "ಸಜ್ಜನರ ಸದ್ಭಕ್ತರ ಸಂಗಮಾಡು" ಎಂದು ಬೋಧಿಸಿದರು, ಸಂತರ ಸತ್ಸಂಗ ಜೇನು ಸವಿದಂತೆ ಎಂದು ಹೇಳಿದರು. ಅಂತರಂಗ ಬಹಿರಂಗ ಶುದ್ಧಿಯೇ ಕೂಡಲಸಂಗನೊಲಿಸುವ ಪರಿ ಎಂದು ಅಣ್ಣ ಬಸವಣ್ಣನ ಮಾತು ಬಹು ಅರ್ಥಪೂರ್ಣವಾಗಿದೆ, ನಡೆಯೆರಡರ ಮಡಿಯನ್ನು ಒತ್ತಿ ಹೇಳುತ್ತಿದೆ. ನಾವು ನುಡಿದು ನಡೆಯದೆ, ನಡೆದು ನುಡಿಯುವ ಪ್ರಮಥರ ಸತ್ಪಥವನ್ನು ಹಿಡಿಯಬೇಕು. ಪಾವನಚರಿತರಾದ ಹಾನಗಲ್ಲ ಶ್ರೀ ಕುಮಾರೇಶ ಮತ್ತು ಗಡುಗಿನ ಶ್ರೀ ಪಂಚಾಕ್ಷರಿ ಗುರುವರರ ಆನುಕರಣ ನಮಗೆ ಭಾಗ್ಯಭಾನುವಿನ ಕಿರಣವಾಗಿ ಬಾಳನ್ನು ಬೆಳಗಿಸಬಲ್ಲುದು.

ಪವಿತ್ರವಲ್ಲದ ಚರಿತ್ರವೇ ಕತ್ತಲಯಂತೆ ಕೇಡು, ಪಾವನ ಜೀವನವೇ ಬೆಳಕಿನ ಬೀಡು. ಶ್ರೀ ಗುರುವರ್ಯರು ತಮ್ಮ ಪರಮ ಗುರುವಾದ ಶ್ರೀ ಕುಮಾರೇಶನನ್ನು ಕುರಿತು "ತಮಸೋ ಮಾ ಜ್ಯೋತಿರ್ಗಮಯ" ಎಂದು ಬೇಡುತ್ತಿದ್ದರು. ಅವರು ತಮ್ಮ ಶಿಷ್ಯರನ್ನೂ ಕಣ್ಣಿದ್ದು ಕುರುಡರಾದವರನ್ನೂ ಕತ್ತಲೆಯಿಂದ ಬೆಳಕಿನತ್ತ ಸಾತ್ವಿಕ ನಡೆಗಲಿಸಿ ಒಯ್ದರು. ಅವರ ನಡೆ ಕರುಣೆಯಾಗಿತ್ತು; ಸಾಹಿತ್ಯದ ಸಾರವಾಗಿತ್ತು, ಸಂಗೀತದ ಸ್ವರವಾಗಿತ್ತು, ಭಕ್ತಿಯ ನೆಲೆಯಾಗಿತ್ತು. ಅವರೊಬ್ಬ ನಿಷ್ಕಪಟ, ನಿರಾಡಂಬರ, ನಿತ್ಯ ನಿರ್ಮಳ- ಸರಳ ಜೀವಿಯಾಗಿದ್ದರು; ತರಳರ ಬಾಳ ಬೆಳಕಾಗಿದ್ದರು.

## ನುಡಿ

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಲಿಂಗ ಮೆಚ್ಚಿ ಅಹುದೆನಬೇಕು.

ಎಂಬ ಜಗದಣ್ಣ ಬಸವಣ್ಣನವರ ವಚನದಂತೆ ಶ್ರೀ ಪಂಚಾಕ್ಷರ ಗವಾಯಿಗಳವರ ಮಾತುಗಳಲ್ಲಿ ಮುತ್ತಿನ ಮೌಲ್ಯ, ಸ್ಫಟಿಕದ ನಿರ್ಮಳತೆ, ರತ್ನದ

ಕಾಂತಿ ಇವೆಲ್ಲ ಕೂಡಿ ಬರುತ್ತಿದ್ದವು. ಅವರ ಹಿತ-ಮಿತವಾದ, ಮುಗುಳು ನಗೆಯ ಮೊಗದಿಂದ ಸೂಸಿ ಬಂದ ಮಾತುಗಳು ಶಿಷ್ಯರ ಮನದ ಮೈಲಿಗೆಯನ್ನು ಕಳೆಯುತ್ತಿದ್ದವು, ಮಾನವರ ಹೃದಯಾಂತರಾಳದ ಕತ್ತಲೆಯನ್ನು ಕರಗಿಸಿ ತಿಳಿ-ಬೆಳಗು ಮೂಡಿಸುತ್ತಿದ್ದವು. ಅವರ ಸವಿಮಾತು ಕೇಳಿ ಜೀವನದಲ್ಲಿ ಆಶೆಯು ಕೂಡಿ ಬರುತ್ತಿತ್ತು. ಮಾತಿನಿಂದಲೇ ಶಕ್ತಿ, ಭಕ್ತಿ, ವಿರಕ್ತಿ ಮತ್ತು ಕೊನೆಯದಾಗಿ ಮುಕ್ತಿ. ಇವೆಲ್ಲವನ್ನು ನಾವು ಗುರುವರ್ಯರ ಮಾತು. ನುಡಿಗಳಲ್ಲಿ ಕಂಡುಕೊಳ್ಳಬಹುದಾಗಿತ್ತು. ಅಂತೆಯೆ, ಪವಿತ್ರ ಚರಿತ್ರ, ಮಂತ್ರಮೂರ್ತಿ ಶ್ರೀ ಗವಾಯಿಗಳವರ ನಡೆ-ನುಡಿಯೊಂದಾದ ಬಾಳ ಫಲದ . ಪರಿಪಕ್ವತೆಯನ್ನು ಕಂಡು ಲಿಂಗಯ್ಯ ಅದು ತನಗೆ ಬೇಕೆಂದು ಅಂಗೈ ಗದ್ದುಗೆಯಲ್ಲಿ ಮಂಡಿಸಿ ಪೂಜೆ ಮಾಡಿಸಿಕೊಂಡು ಅವರನ್ನು ತನ್ನಲ್ಲಿ ಬೆರೆಸಿಕೊಂಡು ಮಂಗಲವ ಬೀರಿದ, ಮಾತೇ ಜ್ಯೋತಿರ್ಲಿಂಗವೆಂದು ತೋರಿದ.

# ನಾನು ಕಂಡ ಪೂಜ್ಯ ಗುರುವರ್ಯ

## ಶ್ರೀ ಸಿದ್ಧರಾಮು, ಜಂಬಲದಿನ್ನಿ

ನಾನು ೧೯೩೭ ನೆಯ ಇಸ್ವಿಯಲ್ಲಿ ಪೂಜ್ಯ ಗುರುಗಳ ಆಶ್ರಯ ಪಡೆದು ಸುಮಾರು ೧೯೪೦-೪೭ ರ ವರೆಗೆ ವಿದ್ಯಾರ್ಜನೆ ಮಾಡಿದೆನು. ಈ ಹತ್ತು ವರ್ಷಗಳಲ್ಲಿ ನನಗಾದ ಕೆಲವು ಅನುಭವಗಳನ್ನು ನನ್ನ ಅಳಿಲು ಸೇವೆಯ ರೂಪ ವಾಗಿ ಬರೆಯುವೆ.

ಲೋಕಕ್ಕೆ ಪೂಜ್ಯ ಗವಾಯಿಗಳವರಂಥ ಹುಟ್ಟು ಸಾಮಾನ್ಯವಾದು ದಲ್ಲ. ಕೆಲವು ವರ್ಷಗಳ ಹಿಂದೆ ಉತ್ತರ ಹಿಂದುಸ್ತಾನದಲ್ಲಿ ಕೆಲವು ಸಂಗೀತ ಗಾರರಾದ ಖಾನಸಾಹೇಬರು ಶಿಷ್ಯರಿಗೆ ಅಥವಾ ಕಲಾವಿದರಿಗೆ ಪೂರಾ ಸಂಗೀತದ ಚೀಜ (ಗೀತ) ಹೇಳದೆ ಅರ್ಧಮರ್ಧ ಹೇಳಿ ರಾಗ ಕೂಡಾ ಬೇರೆ ಬೇರೆ ಹೆಸರು ಗಳಲ್ಲಿ ಹೇಳಿಕೊಡುವ ಒಂದು ಕಾಲದಲ್ಲಿ ಶ್ರೀ ಭಾತಖಂಡೆ, ಶ್ರೀ ವಿಷ್ಣು ದಿಗಂಬರ ಪಲುಸ್ಕರ್ ಅಂಥವರು ಹುಟ್ಟಿ ಸಂಗೀತ ಪ್ರಪಂಚದ ಉದ್ಧಾರ ಮಾಡಿದ್ದಾರೆ.

ಅದರಂತೆ ಶ್ರೀ ಗವಾಯಿಗಳವರು ಹುಟ್ಟಿ ವೀರಶೈವ ಸಮಾಜಕ್ಕಷ್ಟೇ ಅಲ್ಲ; ಜಾತಿ-ಭೇದವನ್ನೆಣಿಸದೆ ಕರ್ನಾಟಕದಲ್ಲಿ ಎಷ್ಟೋ ಜನ ಶಿಷ್ಯಕೋಟಿಗೆ ವಿದ್ಯಾದಾನ ಮಾಡಿದರು. ಎಲ್ಲಿ ಕೇಳಿದಲ್ಲಿ, ರೇಲ್ವೆ ಡಬ್ಬಿಯಲ್ಲಿ ಕುಳಿತಾಗ ಸಹ ಇದೇ ಹುಬ್ಬಳ್ಳಿಯ ಪ್ರಸಿದ್ಧ ಸಂಗೀತಗಾರರಾದ ಶ್ರೀ ಶಂಕರ ದೀಕ್ಷಿತರಿಗೆ ಪಾಠ ಹೇಳಿಕೊಟ್ಟದ್ದು ನಾನು ಪ್ರತ್ಯಕ್ಷ ಕಂಡಿರುವೆ.

ಅಲ್ಪನಾದ ನನಗಿದ್ದ ಗುರುಶಿಷ್ಯ ಸಂಬಂಧವನ್ನು ನಾನು ಎಷ್ಟು ಬರೆದರೂ ಕಡಿಮೆ; ಆದರೂ ಒಂದು ಮಾತು ತಿಳಿಸದಿರಲಾರೆ. ಗದುಗಿನಲ್ಲಿ ತಾವು ಶಿವೈಕ್ಯರಾದ ದಿನ ಬೆಳಗಿನಜಾವ ನನ್ನ ಸ್ವಪ್ನದಲ್ಲಿ, ಜಂಬಲದಿನ್ನಿಯಲ್ಲಿ ಕಂಡು ದರ್ಶನ ಕೊಟ್ಟು ಉದ್ಧಾರ ಮಾಡಿದ್ದಾರೆ. ಅಂದಿನಿಂದ ನನ್ನ ಜೀವನವನ್ನೇ ಮಾರ್ಪಾಟು ಮಾಡಿದ್ದಾರೆ. ಇದೊಂದನ್ನು ನನ್ನ ಜೀವನದ ಪ್ರತಿ ಉಸಿರಿನಲ್ಲಿ ನಾನು ಮರೆಯಲಾರೆ. ಇದನ್ನು ಭಾವುಕರು ಯಾವ ರೀತಿಯಿಂದಲಾ ದರೂ ತಿಳಿದುಕೊಳ್ಳಬಹುದು.

ಇದರಂತೆ ನನ್ನ ಸಮೀಪವರ್ತಿಗಳು ಗುರುಬಂಧುಗಳಾದ ಶ್ರೀ ವೀರೇಶ್ವರ ಹಾಗೂ ಬಂಗ್ಲೇದ ಮಾಸ್ತರರು ಶ್ರೀ ಶೇಷಾದ್ರಿಯವರು ಕೂಡ ತಮ್ಮ ಜೀವನದಲ್ಲಿ ದರುಶನ ಪಡೆದು ಕೃತಾರ್ಥರಾಗಿದ್ದಾರೆ.

ಪೂಜ್ಯ ಗುರುವರ್ಯ ಗವಾಯಿಗಳವರ ಮಾತು ಮುತ್ತಿನ ಹಾರದಂತೆ, ಸ್ಫಟಿಕದ ಶಿಲೆಯಂತೆ, ಲಿಂಗಮೆಚ್ಚಿ ಅಹುದೆನ್ನುವಂತೆ. ಗೆಳೆಯರಾದ ಶಾಂತರಸರು ತಮ್ಮ ಕವನದಲ್ಲಿ ಬರೆದಂತೆ ಅವರ ಸಂಗೀತ 'ಶಿವಗೀತ' 'ಜನರು ಬದುಕುವ ಗೀತ'.

ನನ್ನ ಅಲ್ಪ ತಿಳುವಳಿಕೆಗೆ ತಿಳಿದಂತೆ ಹೇಳಬೇಕಾದರೆ, ನಾನು ನನ್ನ ಗುರುಗಳೆಂದು ಈ ಮಾತು ಹೇಳುವದಿಲ್ಲ. ನಾಡೆ ಒಪ್ಪಿಕೊಂಡಿದೆ. ಗವಾಯಿಗಳವರು ಶಿವಶರಣರು. ತಮ್ಮ ಜೀವನದಲ್ಲಿ ಯಾರನ್ನಾದರೂ ಉದ್ಧಾರ ಮಾಡಬೇಕೆಂದು ಅವರು ಮನಸ್ಸು ಮಾಡಿದಾಗ ಅವರೆಲ್ಲರನ್ನು ಉದ್ಧಾರ ಮಾಡಿದ್ದಾರೆ. ನನಗೆ ಹಾಡಲು ಬರುತ್ತಿತ್ತು. ನನ್ನನ್ನು ತಮ್ಮ ಸೇವೆಗೆ ಹಚ್ಚಿ, ತಾವು ಕೂಡ್ರುವ ಜಾಗೆಯಲ್ಲಿ ದಿನಾಲು ಕಸಗೂಡಿಸಲು ಹಚ್ಚಿ ನನ್ನ ಗುಕ್ಕ ಕಳೆದ ಪವಾಡ ಪುರುಷರು, ಪುಣ್ಯ ಗುರುಗಳು

ಇದರಂತೆ ಎಷ್ಟೋ ಶಿಷ್ಯರನ್ನು ಉದ್ಧಾರಮಾಡಿದ ಉದಾಹರಣೆಗಳನ್ನು ಹಲವು ಲೇಖಕರು ಬರೆದಿರಬಹುದು ನನ್ನ ಅಲ್ಪಮತಿ ತಿಳಿದಂತೆ, ಲೋಕದಲ್ಲಿ ಬಹಳಷ್ಟು ವಿದ್ಯಾವಂತರು, ಜಾಣರು, ಬಹುಜನ ಮೆಚ್ಚಿಸುವ ಗಾಯಕರೂ ಹುಟ್ಟಬಹುದು. ಆದರೆಷ್ಟು ಗವಾಯಿಗಳಂಥವರು ? ಎಷ್ಟು ಶತಮಾನಕ್ಕೊಮ್ಮೆಯೋ ! ಗೆಳೆಯರಾದ ಶ್ರೀ ಶಾಂತರಸರು ಇನ್ನೊಂದು ಮಾತು ಅಂದಿದ್ದಾರೆ ! "ಸಂಗೀತ ಶಾರದೆಗೆ ಕಂಣಿತ್ತು ಹುಟ್ಟಿದೆ ನೀ ಕುರುಡನಾಗಿ". ಈ ಮಾತು ಬಲ್ಲವರು ಏನು ಅರ್ಥ ಮಾಡಿದರೂ ಕಡಿಮೆಯೆ ಸರಿ.

ನಾನೊಲ್ಲದಿದ್ದರೂ ಗುರುವು ನನ್ನನ್ನು ತಾನು ಬಿಡಲಾರ. ಪೂಜ್ಯ ಗುರುಗಳ ವಿಷಯವಾಗಿ ಏನಾದರೂ ನಿಮ್ಮ ಅನುಭವ ಬರೆಯಿರಿ ಎಂದು ನಾನೊಮ್ಮೆ ಗದ್ದುಗೆ ದರುಶನಕ್ಕೆ ಬಂದಾಗ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು, ಸವದಿ ಅವರು ಅಪ್ಪಣೆ ಕೊಡಿಸಿದ್ದರು. ಏನೋ ವಿಚಾರ ಮಾಡಿ ಹಾಗೆ ಅದನ್ನು ಪೂರ ಕೈ ಬಿಟ್ಟಿದ್ದೆನು. ಇಂದು ಕೊನೆಗಳಿಗೆಯಲ್ಲಿ ಗೆಳೆಯರಾದ ಶ್ರೀ ಉಮಾಪತಿ ಶಾಸ್ತ್ರಿಗಳೂ ಹಾಗೂ ಗುರುಬಂಧು ಶ್ರೀ ವೀರೇಶ್ವರರೂ

ಬಂಗ್ಲೇವ ಮಾಸ್ತರೂ ಬರೆಯಲು ಪ್ರೇರೇಪಿಸಿದರು. ಇದೆಲ್ಲವೂ ಆ ಪೂಜ್ಯ ಗುರುವಿನ ಪ್ರೇರಣೆಯಿಂದೇ ನಾನು ಭಾವಿಸುವೆ.

ನನ್ನ ಪೂಜ್ಯ ಗುರುಗಳು ಸಂಗೀತ ಪ್ರಪಂಚಕ್ಕೆ ಅವತಾರ ಮಾಡಿ ಬಂದ "ಗಾನಯೋಗಿ" ಗಳು ಸಂಗೀತದಾನಿಗಳು. ಕೊನೆಯದಾಗಿ ನನ್ನ ಒಂದು ಚಿಕ್ಕ ಮಾತು ಹೇಳಬೇಕೆಂದರೆ- ಶಿವನ ಅನಂತ ಲೀಲೆಗಳಲ್ಲಿ ನನ್ನ ಪೂಜ್ಯ ಗುರುಗಳ ಲೀಲೆಯೊಂದು ಎಂದರೆ ತಪ್ಪಾಗಲಿಕ್ಕಿಲ್ಲ.

# ಮೂರು ದೀಪ - ಒಂದೇ ರೂಪ

## ಶ್ರೀ ಭಾಲಚಂದ್ರಸ್ವಾಮಿ, ಚಿಕ್ಕಮಣ್ಣೂರು

ದೇವನ ಸೃಷ್ಟಿಯಲ್ಲಿ ಮಾನವ ಜನ್ಮ ದೊರೆಯುವದು ದುರ್ಲಭ. ದೊರೆತರೂ ಸತ್ಕುಲದಲ್ಲಿ ಜನಿಸಿ, ಸದ್ಗುಣಗಳ ಗಳಿಸಿ, ಗುರುಕರಸಂಜಾತರಾಗಿ, ಸದಾಚಾರಿಗಳಾಗಿ, ಪರೋಪಕಾರಿಗಳಾಗಿ, ಸಮಾಜ ಸೇವಕರಾಗಿ, ದೇಶಭಕ್ತರಾಗಿ ಕೊನೆಗೆ ಮುಕ್ತಿ-ಕಾಂತೆಯ ರತಿಯನ್ನು ಪಡೆದವರು ದೊರೆಯುವದು ಮತ್ತಿಷ್ಟು ದುರ್ಲಭ. ಮಾನವ ಕುಲಕೋಟಿಯಲ್ಲಿ ಅಂತಹ ಮಹಾತ್ಮರನ್ನು ಕಾಣುವದೂ ಕಾಲಪುರುಷನಿಗೆ ಒಂದು ಭಾಗ್ಯವೆಂದೇ ಹೇಳಬೇಕು. ಅಂತಹ ಮಹಾತ್ಮರು ಶಿವಾಂಶಸಂಭೂತರು. ಮಾನವರ ಬಾಳನ್ನು ಬಂಗಾರ ಮಾಡಿದ ಅನಂತ ಮಹಾತ್ಮರಲ್ಲಿ ಮೂವರು ಮುಖ್ಯ ಗಣ್ಯ ವ್ಯಕ್ತಿಗಳನ್ನು ಇಂದಿನ ಶತಮಾನದಲ್ಲಿ ನಮ್ಮ ಕನ್ನಡನಾಡಿನಲ್ಲಿ ಕಾಣಬಹುದು. (೧) ಶ್ರೀ. ನಿ. ಪ್ರ. ಹಾನಗಲ್ಲ ಕುಮಾರ ಮಹಾಸ್ವಾಮಿಗಳು. (೨) ಶ್ರೀ ಪಂಚಾಕ್ಷರ ಗವಾಯಿಗಳು. (೩) ಶ್ರೀ ಪುಟ್ಟರಾಜ ಗವಾಯಿಗಳು. ಈ ಮಹಾ ಮಾನವರು ನಮ್ಮ ನಾಡಿನ ಇಪ್ಪತ್ತನೆಯ ಶತಮಾನದ ಯುಗಪುರುಷರೆಂದು ಹೇಳಿದರೆ ಬರಿಯ ಅಗ್ಗಳಿಕೆಯೆನಿಸದು.

ಪರಮ ಪೂಜ್ಯ ಹಾನಗಲ್ಲ ಶ್ರೀಗಳವರ ಭಕ್ತಿ-ಜ್ಞಾನ ವೈರಾಗ್ಯಗಳನ್ನು ಅಳತೆ ಮಾಡುವದೆಂದರೆ ಸಾಗರದ ನೀರನ್ನು ಬೊಗಸೆಯಿಂದ ನೋಡಿದಂತೆಯೇ ಸರಿ. ಅವರ ವೀರ ವಿರತಿಸಂಪತ್ತಿನ ವಿತ್ತ ವೀರಶೈವ ಸಮಾಜಮಂದಿರವ ಜೀರ್ಣೋದ್ಧಾರ ಮಾಡಿತು. ಶ್ರೀಗಳವರು ಮನೆ-ಮಠಗಳನ್ನು ತೊರೆದು ನಾಡಿನಲ್ಲೆಲ್ಲ ಸಂಚರಿಸಿ, ಮಹಾಸಭೆ ಕೂಡಿಸಿದರು, ಒಗ್ಗಟ್ಟು ಬೆಳೆಸಿದರು, ಸಮಾಜದ ಸರ್ವತೋಮುಖ ಏಳ್ಗೆಯ ಕನಸು ಕಂಡರು. ಅದಕಾಗಿ ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ಸುಪ್ತಿಯಲ್ಲಿದ್ದ ಸಂಗೀತವನ್ನು ಜಾಗ್ರಗೊಳಿಸಲು ಶ್ರೀ ಪಂಚಾಕ್ಷರ ಗವಾಯಿಗಳಿಗೆ ಹನ್ನೆರಡು ಸಾವಿರ ರೂಪಾಯಿ ಸಹಾಯ ನೀಡಿ ಉಭಯ ಸಂಗೀತವ ಕಲಿಸಿ, ಶಿವಯೋಗವ ಬೋಧಿಸಿ ಅವರನ್ನು ಸಮಾಜದ ಸ್ವತ್ತನ್ನಾಗಿರಿಸಿ 'ಸಮಾಜ ಸಮಾಜ' ವೆನ್ನುತ್ತಲೇ ಶಿವೈಕ್ಯರಾದರು. ಇದು ಒಂದನೆಯ ದೀಪ !

ಗುರು ಕೃಪೆಗೆ ಪಾತ್ರರಾದ ಶ್ರೀ ಪಂಚಾಕ್ಷರ ಗವಾಯಿಗಳವರಲ್ಲಿ ಸ್ವಾಮಿನಿಷ್ಠೆ ಇತ್ತು, ಬ್ರಹ್ಮಚರ್ಯದ ಬಲವಿತ್ತು; ಲಿಂಗದಲ್ಲಿ ಮನವಿತ್ತು; ಆಚಾರದಲ್ಲಿ

ಫಲವಿತ್ತು; ಕಂಠದಲ್ಲಿ ಮಾಧುರ್ಯವಿತ್ತು, ಜನರ ಒಲವಿತ್ತು. ಅವರು ಗುರು-ಕೃಪೆಯ ರಕ್ಷಾಕವಚವನ್ನು ತೊಟ್ಟು ಸ್ವಯಂಸಿದ್ಧರಾಗಿ ನೂರಾರು ಕುರುಡ ಮಕ್ಕಳನ್ನು ರಕ್ಷಿಸಿ, ಅವರಿಗೆ ಸಂಗೀತ ಕಲೆಯ ಬಲವನ್ನು ಕೊಟ್ಟು ಉದ್ಧರಿಸಿದರು. ಅವರ ಲಿಂಗಾರ್ಚನಾನುರಾಗಕೆ, ನಿರ್ವಂಚನದ ಭಕ್ತಿಗೆ, ನೈಷ್ಠಿಕ ಬ್ರಹ್ಮಚರ್ಯಕೆ, ಸಂಗೀತಮಯ ಕೀರ್ತನ-ಪ್ರವಚನಕೆ, ನಿಸ್ಪೃಹ ಸಮಾಜ ಸೇವೆಗೆ ಜನ ಮೆಚ್ಚಿ ಕೊಂಡಾಡಿತು. ಸಿರಿವಂತರ ಕೊಡುಗೈ ಮುಂದಾಯಿತು. ಶ್ರೀ ಕುಮಾರೇಶ ಕೃಪಾಪೋಷಿತ ಸಂಗೀತ- ನಾಟ್ಯ ಸಂಸ್ಥೆ ಚಿರವಾಗಿ ಬಾಳುವಂತಾಯಿತು. ಕೊನೆಯ ಗಳಿಗೆಯವರೆಗೂ ಸದಾಚಾರ ಸದ್ಭಕ್ತಿಗಳನ್ನು ಬಿಡದೆ ಲೋಕದಾಟಕ್ಕೆ ಮಾರುಹೋಗದೆ ಆದರ್ಶ ಜೀವನವನ್ನು ಸಾಗಿಸಿದ ಗುರುವರ್ಯ ಶ್ರೀ ಪಂಚಾಕ್ಷರ ಗವಾಯಿಗಳವರು ಎರಡನೆಯ ದೀಪ.

ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಸಂಗೀತಬೀಜವನ್ನು ಬಿತ್ತಿದರು, ನಾಟಿಸಿದರು. ಅವರ ಪರಮ ಶಿಷ್ಯರಾದ ಶ್ರೀ ಪಂಚಾಕ್ಷರ ಗವಾಯಿಗಳವರ ಮಹತ್ಸಾಧನೆಯಿಂದ ಆ ಸಂಗೀತ ಸಸಿ ಹುಲುಸಾಗಿ ಬೆಳೆಯಿತು, ಅದನ್ನು ರಕ್ಷಿಸುವ ಭಾರ ಅವರ ನೆಚ್ಚಿನ ಶಿಷ್ಯರಾದ, ಮಾನಸ ಪುತ್ರರಾದ ಶ್ರೀ ಪುಟ್ಟರಾಜರ ಮೇಲೆ ಬಿದ್ದಿತು. ಶ್ರೀ ಪಂಚಾಕ್ಷರ ಗವಾಯಿಗಳು ಲಿಂಗೈಕ್ಯರಾಗಿ ಇಪ್ಪತ್ತು ವರ್ಷಗಳಾದರೂ ಅವರು ಗುರುವಿನ ಮಹಾಪಥದಲ್ಲಿಯೇ ಚಾಚೂ ತಪ್ಪದೇ ನಡೆದು, ಈ ಸಂಗೀತ-ಸಾಹಿತ್ಯ-ನಾಟ್ಯ-ಸಂಸ್ಥೆಯನ್ನು ಅಭಿವೃದ್ಧಿಯ ಶಿಖರಕ್ಕೆ ಮುಟ್ಟಿಸುವ ಮಹಾ ಪ್ರಯತ್ನದಲ್ಲಿರುವದು ಕನ್ನಡಿಗರ ಪುಣ್ಯವೆಂದೇ ಹೇಳಬೇಕು. ಇವರೇ ಮೂರನೆಯ ದೀಪವಾಗಿ ಬೆಳಗುತ್ತಿದ್ದಾರೆ. ಈ ದೀಪ ಇನ್ನೂ ಉಜ್ವಲವಾಗಿ ಬೆಳಗಲೆಂದು ಶ್ರೀ ಕುಮಾರೇಶ ಮತ್ತು ಶ್ರೀ ಪಂಚಾಕ್ಷರೇಶರಲ್ಲಿ ಪ್ರಾರ್ಥಿಸುವೆನು.

# ಪುಣ್ಯ-ಸ್ಮರಣೆ

## ಶ್ರೀ ವೀರೇಶ್ವರ, ಹಿರೇಮಠ.

ಪರಮ ಗುರುವರ್ಯ ಲಿಂ. ಪಂಚಾಕ್ಷರ ಗವಾಯಿಗಳವರನ್ನು ಈ ಬರಹದ ರೂಪದಲ್ಲಿ ಸ್ಮರಿಸುವ ಸುಯೋಗ ಬಂದಿರುವುದು ಒಂದು ಮಹದ್ ಭಾಗ್ಯವೆಂದು ಬಗೆಯುತ್ತೇನೆ. ಆ ಗುರುವರ್ಯರು ಬಾಲ್ಯದಿಂದಲೇ ನನ್ನ ಮೇಲೆ ಕೃಪೆದೋರಿ ವಿದ್ಯೆಗಲಿಸಿ ಸಲಹಿದರು, ನನ್ನನ್ನು ಮಾನವನನ್ನಾಗಿ ಒಳ್ಳೆಯ ಸಂಸ್ಕೃತಿ ಯುಳ್ಳವನನ್ನಾಗಿ ಮಾಡಿದರು. ಪ್ರತಿನಿತ್ಯವೂ ಏಳುವಾಗ ಮಲಗುವಾಗ ಅವ ರನ್ನು ನೆನೆದು ಬಾಳಬಟ್ಟೆಯಲ್ಲಿ ನಡೆಯುತ್ತಿದ್ದೇನೆ. ನಾನೇನು ಹೆಚ್ಚು ಕಲಿತವ ನಲ್ಲ, ಆದರೂ ಗುರುವಿನ ದಯೆಯಿಂದ ಬುದ್ಧಿವಂತನಾಗಿ ಬಾಳಲು ಕಲಿತಿರುವೆ. ಈ ಲೇಖನ ರೂಪ ಕಿರುಗಾಣಿಕೆಯನ್ನು ಗುರುವಿನಡಿಗರ್ಪಿಸಿ, ಪುಣ್ಯಸ್ಮರಣೆ ಮಾಡಿ ಕೃತಕೃತ್ಯನಾಗಬಯಸಿರುವೆ.

ನನ್ನ ತಂದೆಯವರಾದ ಶ್ರೀ ರಾಜಶೇಖರ ಶಾಸ್ತ್ರಿಗಳವರನ್ನೂ ಮತ್ತು ಗುರುವರ್ಯ ಗವಾಯಿಗಳವರನ್ನೂ ಪರಮ ಪೂಜ್ಯ ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಮೈಸೂರಿಗೆ ವಿದ್ಯಾಭ್ಯಾಸ ಮಾಡಿಸಲು ಕಳಿಸಿದ್ದರು. ನನ್ನ ತಂದೆಯವರು ಸಂಸ್ಕೃತ-ವೈದಿಕ-ಜ್ಯೋತಿಷ್ಯ ಕಲಿತರು. ಗುರುವರ್ಯರು ಸಂಗೀತದ ಅಭ್ಯಾಸ ಮಾಡಿದರು. ಇಬ್ಬರೂ ಹೀಗೆ ಗುರುಬಂಧುಗಳಾಗಿ ಬಾಲ್ಯ ಸ್ನೇಹಿತರಾಗಿ ಬೆಳೆದು ಬಂದರು. ಆವರಿಬ್ಬರ ಆತ್ಮೀಯತೆ ಕೊನೆಯವರೆಗೂ ನಿರ್ಮಳವಾಗಿ ಬಂದಿತು.

ನನ್ನ ತಂದೆಯವರು ಜನ್ಮಸ್ಥಳವಾದ ಸಂದಿಗವಾಡವನ್ನು ಬಿಟ್ಟು ರೋಣದಲ್ಲಿ ಬಂದು ನೆಲಸಿದ್ದರು. ೧೯೩೭ ನೆಯ ವರ್ಷ. ಶ್ರೀ ಗವಾಯಿಗಳವರು ತಮ್ಮ ಪರಿವಾರದೊಂದಿಗೆ ರೋಣದಲ್ಲಿ ಮುಕ್ಕಾಮು ಮಾಡಿದ್ದರು. ಒಂದು ದಿನ ಅವರೇ ನಮ್ಮ ಮನೆಗೆ ಬಂದರು. ತಂದೆಯವರು ನನಗೆ– “ ವೀರೇಶ, ನೋಡು ನಿನ್ನ ದೊಡ್ಡಪ್ಪ ಬಂದಿದ್ದಾರೆ. ಅವರೂ ನಾನು ಕೂಡಿ ಕಲಿತವರಪ್ಪ. ಅವರ ಪಾದ ಮುಟ್ಟಿ ನಮಸ್ಕಾರ ಮಾಡು.” ಎಂದು ಹೇಳಿದರು. ಕಣ್ಣಿಲ್ಲದೇ ಇದ್ದರೂ ನಗು–ಮೊಗದ ಆ ದಿವ್ಯ ಮೂರ್ತಿಯನ್ನು ಕಂಡು ನನಗೆ ವಿಸ್ಮಯವೆನಿಸಿತು. ಎವೆ-ಯಿಕ್ಕದೆ ಎರಡು ನಿಮಿಷ ನಿಂತು ನೋಡಿ, ತಂದೆಯವರು ಹೇಳಿದಂತೆ ಪ್ರಣಾಮ

ನೆರಗಿದೆ. ಗವಾಯಿಗಳು ನನ್ನನ್ನು ತಮ್ಮೆಡೆಗೆ ಕರೆದುಕೊಂಡು ಮುಖ- ಮೈ-ತಲೆಯನ್ನೆಲ್ಲ ಕೈಯಿಂದ ಮುಟ್ಟಿ ನೋಡಿದರು. "ನಿನಗೆ ಹಾಡಲು ಬರುವದೇನಪ್ಪ?" ಎಂದು ಕೇಳಿದರು. ನಾನು ತಂದೆಯವರ ಮುಖ ನೋಡಿದೆ. "ಹಾಡುತ್ತಾನೆ ಗವಾಯಿಗಳೇ! ಹಾಡಪ್ಪ ಅವರು ನಿನಗೆ ಹಾಡು ಹೇಳಿ ಕೊಡುತ್ತಾರೆ." ಎಂದು ತಂದೆ ಹೇಳಿದರು. ಆಗಿನ್ನೂ ನನಗೆ ಒಂಬತ್ತು ವರ್ಷ. ಕನ್ನಡ ಮೂರನೆಯ ಇಯತ್ತೆಯಲ್ಲಿದ್ದೆ. ಮೂರನೆಯ ಪುಸ್ತಕದಲ್ಲಿದ್ದ ನಾನು ಕಂಠಪಾಠ ಮಾಡಿ ಹಾಡುತ್ತಿದ್ದ "ತಿರಕನೋರ್ವ ನೂರ ಮುಂದೆ" ಎಂಬ ಮುಪ್ಪಿನ ಷಡಕ್ಷರಿಯ ಪದವನ್ನು ದಿಟ್ಟನಾಗಿ ಹಾಡಿದೆ. ಗುರುವರ್ಯರು ಕೇಳಿ ಬಹು ಸಂತೋಷಪಟ್ಟರು. "ಶಾಸ್ತ್ರಿಗಳೇ, ವೀರೇಶ ಚೆನ್ನಾಗಿ ಹಾಡುತ್ತಾನೆ. ಚುರುಕಾಗಿದ್ದಾನೆ. ಕಂಠವೂ ಚೆನ್ನಾಗಿದೆ. ಅವನನ್ನು ನಮ್ಮಲ್ಲಿಯೇ ಕೆಲವು ವರ್ಷ ಬಿಡಿರಿ" ಎಂದು ಹೇಳಿದರು. ತಂದೆಯವರೂ ಸಂತೋಷದಿಂದ ನನ್ನನ್ನೂ ಅವರಿಗೆ ಒಪ್ಪಿಸಿದರು. ಅಂದಿನಿಂದ ನಾನು ಪಾಟಿ–ಪುಸ್ತಕ ಬಿಟ್ಟು ತಂಬೂರಿ–ತಬಲಾ ಹಿಡಿದೆ, ಅವರ ಪರಿವಾರದಲ್ಲಿ ಸೇರಿದೆ. ಬಾಲ್ಯ ಸ್ನೇಹಿತನ ಮಗನೆಂದೇ ಏನೋ ಅವರು ನನ್ನ ಮೇಲೆ ಬಹು ಮಮತೆ ತೋರಿದರು. ತಂದೆ-ತಾಯಿಗಳನ್ನು ಮರೆತು ನಾನು ಗುರುವರ್ಯರ ನೇಹದ ಮಡಿಲಲ್ಲಿ ಬೆಳೆಯಹತ್ತಿದೆ ಸಂಗೀತ ವಾದನ ಕಲೆಯನ್ನು ಕಲಿಯಹತ್ತಿದೆ. ಗುರುಗಳು ಪಂ. ಪುಟ್ಟರಾಜ ಗವಾಯಿಗಳಿಂದ ನನಗೆ ಸಂಸ್ಕೃತ ಪಾಠವನ್ನೂ ಹೇಳಿಸುತ್ತಿದ್ದರು.

ಗುರುವರ್ಯರು ನನಗೆ ಒಂದು ಸೇವೆ ಒಪ್ಪಿಸಿದರು. ಪ್ರತಿನಿತ್ಯವೂ ನಾನು ಅವರು ಕುಳಿತುಕೊಳ್ಳುವ ಖೋಲಿಯ ಕಸಗೂಡಿಸಬೇಕು; ಪ್ರತಿನಿತ್ಯ ಮುಂಜಾನೆ ಸಂಜೆ ಸಂಚಾರಕ್ಕೆ ಕೈಹಿಡಿದು, ತಂಬಿಗೆ ತೆಗೆದುಕೊಂಡು ಹೋಗಬೇಕು. ನಾನು ಬಹಳ ಸಂತೋಷದಿಂದ ಈ ಸೇವೆಯನ್ನು ಮಾಡುತ್ತಿದ್ದೆ. ಈ ಭಾಗ್ಯ ಎಲ್ಲರಿಗೂ ದೊರೆಯುವದು ಸಾಧ್ಯವಿಲ್ಲವೆಂದು ಅನಿಸಿತು. ಗುರುಗಳ ಪರಿವಾರದವರೆಲ್ಲರೂ ನನ್ನನ್ನು ಪಡೆದು ಬಂದವನೆಂದು ಬಗೆಯುವಂತಿದ್ದಿತು.

ಆಗಲೇ ಗುರುಗಳು ನಾಟಕಸಂಘವನ್ನು ಸ್ಥಾಪಿಸಿ ಅನೇಕ ಪ್ರಯೋಗಗಳನ್ನು ಮಾಡಿಸಿದ್ದರು. ನಾಟಕದಲ್ಲಿ ಪಾತ್ರವಹಿಸಲು ನನಗೆ ಆಶೆ. ಅದನ್ನು ಗುರುವರ್ಯರು ಹೇಗೋ ತಿಳಿದುಕೊಂಡಿದ್ದರು. ನಾಟಕಗಳಲ್ಲಿ ಬಾಲ ಪಾತ್ರಗಳನ್ನು ಅಭಿನಯಿಸಲು ಪ್ರೋತ್ಸಾಹಿಸಿದರು. ನನಗೆ ಹೊಸ ಬಟ್ಟೆ-ಟೊಪ್ಪಿಗೆ ಕೊಡಿಸಿದರು. ನಾನು ಆನಂದದಿಂದ ಕುಣಿದಾಡಿದೆ. ಬಾಲ ಪಾತ್ರಗಳನ್ನು ಮಾಡುವದಕ್ಕಾಗಿ ನನಗೆ ತಲೆಯಲ್ಲಿ ಕೂದಲು ಬಿಡಲು ಅನುಮತಿ ಕೊಟ್ಟರು. ಸಂಗೀತ ವಿದ್ಯಾರ್ಥಿಗಳಲ್ಲಿ ಯಾರೂ ಕ್ರಾಪು ಬಿಡುವಂತಿರಲಿಲ್ಲ.

೧೯೪೦ ರಲ್ಲಿ "ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ನಾಟ್ಯ-ಸಂಘ"ವು ಮುದ್ದೇಬಿಹಾಳದಲ್ಲಿ ಕ್ಯಾಂಪು ಮಾಡಿತು. "ನವಯುಗದ ನಗೆ" ಎಂಬ ಸಾಮಾಜಿಕ ನಾಟಕದಲ್ಲಿ ಬಾಲಚಂದ್ರನ ಪಾತ್ರವನ್ನು ಅಭಿನಯಿಸುವ ತಾಲೀ-ಮನ್ನು ಗುರುಗಳು ನನಗೆ ಕೊಡಿಸಿದರು. ಪ್ರಥಮಸಲ ನಾನು ಸ್ಟೇಜಿನ ಮೇಲೆ ಬಂದು ಅಭಿನಯಿಸಿದೆ. ತಂದೆಯವರ ದುರ್ವ್ಯಸನದಿಂದ ಕುಡುಕನಾಗಿ ಜೇಲು ಸೇರುವ ದೃಶ್ಯ. ನಾನು ಅನಾಥನಾಗಿ ಬೀದಿಯಲ್ಲಿ ಹಾಡುತ್ತ ಅಭಿನಯಿಸಬೇಕಾಗಿತ್ತು. ಅಂದು ನಾನು ಗುರುಕೃಪೆಯಿಂದ ಬಹು ಚನ್ನಾಗಿ ಪಾತ್ರವನ್ನು ಮಾಡಿದೆ. ನಾನು ಹಾಡುತ್ತ ಭಿಕ್ಷೆ ಬೇಡುವ ದೃಶ್ಯವು ಬಹಳ ಕರುಣಾಮಯವಾಗಿತ್ತು. ಎಷ್ಟೋ ಜನ ಪ್ರೇಕ್ಷಕರು ಅತ್ತುದನ್ನು ನೋಡಿದೆ. ನಾಟಕವಾದ ಮೇಲೆ ನನ್ನ ಅಭಿನಯವನ್ನು ಗುರುಗಳು ಬಹಳವಾಗಿ ಮೆಚ್ಚಿ ಮುದ್ದಾಡಿದರು. ಅಂದು ನನಗಾದ ಆನಂದ ಅಮಿತ, ಶಬ್ದಗಳ ಪರಿಮಿತಿ ಮೀರಿದುದು.

ನಾನು ಪ್ರತಿನಿತ್ಯ ಗುರುವರ್ಯರ ಸೇವೆಯನ್ನು ಮನಃಪೂರ್ವಕವಾಗಿ ಮಾಡುತ್ತಿದೆ. ಬೈಠಕಿಯಲ್ಲಿ ನನಗೆ ಹಾರ್ಮೋನಿಯಂ ಬಾರಿಸಲು ಸಾಥಿಯಾಗುವ ಕೃಪೆ ದೊರೆಯಿತು. ಮೂರು ವರ್ಷಗಳಲ್ಲಿಯೇ ಗುರುವಿನ ದಯೆಯಿಂದ ಸಾಕಷ್ಟು ಸಂಗೀತ ಜ್ಞಾನವನ್ನು ಪಡೆದನು. ಪ್ರತಿ ಪಾಠದಲ್ಲಿಯೂ ಪ್ರತಿ ಕಾರ್ಯಕ್ರಮಗಳಲ್ಲಿಯೂ ನಾನೇ ಹಾರ್ಮೋನಿಯಂ ಬಾರಿಸುತ್ತಿದ್ದೆ. ಇದು ನನ್ನಂತಹ ಅಲ್ಪನ ಮೇಲೆ ಗುರುವಿನ ವಿಶೇಷ ಅನುಗ್ರಹವಾಗಿದ್ದಿತು.

ಅವರ ದಿವ್ಯ ಮತ್ತು ಮಹಜ್ಜೀವನದಲ್ಲಿಯ ಅನೇಕ ಪ್ರಸಂಗಗಳನ್ನು ಕಣ್ಣಾರೆ ಕಂಡಿರುವೆನು. ಅವುಗಳಲ್ಲಿ ಕೆಲವನ್ನು ನಾನಿಲ್ಲಿ ಬರೆಯಬಯಸಿದ್ದೇನೆ;

೧೯೪೩ ರಲ್ಲಿ ಧಾರವಾಡದಲ್ಲಿಯ ಸಂಗೀತ ಕಾರ್ಯಕ್ರಮಕ್ಕೆ ಕುಮಾರ ಗಂಧರ್ವರು ಬಂದಿದ್ದರು. ಗುರುಗಳೂ ಆ ಕಾರ್ಯಕ್ರಮಕ್ಕೆ ದಯಮಾಡಿಸಿದ್ದರು. ಮಧ್ಯ ವಿಶ್ರಾಮವಾದ ಮೇಲೆ ಕುಮಾರ ಗಂಧರ್ವರು ಗುರುಗಳಿದ್ದೆಡೆಗೆ ಬಂದು ಪಾದ ಮುಟ್ಟಿ ನಮಸ್ಕರಿಸಿದರು. ಯೋಗಕ್ಷೇಮವನ್ನು ಪರಸ್ಪರ ವಿಚಾರಿಸಿದ ನಂತರ ಕುಮಾರ ಗಂಧರ್ವರು ಸರಿಯಾದ ಸಾಥಿ ಇಲ್ಲದಿರುವ ಕೊರತೆಯನ್ನು ನಿವೇದಿಸಿ ಒಳ್ಳೆಯ ಸಾಥಿಗಳನ್ನು ತಮ್ಮ ಶಿಷ್ಯರಲ್ಲಿ ಸಾಧ್ಯವಾದರೆ ಕೊಡುವಂತೆ ಪ್ರಾರ್ಥಿಸಿದರು. ಆಗ ಗುರುಗಳು ಶ್ರೀ ಸಿದ್ಧೇಶಕುಮಾರರನ್ನು ಮತ್ತು ನನ್ನನ್ನು 'ಸಾಥ' ಕೊಡಲು ಕಳಿಸಿದರು. ಶ್ರೀ ಸಿದ್ಧೇಶಕುಮಾರರು ತಬಲಾ ನುಡಿಸಿದರು. ನಾನು ಹಾರ್ಮೋನಿಯಂ ಬಾರಿಸಿದೆ. ಶ್ರೀ ಕುಮಾರ ಗಂಧರ್ವರ ಕಾರ್ಯಕ್ರಮವು

ಬಹು ಯಶಸ್ವಿಯಾಗಿ ಸಾಗಿತು. ಕೊನೆಗೆ ಗುರುವರ್ಯರು ಗುರುಗಳಿಗೆ ಅಭಿನಂದನೆಗಳನ್ನು ಸಲ್ಲಿಸಿ ನಮ್ಮ ಕಲೆಗಾರಿಕೆಯನ್ನು ಹೊಗಳಿದರು. ಗುರುಗಳು ಸಮರ್ಥವಾದ ರೀತಿಯಲ್ಲಿ ನಾವು ಸಹಕರಿಸಿ, ಗಂಧರ್ವರ ಸಂಗೀತಕಚೇರಿಗೆ ಕಳೆ ತಂದುಕೊಟ್ಟದಕ್ಕಾಗಿ ಬಹು ಸಂತಸಪಟ್ಟರು. ತಮ್ಮ ಶಿಷ್ಯರ ಶ್ರೇಯಸ್ಸನ್ನು ಕಂಡು ಅವರಿಗಾಗುತ್ತಿದ್ದ ಆನಂದ ಹೇಳಲಾಸಲ್ಲ.

ಒಂದು ದಿನ ಗದುಗಿನ ಮುಕ್ಕಾಮಿನಲ್ಲಿ ಶ್ರೀ ದಾನಶೂರ ಬಸರೀಗಿಡದ ವೀರಪ್ಪನವರ ಅಟ್ಟದ ಮೇಲೆ ವಾಸವಾಗಿದ್ದಾಗ ಮಧ್ಯಾಹ್ನ ಎರಡು ಗಂಟೆಗೆ ಮುಂಬಯಿಯ ಪ್ರಸಿದ್ಧ ಗವಾಯಿಗಳ ಸಂಗೀತ ಕಾರ್ಯಕ್ರಮವನ್ನು ಕೇಳಬಯಸಿದರು. ಆಗ ಅಲ್ಲಿ ರೇಡಿಯೋ ಹಚ್ಚಲು ಯಾರೂ ಶಿಷ್ಯರಿರಲಿಲ್ಲ ವೇಳೆಯಾಗಿತ್ತು, ರೇಡಿಯೋ ಕೇಳಲು ಅವರ ಕಿವಿಗಳು ಹಾತೊರೆಯುತ್ತಿದ್ದವು. ಮೇಲಿಂದ ಮೇಲೆ ಬಲಗೈಯನ್ನು ಕಿವಿಯತ್ತ ಒಯ್ದು ತಮ್ಮ ಆತುರತೆಯನ್ನು ವ್ಯಕ್ತಪಡಿಸುತ್ತಿದ್ದರು. ನನಗೆ ರೇಡಿಯೋ ಹಚ್ಚಲು ಬರುತ್ತಿತ್ತು. 'ಹಚ್ಚಲೇ ಅಜ್ಜ' ಎಂದು ಕೇಳಿದೆ. 'ನೀನು ರೇಡಿಯೋ ಹಚ್ಚುವೆಯಾ ? ಬರುತ್ತದೆಯೇ ? ಯಾವಾಗ ಕಲಿತಿ ? ಹಚ್ಚು ನೋಡೋಣ" ಎಂದರು. ಮುಂಬಯಿ ಸ್ಟೇಶನ್ನಿಗೆ ಸರಿಯಾಗಿ ಹಚ್ಚಿದೆ. ಸಂಗೀತ ಕಾರ್ಯಕ್ರಮ ಕೇಳಿದ ಕೂಡಲೇ ನನ್ನ ತಲೆಯನ್ನು ನೇವರಿಸಿ, "ಶಾಬಾಶ್" ಎಂದರು. ಅಂದಿನಿಂದ ನನಗೆ ರೇಡಿಯೋ ಬಗೆಗೆ ತೀವ್ರ ಆಸಕ್ತಿ ಹುಟ್ಟಿತು. ಅವರೀ ಪ್ರೇರಣೆಯಿಂದಲೇ ನಾನು ದಿಲ್ಲಿಗೆ ಹೋಗಿ ೧೯೫೩ ರಲ್ಲಿ ಒಂದು ವರ್ಷ ರೇಡಿಯೋ ರಿಪೇರಿ ಮುಂತಾಗಿ ತಾಂತ್ರಿಕ ಶಿಕ್ಷಣ ಪಡೆದು ಬಂದೆ. ಗದುಗಿನಲ್ಲಿ "ವೀರೇಶ್ವರ ರೇಡಿಯೋ ಸ್ಟೋರ" ನ್ನು ತೆರೆದಿರುವೆ. ಗುರುವರ್ಯರ ಕೃಪೆಯಿಂದಲೇ ನಾನು ಈ ಉದ್ಯೋಗದಲ್ಲಿ ಹೆಚ್ಚಿನ ಆಧುನಿಕ ಶಿಕ್ಷಣವನ್ನು ಪಡೆಯುದಲೇ ಮುಂದುವರಿಯುತ್ತಿರುವೆನು.

ಗುರುಗಳು ಯಾವಾಗಲೂ ಪ್ರವಾಸದಲ್ಲಿಯೇ ಇರುತ್ತಿದ್ದರು. ಒಂದು ಉತ್ತಮ ಮೋಟಾರು ಮಾಡಬೇಕೆಂಬ ಹಂಬಲ ಅವರಿಗೆ ಬಹಳವಾಗಿತ್ತು. ನನ್ನ ಅಣ್ಣಾ ಅಪ್ಪಯ್ಯ ಆಗ ಮೋಟಾರು ಕಲಿಯುತ್ತಿದ್ದರು. ಒಂದು ದಿನ ಗುರುಗಳನ್ನು ಮೋಟಾರಿನಲ್ಲಿ ಸಂಚಾರಕ್ಕೆ ಕರೆದುಕೊಂಡು ಹೋದರು. ಅಂದೇ ಗುರುಗಳು ನನಗೂ ಡ್ರೈವ್ಹಿಂಗ್ ಕಲಿಸುವಂತೆ ಅಣ್ಣನವರಿಗೆ ಹೇಳಿದರು. ಒಂದು ಒಳ್ಳೆಯ ಮೋಟಾರು ಕೊಳ್ಳಬೇಕು. ಅದರಲ್ಲಿ ಜೋಡು ತಂಬೂರಿ, ಶಿವಪೂಜಾ ಸಾಮಗ್ರಿ ಎಲ್ಲವನ್ನು ಇಡುವಂತೆ ವ್ಯವಸ್ಥೆ ಇರಬೇಕು. ಅದನ್ನು ನಾನು ನಡೆಸಬೇಕು- ಇದು ಗುರುಗಳು ಕಂಡ ಕನಸು. ಅವರ ಆ ಇಚ್ಛೆಯೇ ನನಗಿಂದು

ಅವೆಲ್ಲವನ್ನು ಒಪ್ಪಿಸಿಕೊಟ್ಟಂತಿದೆ. ನಾಸೀಗ ಮೋಟಾರು ಮಾಲಿಕನಾಗಿರುವೆ. ಆದರೆ ಅದರಲ್ಲಿ ಗುರುಗಳನ್ನು ಕೂಡ್ರಿಸಿಕೊಂಡು ನಡೆಸುವ ಭಾಗ್ಯ ಬರಲಿಲ್ಲವಲ್ಲ-ಎಂದು ಆಗಾಗ ಕನವರಿಸುತ್ತಿದ್ದೆ. ಈ ಸುವರ್ಣಮಹೋತ್ಸವದ ನೆವದಿಂದ ಒಂದು ರೀತಿಯಲ್ಲಿ ಗುರುವಿನ ಕನಸು ನನಸಾದಂತೆ ನನಗೆ ಭಾಸವಾಗುತ್ತಿದೆ. ಗುರು-ವರ್ಯರ ಅಮೃತಶಿಲೆಯ ಮೂರ್ತಿಯನ್ನು ಜಯಪುರದಿಂದ ನಾನೇ ತರಬೇಕೆಂದು ಗುರುಬಂಧು ಚಿತ್ತರಗಿ ಶ್ರೀ ಗಂಗಾಧರಶಾಸ್ತ್ರಿಗಳು ಹೇಳಿದರು. ಆ ಸೇವೆಯನ್ನು ಮನಸಾ ಒಪ್ಪಿಕೊಂಡು ಜಯಪುರಕ್ಕೆ ನನ್ನ ಟ್ಯಾಕ್ಸಿಯನ್ನೇ ಒಯ್ದೆ. ಸುಮಾರು ೧೬೦೦ ಮೈಲು ಪ್ರವಾಸ, ಕೆಲವೆಡೆ ದುರ್ಗಮಯವಾದ ಮಾರ್ಗ. ನಿರಾಯಾಸ ವಾಗಿ ನಿರಾತಂಕವಾಗಿ ಕ್ರಮಿಸಿದೆವು. ಬರುವಾಗಲೂ ಅಷ್ಟೆ. ಮೂರ್ತಿಯನ್ನು ಜತನದಿಂದ ಇಟ್ಟುಕೊಂಡು ನಡೆದೆ. ಪೆಟ್ಟಿಗೆಯಲ್ಲಿ ಭದ್ರವಾಗಿ ಶಿವಪೂಜೆಯ ಮುದ್ರೆಯಲ್ಲಿ ಮಂಡಿಸಿದ ನಸುನಗೆಯ ಮೂರ್ತಿ ಸಜೀವವಾಗಿ "ವೀರೇಶ, ನಮ್ಮ ಆಶೆ ಈಡೇರಿತು; ನಿನ್ನ ಇಚ್ಛೆಯೂ ಪೂರೈಸಿತು." ಎಂದು ಮಿಡಿಯುವ ಅಂತರ್ವಾಣಿ ಕೇಳಿ ಬರುವಂತಿತ್ತು. ಮೂರ್ತಿಯನ್ನು ಪೂಜ್ಯರ ಗದ್ದುಗೆಯ ಮೇಲೆ ಸ್ಥಾಪಿಸಲು ಆಶ್ರಮಕ್ಕೆ ಸುರಕ್ಷಿತವಾಗಿ ತಂದು ಮುಟ್ಟಿಸಿದೆ. ಗುರುವಿಗೆ ಮಂಗಳಾರತಿ ಮಾಡಿಸಿ ಪಂ. ಪುಟ್ಟರಾಜರಿಗೆ ಒಪ್ಪಿಸಿದೆ. ಏನೋ ಒಂದು ಅನಿರ್ವಚನೀಯ ಸಂತೋಷದ ಅನುಭೂತಿ ಅಂದು ನನ್ನ ಹೃದಯದಲ್ಲಿ ತುಂಬಿ ಬಂದಿತ್ತು.

ನನಗೆ ಗುರುವರ್ಯರ ಅನುಗ್ರಹದಲ್ಲಿ ಪೂರ್ಣ ನಂಬುಗೆಯಿದೆ. ಆ ಅನುಗ್ರಹವೇ ನನ್ನ ಬಾಳ ಉಸಿರು. ಅವರೇ ನನ್ನ ಇಷ್ಟದೈವ. ಎಂತಹ ಅನುವು ಆಪತ್ತಿನಲ್ಲಿಯೂ ಅವರನ್ನು ನೆನೆದರೆ ಎಲ್ಲ ಪರಿಹಾರವಾಗುತ್ತವೆ. ನಂಬಿದವರಿಗೆ ಅವರೊಬ್ಬ ಅನಿಮಿತ್ತ ಬಂಧು, ದಯಾಸಿಂಧು.

೧೯೪೪ ರಲ್ಲಿ ಗುರುಗಳು ಧಾರವಾಡದ ಮುರುಘಾಮಠದ ಯಾತ್ರಾ ಕಾರ್ಯಕ್ರಮಕ್ಕೆ ದಯಮಾಡಿಸಿದ್ದರು. ನಾನೂ ಜೊತೆಯ ಪರಿವಾರದಲ್ಲಿದ್ದೆ. ಅಂದು ಗುರುಗಳು ತುಂಬಿದ ಸಭೆಯಲ್ಲಿ "ಮಿಯಾ ಮಲ್ಹಾರ್" ರಾಗವನ್ನು ಎರಡುವರೆ ತಾಸುಗಳವರೆಗೆ ಒಬ್ಬರೇ ಭಾವಪೂರ್ಣವಾಗಿ ಹಾಡಿದರು. ಮೊದಲು ಅಸ್ಥಾಯಿ 'ಕರೀಮ್ ನಾಮ್ ತೇರೋ', ದೃತ 'ಉಮಡ್ ಘುಮಡ್ ಘನ್ ಗರಜೆ ಬದರಾ' ಹಾಗೂ ತರಾನಾ ಈ ಬಗೆಯಾಗಿ ಅವರು ತನ್ಮಯರಾಗಿ ಹಾಡಿದರು. ಶ್ರೋತೃಗಳು ತಲ್ಲೀನರಾಗಿ ಕೇಳಿ ತಣಿದರು. ಇಷ್ಟು ತನ್ಮಯತೆಯಿಂದ ಒಂದೇ ರಾಗವನ್ನು ಇಷ್ಟುಕಾಲ ಅವರೆಂದೂ ಹಾಡಿರಲಿಲ್ಲ. ಅಂದು ನಮ್ಮ ಸಂಗೀತ ದಿಂದ ತಾವೇ ಸಂತುಷ್ಟರಾದಂತಿತ್ತು. ಸಂಗೀತದ ಕೊನೆಗೆ ಅವರೇ ಎದ್ದು

ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಪಾದಕ್ಕೆರಗಿ " ಬುದ್ಧೀ, ನನ್ನನ್ನು ಇನ್ನು ತಮ್ಮ ಪಾದಕ್ಕೆ ಅರ್ಪಿಸಿಕೊಳ್ಳಬೇಕು." ಎಂಬಾಗ ಶ್ರೀಗಳವರಿಗೆ ಆಚ್ಚರಿಯೆನಿಸಿತು. ಅವರು ಗದ್ಗದ ಕಂಠದಿಂದ ಭಾವನಾಪರವಶರಾಗಿ "ಗವಾಯಿಗಳೇ, ಇನ್ನೂ ಕುಮಾರೇಶನ ಕರೆ ಬಂದಿಲ್ಲ, ನೀವಿನ್ನೂ ಬಾಳೀ, ಸಂಗೀತ ಕಲೆಯನ್ನು ಉಳಿಸಬೇಕಾಗಿದೆ. ಕಲಾವಂತ ಈ ಮಕ್ಕಳನ್ನು ಸಲುಹಬೇಕಾಗಿದೆ." ಎಂದು ಹರಸಿದರು. ಆದರೆ ಪೂಜ್ಯ ಗವಾಯಿಗಳು ತಮ್ಮ ಮುಂದಿನ ಜೀವನದ ಗುರಿಯನ್ನು ಅಂತರ್ದೃಷ್ಟಿಯಿಂದ ಲಿಂಗಮುಖವಾಗಿ ಕಂಡುಕೊಂಡಂತಿತ್ತು. ಧಾರವಾಡದಿಂದ ಗದುಗಿಗೆ ಬಂದ ನಾಲ್ಕು ತಿಂಗಳಲ್ಲಿಯೇ ಲಿಂಗಯ್ಯನನ್ನು ಅಂಗೈಯಲ್ಲಿ ಮನವಾರೆ ಪೂಜಿಸುತ್ತಲೇ ಅವನಲ್ಲಿ ಬೆರೆತು ಒಂದಾದರು.

# ಮಹಿಮಾ ಪುರುಷ

## ಶ್ರೀ ರುದ್ರಮುನಿ, ಸಾಲಿಮಠ,

ಕರ್ನಾಟಕಮಾತೆಯು ಅನೇಕ ಮಹಾತ್ಮರಿಗೆ ಮಹಿಮಾಪುರುಷರಿಗೆ ಜನ್ಮ ನೀಡಿ ಧನ್ಯಳಾಗಿರುವಳು. ಅಂತಹ ಮಹಾತ್ಮ ಮಹಿಮರಲ್ಲಿ ಲಿಂ. ಪಂಚಾಕ್ಷರ ಗವಾಯಿಗಳು ಒಬ್ಬರೆಂದು ಧಾರಾಳವಾಗಿ ಹೇಳಬಹುದು.

೧೯೩೫ ನೆಯ ಇಸ್ವಿಯಲ್ಲಿ ನನಗೆ ಅವರ ಪದತಲದಲ್ಲಿ ಕುಳಿತು ಸಂಗೀತವನ್ನು ಕಲಿಯುವ ಭಾಗ್ಯ ದೊರೆಯಿತು. ನಾನು ಉಪನಿಷತ್ಕಾಲದ ಪವಿತ್ರ ಭಾರತೀಯ ಸಂಸ್ಕೃತಿಯ ಸತ್‌ಪರಂಪರೆಯಂತೆ ಗುರುವಿನ ಸೇವೆಯನ್ನು ಮೊದಲು ಮಾಡಿ ವಿದ್ಯೆಯನ್ನು ಸಂಪಾದಿಸಿದವನು. ಗುರುಗಳ ಸೇವೆಯಲ್ಲಿ ಅನೇಕ ವಿದ್ಯಾರ್ಥಿಗಳೂ ಇದ್ದರು. ಅವರಲ್ಲಿ ನಾನೂ ಒಬ್ಬ. ಗುರುಗಳ ಮಡಿಸ್ನಾನವನ್ನು ಮಾಡಿಸುವದು ನನ್ನ ಪಾಲಿಗೆ ಬಂದ ಪಾವನ ಸೇವೆಯಾಗಿತ್ತು. ಅವರ ಕೃಪಾಶ್ರಯದಲ್ಲಿದ್ದಾಗ ನಾನು ಪೂಜ್ಯ ಗವಾಯಿಗಳ ಮಹಿಮಾಮಯ ಜೀವನವನ್ನು ಪ್ರತ್ಯಕ್ಷ ಕಂಡವನು. ಶಿವಪೂಜೆಯ ಪ್ರಭಾವದಿಂದ ಅವರಲ್ಲಿ ಅಪಾರವಾದ ಅಂತಃಶಕ್ತಿ ಬೆಳೆದಿತ್ತು. ಅವರ ಇಚ್ಛಾಶಕ್ತಿ ಅನುಪಮವಾಗಿದ್ದಿತ್ತು. ಅವರ ನಡೆನುಡಿಗಳಲ್ಲಿ ಆ ಶಕ್ತಿಯ ಕೆಚ್ಚು ಹೆಚ್ಚಿನದಾಗಿತ್ತು. ಇಲ್ಲಿ ಒಂದೆರಡು ಪ್ರಸಂಗಗಳನ್ನು ನೆನೆದು ಅವರ ಮಹಿಮಾಮಯ ಲೀಲೆಯ ಸ್ವರೂಪವನ್ನು ಪಾಠಕರ ನಿದರ್ಶನಕ್ಕೆ ತರಬಯಸುತ್ತೇನೆ.

೧೯೩೩ ನೆಯ ಇಶ್ವಿಯಲ್ಲಿ ಗವಾಯಿಗಳು ಹೊಂಬಳ ಗ್ರಾಮದಲ್ಲಿ ಕ್ಯಾಂಪು ಮಾಡಿದ್ದರು. ಅವರು ಇಲ್ಲಿ ಬರಲು ಒಂದು ಕಾರಣವೂ ಇತ್ತು. ಒಮ್ಮೆ ಗವಾಯಿಗಳೇ ಹೊಂಬಳದ ಭಕ್ತರಿಗೆ ಭಿಕ್ಷೆಗೆ ಬರುತ್ತೇವೆಂದು ಹೇಳಿ ಕಳಿಸಿದರು. ಆಗ ಆ ಭಾಗದಲ್ಲಿ ದುರ್ಭಿಕ್ಷದ ಸೆಳಕೂ ಇತ್ತು. ಜನ ಮಳೆರಾಯನ ಬರವನ್ನೇ ನೋಡುತ್ತಿದ್ದರು. ಹೊಂಬಳದ ಭಕ್ತರು- "ತಾವು ದಯಮಾಡುವದಾದರೆ, ಜೊತೆಗೆ ಮಳೆರಾಯನನ್ನೂ ಕರೆದುಕೊಂಡು ಬರಬೇಕು. ಅಂದರೆ ಜನರು ತಮ್ಮನ್ನು ಹಾಡಿ ಹರಸ್ಯಾರು." ಎಂದು ಹೇಳಿ ಕಳಿಸಿದರು. ಗವಾಯಿಗಳು– "ಗುರುವಿನ ಕರುಣೆಯಿದ್ದರೆ ಮಳೆಗೇನು ಬರ ಆದೂ ಆಗಬಹುದು." ಎಂದವರೇ ಪರಿವಾರವನ್ನು ಕರೆದುಕೊಂಡು ಹೊಂಬಳಕ್ಕೆ ದಯಮಾಡಿಸಿದರು. ಅವರು ಗ್ರಾಮದಲ್ಲಿ ಪ್ರವೇಶ

ಮಾಡಿದ ರಾತ್ರಿಯೇ ಮನಗಂಡು ಮಳೆಸುರಿಯಿತು. ಹೊಂಬಳದ ದೈವದವರು ಗ್ರಾಮಕ್ಕೆ ದೇವರೇ ಬಂದನೆಂದು ಬಗೆದು ಶ್ರೀ ಗವಾಯಿಗಳನ್ನು ಬಹು ಭಕ್ತಿಯಿಂದ ಕಂಡು ಸತ್ಕರಿಸಿದರು. ಗವಾಯಿಗಳು ನಾಟಕ ಕಂಪನಿಯನ್ನು ಕಟ್ಟುವ ನಿಶ್ಚಯಮಾಡಿದರು. ಪಂ. ಪುಟ್ಟರಾಜ ಗವಾಯಿಗಳಿಂದ ಧರ್ಮ–ನೀತಿ ಬೋಧಪರ ರೋಚಕ ನಾಟಕಗಳನ್ನು ಬರೆಯಿಸಿದರು. ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರ ನಾಟಕವು ಪ್ರಥಮ ಪ್ರಯೋಗವಾಗಿ ನಡೆಯಲಿದ್ದಿತು. ತಾಲೀಮು ಪ್ರಾರಂಭವಾಯಿತು. ನಾನು ಸಿದ್ಧರಾಮನ ಪಾತ್ರವನ್ನು ಗುರುಗಳ ಅಪ್ಪಣೆಯಂತೆ ವಹಿಸಿದ್ದೆ.

ಗವಾಯಿಗಳ ಸಂಗೀತ ನಾಟ್ಯ ಶಾಲೆಯಲ್ಲಿ ಶಿವಯೋಗ ಮಂದಿರದ ಪದ್ಧತಿಯಂತೆ ಪಕ್ಷಕ್ಕೆ ಚತುರ್ದಶಿ, ಹುಣ್ಣಿವೆ ಇಲ್ಲವೇ ಅಮಾವಾಸ್ಯೆ, ಮತ್ತು ಪಾಡ್ಯ ಈ ಮೂರು ದಿನಗಳಲ್ಲಿ ಅನಧ್ಯಾಯವಿರುತ್ತಿತ್ತು. ಆ ತಿಂಗಳ ಕೊನೆಯ ಪಾಡ್ಯದ ದಿನವೇ ನಾಟಕವಾಡಬೇಕೆಂದು ಗುರುಗಳ ಕಟ್ಟಪ್ಪಣೆಯಾಗಿತ್ತು. ಆದರೆ ಗ್ರಾಮದಲ್ಲಿ ಹತ್ತಿದ ಮಳೆ ಬಿಟ್ಟಿರಲಿಲ್ಲ. ನಾವೆಲ್ಲ ಉದಾಸೀನ ಮಾಡಿದ್ದೆವು. ಅಂತಹ ಮಳೆಯಲ್ಲಿ ಸ್ಟೇಜ ಹಾಕುವದು ಸಾಧ್ಯವಿಲ್ಲವೆಂದು ಬಗೆದಿದ್ದೆವು. ಅಂದು ಪಾಡ್ಯದ ಮುಂಜಾನೆ ಗವಾಯಿಗಳು ಸ್ನಾನಮಾಡಿ ಶಿವಪೂಜೆಗೆ ಗದ್ದುಗೆಯ ಮೇಲೆ ಕೂಡ್ರುವ ಮೊದಲೇ ನಾಟಕದ ಏರ್ಪಾಟು ಆಯಿತೇ ಎಂದು ಕೇಳಿದರು. ನಾನು ಇಲ್ಲವೆಂದು ತಿಳಿಸಿದೆ. ಕಾರಣವನ್ನು ಹೇಳಿದೆ. ಅದಕ್ಕೆ ಅವರು ಸಿಡಿಮಿಡಿಗೊಂಡರು. ಸಂಘದ ವ್ಯವಸ್ಥಾಪಕರಾದ ಶ್ರೀ ಅನ್ನದಾನಯ್ಯನವರನ್ನೂ ಕರೆಯಿಸಿದರು. ಅವರಿಗೂ ನಾಟಕವನ್ನು ಅಂದು ರಾತ್ರಿ ಆಡಿಯೇ ತೀರುವಂತೆ ಕಟ್ಟಪ್ಪಣೆ ಮಾಡಿದರು. ಗ್ರಾಮದ ಪ್ರಮುಖರಾದ ಮೈಲಾರ ಲಿಂಗಪ್ಪನವರು ಎಷ್ಟು ಬಗೆಯಿಂದ ವಿನಂತಿಸಿಕೊಂಡರೂ ಕೇಳಲೇ ಇಲ್ಲ. ಅವರ ರುದ್ರನಂತಹ ಕೋಪವನ್ನು ಕಂಡು ಮತ್ತೆ ಯಾರಿಗೂ ಮಾತನಾಡುವ ಧೈರ್ಯವಿರಲಿಲ್ಲ. ನಾಟಕದ ಸ್ಟೇಜಿಗೆಂದು ಕಂಬವನ್ನು ಪೂಜಿಸಿ ನೆಟ್ಟಮೇಲೆಯೇ ಪೂಜೆಗೆ ಕುಳಿತರು. ಗದಗಿನಿಂದ ನಾಟಕದ ಸಾಮಾನು ಬಂದವು. ನಾಟಕದ ಪ್ರಚಾರವನ್ನು ಮಾಡಿಯಾಯಿತು. ರಾತ್ರಿ ಮಳೆರಾಯನ ಪ್ರಕೋಪ ಕಡಿಮೆಯಾಯಿತು. ಸರಿಯಾಗಿ ೧೦ ಘಂಟೆಗೆ ನಾಟಕ ಪ್ರಾರಂಭವಾಯಿತು. ಗವಾಯಿಗಳೇ ತಬಲಾ ಬಾರಿಸಲು ಕುಳಿತರು. ಪಂ. ಪುಟ್ಟರಾಜರು ಹಾರ್ಮೋನಿಯಂ ಬಾರಿಸಿದರು. ಜನ ಕಿಕ್ಕಿರಿದು ತುಂಬಿತ್ತು. ಅಭಿನಯವು ಬಹು ಯಶಸ್ವಿಯಾಗಿ ನಡೆಯಿತು. ಒಂದು ಹನಿ ಮಳೆಯೂ ಬರಲಿಲ್ಲ. ಬೆಳಗಿನ ಜಾವ ಮೂರು ಗಂಟೆಗೆ ನಾಟಕ ಮುಗಿಯಿತು. ಊರ ದೈವದ ಪ್ರಮುಖರು ಗವಾಯಿಗಳ ದರ್ಶನಪಡೆದು ಮಳೆ ನಿಂತು ನಾಟಕವು

ಚನ್ನಾಗಿ ನಡೆದುದಕ್ಕೆ ಅವರನ್ನು ಅಭಿನಂದಿಸುತ್ತಿದ್ದರು. ಆಗ ಗವಾಯಿಗಳು "ಇನ್ನು ಕೂಡಲೇ ಮನೆಯನ್ನು ಸೇರಿರಿ. ಮಳೆರಾಯ ನಾಟಕವು ಮುಗಿಯುವ ದನ್ನೇ ದಾರಿ ನೋಡುತ್ತಿದ್ದಾನ"-ಎಂದು ನಕ್ಕು ಹೇಳಿದರು. ಅವರು ನುಡಿದಂತೆ ಎಲ್ಲರೂ ಮನೆಗೆ ಸೇರಿದನಂತರ ಧೋ ಎಂದು ಮಳೆ ಸುರಿಯಿತು. ಇದು ನಾನು ಪ್ರತ್ಯಕ್ಷ ಕಂಡ ಲೀಲೆ.

ಶ್ರೀ ಗವಾಯಿಗಳವರಲ್ಲಿ ಶಿವಯೋಗದ ಸಿದ್ಧಿ ಪರಿಪೂರ್ಣತೆಯನ್ನು ಪಡೆದಿತ್ತು. ಅವರು ಅದನ್ನು ತಾವಾಗಿಯೇ ತೋರಿಸುತ್ತಿರಲಿಲ್ಲ. ಆದರೆ ಪ್ರಸಂಗ ದಲ್ಲಿ ಆ ಸಿದ್ಧಿ ಈ ಮಹಿಮಾಮಯ ಲೀಲೆಗಳ ರೂಪದಲ್ಲಿ ಪ್ರಕಟವಾಗುತ್ತಿತ್ತು. ಜನರ ಜನಹಿತಕ್ಕಾಗಿಯೇ ಈ ಲೀಲೆಗಳನ್ನು ತೋರುತ್ತಿದ್ದರು. ಅಂತಹ ಮಹಿಮಾಪುರುಷನ ಸೇವೆಯಲ್ಲಿದ್ದು ಎಂತಹವನೂ ಕಲಾವಂತನಾಗುತ್ತಿದ್ದ. ನಾನು ಅವರ ಮಹಿಮೆಯಿಂದಲೇ ಕರುಣೆಯಿಂದಲೇ ನನ್ನ ಜೀವನದಲ್ಲಿ ಬೆಳಕನ್ನು ಕಂಡಿರುತ್ತೇನೆ. ಅವರು ಒಂದು ಸಲ ಶಿಷ್ಯನ ಮಸ್ತಕದಲ್ಲಿ ಹಸ್ತವನ್ನಿಟ್ಟು ಹರಸಿ ದರೆ ತೀರಿತು. ಅವನ ಜೀವನ ಪಾವನವಾಗುತ್ತಿತ್ತು. ಅಂತಹ ಪಾವನ ಚರಿತ ಮಹಿಮಾಪುರುಷನ ನೆನಹು ನಮಗೆ ದಾರಿದೀಪವಾಗಿರಲಿ.

# ಸಮಾಜಪ್ರೇಮಿ-ವಿಶ್ವಪ್ರೇಮಿ

**ಪಂ. ಪುಟ್ಟರಾಜ ಗವಾಯಿಗಳು**

ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತುಃ ।
ನ ಖಲು ಬಹಿರುಪಾಧೀನ್ ಪ್ರೀತಯಃ ಸಂಶ್ರಯಂತೇ ॥

ಮಹಾಕವಿ ಭವಭೂತಿ ಕವಿಯ ಈ ಉಕ್ತಿಯು ನಿರುಪಾಧಿಕ ಪ್ರೇಮವನ್ನು ವ್ಯಕ್ತಗೊಳಿಸುತ್ತದೆ. ಈ ಪ್ರೇಮವೇ ನಿರ್ಹೇತುಕ ಪ್ರೇಮವೆಂದು ಹೇಳಿಸಿಕೊಳ್ಳುತ್ತದೆ. ಸೋಪಾಧಿಕ ಪ್ರೇಮವು ಸಹೇತುಕವಾದುದು ಅದಕ್ಕೆ ಒಂದಿಲ್ಲ ಒಂದು ಕಾರಣವಿರುತ್ತದೆ. ಸೋಪಾಧಿಕ ಪ್ರೇಮವು ಭೋಗಸಾಧನವಾಗಿದೆ. ನಿರುಪಾಧಿಕವು ಮೋಕ್ಷಸಾಧನವಾಗಿದೆ ಈ ನಿರುಪಾಧಿಕ ಪ್ರೇಮವೇ ಸಮಾಜ ಪ್ರೇಮವೆನಿಸುತ್ತದೆ. ಅದೇ ವಿಶಾಲವಾದರೆ ರಾಷ್ಟ್ರಪ್ರೇಮವೆನಿಸಿಕೊಳ್ಳುತ್ತದೆ. ನಮ್ಮ ಗುರುವರ್ಯರ ಹೃದಯ ಅಂತಹ ವಿಶ್ವಪ್ರೇಮದಿಂದ ತುಂಬಿ ತುಳುಕಿತ್ತು. ಅವರ ಚರಿತೆಯ ಕೆಲವು ಉದಾಹರಣೆಗಳಿಂದ ಅವರ ಸಮಾಜ- ವಿಶ್ವಪ್ರೇಮದ ಸ್ವರೂಪ ತಿಳಿಯುವದು.

ಶ್ರೀ ಗವಾಯಿಗಳವರು ಗಾಯನ ಕಲೆಯಲ್ಲಿ ಬಲ್ಲಿದವರಾದಂತೆ ತಬಲಾವಾದನ ಕಲೆಯಲ್ಲಿಯೂ ಬಲ್ಲಿದರಾಗಿದ್ದ ವಿಷಯವನ್ನು ಅವರ ಪರಿಚಿತ ರೆಲ್ಲರೂ ಬಲ್ಲರು. ಆದರೆ ಆ ಕಲೆಯನ್ನು ಅವರು ಹೇಗೆ ಕಲಿತರೆಂಬುದು ಅನೇಕರಿಗೆ ಅರಿಯದ ವಿಷಯವಾಗಿರುವದು. ಇದನ್ನು ತಿಳಿದರೆ ಸರ್ವರಿಗೂ ಇವರ ಸಮಾಜ ಪ್ರೇಮವು ಸುವಿದಿತವಾಗುವದು.

ಒಮ್ಮೆ ಪರಮ ಪೂಜ್ಯ ಲಿಂ. ಹಾನಗಲ್ಲ ಶ್ರೀ ಕುಮಾರ ಮಹಾ ಸ್ವಾಮಿಗಳವರು ಶ್ರೀ ಗವಾಯಿಗಳನ್ನು ಕರೆದು– "ನೀನು ಗಾಯನ ಕಲೆಯಲ್ಲಿ ಕುಶಲನಾದನಂತೆ ವಾದನ ಕಲೆಯಲ್ಲಿಯೂ ನಿಪುಣನಾಗಬೇಕಲ್ಲವೆ ?" ಎಂದು ಕೇಳಿದರು. ಆದಕ್ಕೆ ಗವಾಯಿಗಳು– "ಇದು ನಿಜ ಬುದ್ಧಿ, ಅದಕ್ಕಾಗಿಯೇ ತಬಲಾವಾದನ ಕಲೆಯನ್ನು ಕಲಿಯಬೇಕೆಂಬ ಆಶೆಯುಳ್ಳವನಾಗಿರುವೆ. ತಾವು ಶಿವಯೋಗಮಂದಿರ ಮಹಾಸಂಸ್ಥೆಯ ಸಂಚಾಲಕರು. ಅದಕಾಗಿ ತಾವು ಆಗಾಗ ಆರ್ಥಿಕ ಸಂಕಷ್ಟಗಳನ್ನು ಎದುರಿಸುತ್ತಿರುವಿರಿ. ತಮ್ಮ ಅಪ್ಪಣೆಯಂತೆ ನಾನೂ

ಆಚಾರವ ಕಟ್ಟಿನಲ್ಲಿರುವೆನು. ಇದೆಲ್ಲವನ್ನೂ ಗಮನಿಸಿ ತಮ್ಮಲ್ಲಿ ಒಂದು ವಿಷಯ ಅರಿಕೆ ಮಾಡಿಕೊಳ್ಳಬೇಕೆಂದಿರುವೆ. ನನ್ನ ಹತ್ತಿರ ಒಬ್ಬ ಮಾಹೇಶ್ವರ ವಿದ್ಯಾರ್ಥಿಯು ತಬಲಾ ಕಲಿಯುವ ಅಪೇಕ್ಷೆಯಿಂದ ಬಂದಿರುವನು. ಆತನು ತಬಲಾ ನುಡಿಸುವಲ್ಲಿ ಜಾಣನೆಂದು ಕಾಣುತ್ತದೆ. ಅವನ ಕೈಗಳು ಚನ್ನಾಗಿವೆ. ಅವನಲ್ಲಿ ವಾದನ ಕಲೆಯು ದೈವದತ್ತವಾಗಿದೆ. ಅವನನ್ನೇ ಕಲಾವಂತರ ಕಡೆಗೆ ಕಲಿಯಲು ಕಳುಹಿ, ಪೂರ್ಣ ಕಲೆಗಾರನನ್ನಾಗಿ ಮಾಡಿದರೆ ಮುಂದೆ ಅವನಿಂದಲೇ ನಾನಾದರೂ ಅಭ್ಯಾಸ ಮಾಡಿಕೊಳ್ಳಬಹುದು." ಎಂದು ಶ್ರೀಗಳವರಲ್ಲಿ ಅರಿಕೆ ಮಾಡಿಕೊಂಡರು. ಸಮಾಜ ಪ್ರೇಮವೇ ಹೊರಸೂಸುವ ಈ ಮಾತನ್ನು ಕೇಳಿ ಪೂಜ್ಯ ಶ್ರೀಗಳವರಿಗೆ ಹಿಡಿಸಲಾರದಷ್ಟು ಆನಂದವಾಯಿತು.

ಶ್ರೀಗವಾಯಿಗಳವರ ಇಚ್ಛೆಯಂತೆ ಆ ವಿದ್ಯಾರ್ಥಿಯನ್ನು ತಬಲಾ ಕಲಿಯಲು ಆಗಿನ ಕಾಲದಲ್ಲಿ ಸುಪ್ರಸಿದ್ಧರಾದ ಬೆಳಗಾಂವ ಜಿಲ್ಲೆಯ ಶಾಹಪುರದಲ್ಲಿಯ ಮಲ್ಲೇಶಪ್ಪನವರೆಂಬ ವಿದ್ವಾಂಸರ ಬಳಿಗೆ ಕಳಿಸಲಾಯಿತು. ಅವರಿಂದ ಕಲಿತು ತಬಲಾ ವಾದನದಲ್ಲಿ ನಿಷ್ಣಾತನಾಗಿ ಬಂದ ಮಾಹೇಶ್ವರನಿಂದಲೇ ಶ್ರೀ ಗವಾಯಿಗಳವರು ತಬಲಾವಾದನ ಶಿಕ್ಷಣವನ್ನು ಪಡೆದರು. ಅದನ್ನು ಕೇಳಿ ಪೂಜ ಹಾನಗಲ್ಲ ಶ್ರೀಗಳವರಿಗೆ ಅತ್ಯಾನಂದವಾಯಿತು. ಹೀಗೆ ಗವಾಯಿಗಳು ತಮ್ಮ ಶಿಷ್ಯರನ್ನೇ ಗುರುವೆಂದು ಭಾವಿಸಿದರು. ಅವರೇ ಶಿವಯ್ಯನವರು. ಇವರು ಧಾರವಾಡ ಜಿಲ್ಲೆಯ ಶಿಗ್ಗಾವಿ ತಾಲೂಕಿಗೆ ಸೇರಿದ ಜೇಕಿನಕಟ್ಟಿ ಗ್ರಾಮದ ಹಿರಿಯ ಮಠಸ್ಥರು. ಪೂಜ್ಯ ಹಾನಗಲ್ಲ ಶ್ರೀಗಳವರ ಕೃಪೆಯಿಂದ ಶ್ರೀ ಶಿವಯ್ಯನವರು ತಮಗಿಷ್ಟವಾದ ಈ ಕಲಾಸಂಪದವನ್ನು ಪಡೆದರು. ಇವರ ಚಿರಂಜೀವ ಷಣ್ಮುಖಯ್ಯ, ಚನ್ನಬಸವಯ್ಯನವರು ಶ್ರೀಗಳವರ ಶಿಷ್ಯರಾಗಿ ತಂದೆಯಂತೆ ಗಾಯನ- ತಬಲಾವಾದನ ಕಲೆಗಳಲ್ಲಿ ಪ್ರಸಿದ್ಧರಾಗಿರುವದು ಶ್ರೀಗವಾಯಿಗಳವರ ಸಮಾಜ ಪ್ರೇಮವಲ್ಲದೆ ಮತ್ತೇನೂ ಅಲ್ಲ.

ಶ್ರೀ ಗವಾಯಿಗಳವರ ಸಮಾಜ ಪ್ರೇಮವು ಇನ್ನೂ ವಿಕಸಿತವಾಗಿತ್ತು. ಇದಕ್ಕೆ ದೃಷ್ಟಾಂತವಿದು: ಸಕಲ ಜಾತಿಯ ವಿದ್ಯಾರ್ಥಿಗಳನ್ನು ತಮ್ಮಂತೆ ತಿಳಿದು ಅನ್ನದಾನ-ವಿದ್ಯಾದಾನ ಮಾಡುವ ವ್ರತವನ್ನು ಕೈಕೊಂಡರು. ಎಂತಹ ಕಠಿಣ ಸಮಯ ಬಂದರೂ ಅವರು ಎದೆಗುಂದದೆ ಶ್ರೀ ಗುರು ಕುಮಾರೇಶನ ಕೃಪೆಯಿಂದ ಪಾರಾದರು. ಇದಕ್ಕೊಂದು ಉದಾಹರಣೆಯಿದು: ಬಂಕಾಪುರದ ಶಂಕರ ದೀಕ್ಷಿತರೆಂಬ ಸುಶೀಲ ಸಂಗೀತ-ಸಂಸ್ಕೃತ ಸಾಹಿತ್ಯ ವಿದ್ವಾಂಸರಾದ ಸ್ಮಾರ್ತ ಬ್ರಾಹ್ಮಣರೊಬ್ಬರು ದಕ್ಷಿಣಾದಿ ಸಂಗೀತದ ವಿಷಯ ಸಂಗ್ರಹಕ್ಕಾಗಿ

ಶ್ರೀ ಗವಾಯಿಗಳವರಲ್ಲಿ ಬಂದರು. ಗವಾಯಿಗಳು ಅವರಿಗಾಗಿಯೇ ಒಬ್ಬ ಸ್ಮಾರ್ತ ಬ್ರಾಹ್ಮಣನಾದ ತಮ್ಮ ವಿದ್ಯಾರ್ಥಿಯನ್ನು ಸೇವೆಗೆಂದು ನೇಮಿಸಿ, ಅವನಿಂದಲೇ ಪಾಕ ಮಾಡಿಸಿ, ಅವರ ವ್ರತ-ನೇಮಗಳು ಕೆಡದಂತೆ ವ್ಯವಸ್ಥೆ ಮಾಡಿದರಲ್ಲದೆ ಅವರಿಗೆ ವಿದ್ಯೆಯನ್ನೂ ಕಲಿಸಿದರು. ಇದರಂತೆ ತಮ್ಮ ಪ್ರಸಾದ ನಿಲಯದಲ್ಲಿ ಭೋಜನ ಮಾಡದೇ ಇರುವ ಪ್ರತಸ್ಥರಾದ ಸಮಸ್ತ ಮತೀಯ ವಿದ್ಯಾರ್ಥಿಗಳಿಗೆಲ್ಲರಿಗೂ ಸುವ್ಯವಸ್ಥೆಯನ್ನು ಮಾಡುತ್ತಿದ್ದರು. ಯಾವ ವಿದ್ಯಾರ್ಥಿಯು ಅಭ್ಯಾಗತರ ಮನವನ್ನೂ ಅವರೆಂದೂ ನೋಯಿಸಲಿಲ್ಲ. ಇದರಿಂದ ಶ್ರೀ ಗವಾಯಿಗಳವರ ಸಮಾಜ ಪ್ರೇಮವು ಎಷ್ಟು ವಿಶಾಲವಾಗಿದ್ದಿತೆಂಬುದು ಸರ್ವರಿಗೂ ತಿಳಿಯುವಂತಿದೆ. ಇವರ ಸಮಾಜ ಪ್ರೇಮವೇ ಇನ್ನೂ ವಿಶಾಲವಾಗಿ ರಾಷ್ಟ್ರಪ್ರೇಮವಾಯಿತು.

ಶ್ರೀ ಗವಾಯಿಗಳವರ ರಾಷ್ಟ್ರಪ್ರೇಮಕ್ಕೆ ಸಮೀಚೀನವಾದ ನಿದರ್ಶನವೊಂದಿದೆ. ಗವಾಯಿಗಳವರು ತಮ್ಮ ಗುರುವರ್ಯ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳಂತೆ ಯಾವಾಗಲೂ ಖಾದಿ ವಸ್ತ್ರಗಳನ್ನೇ ಧರಿಸುತ್ತಿದ್ದರು. ಇವರಿಗೆ ಮೊದಮೊದಲು ಜರತಾರಿ-ರೇಷ್ಮೆ ವಸ್ತ್ರಗಳೂ ಕೂಡ ಭಾರವಾಗುತ್ತಿದ್ದವು. ಅಂಥವರಿಗೆ ಗುರು ಕುಮಾರನ ಪ್ರೇರಣೆಯಿಂದ ಧಾರ್ಮಿಕ ಭಾವನೆ ಹೆಚ್ಚಿದಂತೆ ರಾಷ್ಟ್ರಪ್ರೇಮದ ಕುರುಹಾಗಿ ಖಾದಿ ವಸ್ತ್ರವೇ ಪ್ರಿಯವಾಯಿತು. ಅವರಲ್ಲಿ ಅನೇಕ ಶಿಷ್ಯರು* ದೇಶಭಕ್ತಿಯ ಪದಗಳನ್ನು ಕಟ್ಟಿ ಹಾಡಿದರು. ಅವನ್ನು ಕೇಳಿ ಗುರುಗಳು ಆನಂದ ಪಡುತ್ತಿದ್ದರು. ಈ ರಾಷ್ಟ್ರಪ್ರೇಮವೇ ಇನ್ನೂ ವಿಶಾಲವಾಗಿ ವಿಶ್ವಪ್ರೇಮವಾಯಿತು.

ಅಯಂ ನಿಜಃ ಪರೋ ವೇತಿ ಗಣನಾ ಲಘುಚೇತಸಾಂ ।
ಉದಾರಚರಿತಾನಾಂ ತು ವಸುಧೈವ ಕುಟುಂಬಕಮ್ ॥

"ಇವನು ನನ್ನವನು, ಇವನು ಪರಕೀಯನು ಎಂಬುದಾಗಿ ಕೀಳು ಮನದ ಜನರ ಎಣಿಕೆಯು. ಉತ್ಕೃಷ್ಟನಾದ ನಡೆತೆಯುಳ್ಳ ಮಹಾತ್ಮರಿಗೆ ಭೂಲೋಕವೆಲ್ಲವೂ ಕುಟುಂಬವಾಗಿರುತ್ತದೆ." ಅವರು ವಿಶ್ವಪ್ರೇಮಿಗಳು. ಇದೇ ರೀತಿಯಾಗಿ ಶ್ರೀ ಗವಾಯಿಗಳವರು ಸ್ವಕೀಯ-ಪರಕೀಯವೆಂಬ ಭಾವ

---

* ಸದಾಶಿವಾರ್ಯ ಬಸವಲಿಂಗಸ್ವಾಮಿ ಮರೋಳ ಅವರು 'ಪರಮಶಿವನೊಲ್ಲ' ಅಂಕಿತದಿಂದ ಅನೇಕ ಜನಪದ ರಾಷ್ಟ್ರಗೀತೆಗಳ ರಚನೆ ಮಾಡಿರುವರು. ಅವು "ವಿವಿಧ ಜನಪದ ಸಾಹಿತ್ಯ ಪದ್ಯಾವಲಿ" ಎಂಬ ಪುಸ್ತಕದಲ್ಲಿ ಪ್ರಕಟವಾಗಿವೆ.

ನೆಯಿಂದ ದೂರಾಗಿ ವಿಶ್ವಕುಟುಂಬಿಗಳಾಗಿದ್ದರು. ಈ ವಿಶ್ವಪ್ರೇಮದಿಂದ ಶ್ರೀ ಗವಾಯಿಗಳವರು ಸಾಧಿಸಿದ್ದು ವಿಶ್ವಾತ್ಮರೂಪ.

ವಿಶ್ವಾತ್ಮಸ್ವರೂಪವೆಂದರೆ ವಿಶ್ವವನ್ನು ತನ್ನಲ್ಲಿಯೂ ತನ್ನನ್ನು ವಿಶ್ವದಲ್ಲಿಯೂ ಕಾಣುವ ವಿದ್ಯೆಯು. ಈ ವಿದ್ಯೆಯು ಯಾವಾತನಿಗೆ ಸಾಧಿಸುವದೋ ಅವನೇ ವಿಶ್ವಾತ್ಮನು. ಈ ಸ್ಥಿತಿಯು ಗವಾಯಿಗಳವರಿಗೆ ಪ್ರಾಪ್ತವಾಗಿತ್ತು. ಇದಕ್ಕೊಂದು ಉದಾಹರಣೆಯನ್ನು ಹೇಳಬಹುದು: ಶಿರೋಳ ಮುಕ್ಕಾಮಿನಲ್ಲಿದ್ದಾಗ ಶ್ರೀ ಗವಾಯಿಗಳವರಿಗೊಮ್ಮೆ ಚೇಳು ಕಡಿಯಿತು. ಆ ಕೂಡಲೇ ಶಿಷ್ಯರು ಚೇಳನ್ನು ಹುಡುಕಿದರು. ಆ ವಿಷಜಂತುವಿಗೆ ಸ್ವಲ್ಪವೂ ಹಿಂಸೆಯಾಗದಂತೆ ನೋಡಿಕೊಳ್ಳುವಂತೆ ತಿಳಿಸಿ ಅದನ್ನು ಸುರಕ್ಷಿತ ಸ್ಥಾನದಲ್ಲಿ ಬಿಡುವಂತೆ ಹೇಳಿದರು. ಅದು ಸುರಕ್ಷಿತವಾಗಿದೆಯೆಂದು ತಿಳಿದಾಗ – "ಈಗ ನನಗೆ ಬಹಳ ಆನಂದವಾಗಿದೆ. ಚೇಳಿನ ವಿಷಬಾಧೆಯೆಲ್ಲವೂ ಇಳಿದು ಹೋಗಿದೆ. ನೀವದಕ್ಕೆ ತೊಂದರೆ ಕೊಟ್ಟಿದ್ದರೆ ನನಗೆ ಬಹಳ ವ್ಯಥೆಯೆನಿಸುತ್ತಿತ್ತು. ಎಲ್ಲ ಪ್ರಾಣಿಗಳಲ್ಲಿ ಇರುವ ಜೀವವೊಂದೇ. ಆ ಚೇಳಿಗೆ ಕಣ್ಣಿಲ್ಲದವನಾದ ನನ್ನಿಂದಲೇ ಏನೋ ತೊಂದರೆ ಆಗಿರಬಹುದು. ಅಂತೆಯೇ ಅದು ನನಗೆ ಕಡಿದಿದೆ" ಎಂದು ಹೇಳಿ ಆನಂದದಲ್ಲಿ ಮೂರು ತಾಸಿನವರೆಗೂ ಕೀರ್ತನ ಮಾಡಿದುದು ನನಗೆ ತಿಳಿದ ವಿಷಯವಾಗಿದೆ. ಈ ಸ್ಥಿತಿಯನ್ನು ಸಾಧಿಸಿಕೊಳ್ಳಬೇಕೆಂಬುದೇ ಅವರ ಉಚ್ಚ ಧ್ಯೇಯವಾಗಿತ್ತು. ಶಿವಕೀರ್ತನ ಕಲೆಯನ್ನು ಅವರು ಉತ್ತಮ ಕಲೆಯ ರೂಪದಲ್ಲಿ ಬೆಳೆಸಿಕೊಂಡರು. ಗುರುಗಳಿಗೆ ಈ ಕಲೆಯನ್ನು ಕಲಿಸಿದವರು ವಿಜಾಪುರ ಜಿಲ್ಲೆಯ ವ್ಯಾಸಾಪುರದ ಶ್ರೀ ಬಸವಲಿಂಗ ಶಾಸ್ತ್ರಿಗಳವರು. ಇವರು ಪರಮಪೂಜ್ಯ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳ ಶಿವಾನುಭವ–ಪ್ರವಚನ ಕೇಳಿ ಕೀರ್ತನ ಕಲೆಯಲ್ಲಿ ನಿಷ್ಣಾತರಾದರು. ಶ್ರೀ ಗವಾಯಿಗಳಿಂದಲೇ ಅವರ ಸಂಗೀತವನ್ನು ಕಲಿತರು ನಿತ್ಯವೂ ಹಾನಗಲ್ಲ ಪೂಜ್ಯರ ಶಿವಾನುಭವ ಶ್ರವಣ ಮಾಡುತ್ತಿದ್ದ ಶ್ರೀ ಗವಾಯಿಗಳಿಗೆ ತತ್ವಜ್ಞಾನವೂ ಸುಲಭ ಸಾಧ್ಯವಾಯಿತು. ಈ ತತ್ವಬೋಧೆಯಿಂದ ಲಿಂಗಪೂಜಾನಿಷ್ಠಗರಿಷ್ಠರಾದ ಶ್ರೀ ಗವಾಯಿಗಳವರಿಗೆ ವಿಶ್ವಾತ್ಮಸ್ವರೂಪವಷ್ಟೇ ಅಲ್ಲದೆ ಪರಮಾತ್ಮನ ಸ್ವರೂಪವೂ ಸಾಧ್ಯವಾಯಿತು. ಇದಕ್ಕೆ ಅವರ ಪವಿತ್ರ ಜೀವನದ ಕೊನೆಯ ಮಹಾಲೀಲೆಯೇ ನಿದರ್ಶನವಾಗಿದೆ. ಶ್ರೀ ಗವಾಯಿಗಳವರು ಅಂತ್ಯಕಾಲದಲ್ಲಿ ಉದರರೋಗ ಪೀಡಿತರಾಗಿಯೂ ಲಿಂಗಪೂಜಾನಿಷ್ಠರಾದುದನ್ನು ಕಂಡ ಜನರು ವಿಸ್ಮಿತರಾದರು ಸಮಾಜಪ್ರೇಮದ ಬಲದಿಂದಲೇ ಶ್ರೀ ಗವಾಯಿಗಳವರು ಪರಮಾತ್ಮಸ್ವರೂಪರಾದರೆಂದು ಹೊಗಳಿದರು. ಇಂತಹ ಸರ್ವಸ್ವತಂತ್ರರಾದ ಶ್ರೀ

ಪಂಚಾಕ್ಷರ ಗವಾಯಿಗಳವರ ಸಮಾಜಪ್ರೇಮದ ಚರಿತೆಯು ನಮ್ಮೆಲ್ಲರಿಗೂ ಸದಾ ಸಂಸ್ಮರಣೀಯವಾಗಿರಬೇಕು, ಆಚರಣೆಯಲ್ಲಿ ಬರಬೇಕು. ಆಗ ಮಾತ್ರ ನಾವು ಅವರ ನಿಜವಾದ ಪುಣ್ಯಸ್ಮಾರಕ ಮಾಡಿದಂತಾಗುವುದು.

" ಎಲ್ಲರಿಗೂ ಸುಖವಾಗಲಿ "

# ಶರಣು ನಗೆಮೊಗದ ಚೆಲುವಾ !

ಸೋಲರಿಯದ ನಗೆಮೊಗದ ಚೆಲುವ
ವೀರವತಿ ಪಂಚಾಕ್ಷರಿ ದೇವ !
ಸಂಗೀತ ಶಾರದೆಗೆ ಕಣ್ಣಿತ್ತು
ಹುಟ್ಟಿದೆ ನೀ ಕುರುಡಾಗಿ,
ಮೆರೆದೆ ಕನ್ನಡ ನಾಡಿನಲಿ,
ಉಭಯ ಗಾಯನಾಚಾರ್ಯನಾಗಿ;
ತ್ಯಾಗಿ, ಕರ್ಮಯೋಗಿ, ಕಾಯಕಭೋಗಿ
ದೀನ ಬಂಧು, ದಾನಿ, ಸಮ್ಯಜ್ಞಾನಿ
ಶಿವಪದಧ್ಯಾನಿ, ದಯಾಸಿಂಧು
ಗಂಧದಂತೆಯೆ ಸವೆದು, ದೀಪದೊಲು ಉರಿದು
ಹೂವಿನಂತರಳಿ ನಗುತ ಗೈದೆ ಜನಸೇವೆ!
ಶಿವಯೋಗಿ ಬಾ ಮತ್ತೆ ಮರಳಿ.
ಕನ್ನಾಡ ತೋಟದಲಿ,
ಪಂಚಮದಿಂಚರ ನುಡಿಸಿ ಶಿವನೊಲಿಸಿ,
ಒಲುಮೆಯಮೃತ ಪಡೆದದನು ಜನಕಿತ್ತೆ!
ಸಂಗೀತ ಬದುಕಲೆಂದು ಹರಸಿ;
ನಿನ್ನ ಬಾಳೊಂದು ಮಹಾಕಾವ್ಯ
ನವ್ಯ ಭವ್ಯ; ನಾದಲೋಲ
ನಿನ್ನಣುಗರದನಿಲ್ಲಿ ಹಾಡುತಿಪರನುದಿನ,
ಕೇಳು ಬಾ ಸತ್ಯಶೀಲ,
ನಿನ್ನ ಸಂಗೀತ ಶಿವಗೀತ,
ಜನರು ಬದುಕುವ ಗೀತ;
ನಿತ್ಯ ನೂತನ ಶಕ್ತಿ ಚೆಲುವುಗಳನೀವ
ಕಮನೀಯ ಗೀತ;
ಶರಣು ನಾದಬ್ರಹ್ಮ ನಗೆಮೊಗದ ಚೆಲುವಾ !
ಶರಣು ವೀರವ್ರತಿ ಪಂಚಾಕ್ಷರಿ ದೇವಾ !

—ಶಾಂತರಸ

# ಗಾನಯೋಗಿಗೆ-

( ವಾರ್ಧಿಕ ಷಟ್ಪದಿ )

**ಶ್ರೀ** ಶಂಭುವಿನ ಪರಮ ಕರುಣೆಯೊಳು ಶ್ರೀ ಕುಮಾ-
ರೇಶನೊಲುಮೆಯ ಶಿಷ್ಯರಾಗಿ ಸಂಜನಿಸಿ ಸಲೆ
ಭಾಸುರಾತ್ಮರ ತಾಳಿ ಬಾಳಿದಿರಿ ವರವೀರಶೈವರಾ ಸಮಾಜದೊಳಗೆ ॥
ಈಶನೊಲುಮೆಯ ಗಳಿಸಬೇಕೆಂಬ ಭಾವದೊಳು
ಲೇಸನೇ ಬಯಸಿದಿರಿ ಸಕಲ ಜೀವಾತ್ಮರ್ಗೆ
ಆ ಸದಾಶಿವ ನಿಮಗೆ ಚಿರವಾದ ಶಾಂತಿಯನು ನೀಡಲೆಂದಾಶಿಸುವೆನು ॥೧॥

**ಪಂ**ಚಾಕ್ಷರಿಗಳೆಂಬ ಪುಣ್ಯನಾಮವ ಪಡೆದು
ಸಂಚಾರ ಮೂರ್ತಿಗಳು ನೀವಾಗಿ ನಾಡಿನೊಳು
ಸಂಚಾರ ಸಂಸ್ಥೆಯನು ಕಟ್ಟಿದಿರಿ ಸಂಸ್ಕೃತಿಯ ಬೆಳೆಸಲ್ಕೆ ಕರುನಾಡೊಳು ॥
ಪಂಚಭೂತಗಳಿಂದ ಪಡೆದ ನಿಮ್ಮಯ ಕಾಯ
ಪಂಚತ್ವವನು ಪಡೆದು ಮಾಯವಾಗಿಹುದಿಂದು
ಮಿಂಚಿ ಬೆಳಗುತ್ತಿಹುದು ಪರಿಶುದ್ಧ ಜೀವನದ ಕೀರ್ತಿ ಕಾಯವು ಜಗದೊಳು ॥೨॥

**ಚಾ**ರು ಚರ್ಮದ ಚಕ್ಷು ನಿಮಗಿಲ್ಲವಾಗಿರಲು
ಭೂರಿ ಜ್ಞಾನದ ನೇತ್ರ ದೇವ ತಾನಿತ್ತಿರಲು
ಘೋರ ಸಂಸಾರವಿದು ಸಟೆಯೆಂದು ಸಾಧಿಸುತ ಹೆಣಗಿದಿರಿ ಶಿವನೊಲುಮೆಗೆ ॥
ಚಾರತರ ಜೀವನದಿ ಬೆಳಕು ಕಾಣಲು ಬಯಸಿ
ವೀರವಿರತಿಯ ನಿತ್ಯ ಜೀವನದೊಳಳವಡಿಸಿ
ವೀರಶೈವರ ವಿವಿಧ ರಂಗದೊಳು ಸವೆಸಿದಿರಿ ನಿಮ್ಮಾತ್ಮಜೀವನಗಳ ॥೩॥

**ಕ್ಷ**ಮೆದಮೆಗಳೆಂಬ ಸದ್ಗುಣಗಳನು ಸಲೆ ಗಳಿಸಿ
ವಿಮಲ ಮೂರ್ತಿಗಳಾಗಿ ಗಾನಯೋಗಿಗಳಾಗಿ
ಅಮಿತವಾಗಿಹ ಕಾಲ ಜ್ಞಾನಯೋಗಿಗಳಾಗಿ ಬೆಳಗಿದಿರಿ ವಿಶ್ವದೊಳಗೆ ॥
ಸಮಯದೊಳು ಸದ್ವಿದ್ಯೆ ಪಡೆದ ಶಿಷ್ಯರು ನಿತ್ಯ
ವಿಮಲಮಾನಸರಾಗಿ ನಿಮ್ಮ ಸ್ಮರಣೆಯೊಳಿಹರು
ಉಮೆಯ ನಾಥನು ನಿಮಗೆ ಸ್ಥಿರವಾದ ಶಾಂತಿಯನು ನೀಡಲೆಂದಾಶಿಸುವೆನು॥೪॥

ರೀತಿ-ನೀತಿಗಳಿಂದ ಜನತೆಯಾದರ ಪಡೆದು
ಖ್ಯಾತಿ ಗೌರವಗಳನು ಮನೆವಾರೆ ಸವಿದುಂಡು
ನೀತಿಯಾಗರವಾದ **ಶಿವಯೋಗ ಮಂದಿರದಿ** ಜೀವನವ ಸಾಗಿಸಿದಿರೈ ॥
ಆ ತಪೋಭೂಮಿಯೊಳು ಶಿಷ್ಯರ್ಗೆ ಕಲಿಸಿ ಸಂ-
ಗೀತ ಶಾಸ್ತ್ರವ ರೂಪುಗೊಳಿಸಿದ ಕಲಾಸಿದ್ಧಿಯೆ
ಭೂತಪತಿ ನಿಮಗಿನ್ನು ಸ್ಥಿರವಾದ ಶಾಂತಿಯನು ನೀಡಲೆಂದಾಶಿಸುವೆನು ॥೫॥

**—ಸುಬುದ್ಧಿಸ್ವಾಮಿ, ಹಿರೇಮಠ.**

# ಗಾನದ ದಾನವ ಗೈದ ಸುದಾನಿ !

ರಾಗ- ಪೂರ್ಯಾ, ತ್ರಿತಾಲ;

( ಚಾಲ- ಗಾಂಧಿ ಮಹಾತ್ಮಾಯೋಗಿ ವಿರಾಗಿ )

ಪಂಚಾಕ್ಷರ ಗುರುವರ್ಯನ ಕಾರ್ಯದಿ
ಕಿಂಚಿತ್ತಾದರೂ ಕೊರತೆ ಇಲ್ಲವು ॥ಪ॥

ಪಂಚಾಚಾರವ ವಂಚನೆ ಇಲ್ಲದೆ
ಹಂಚಿಕೆಯಿಂದಾಚರಿಸಿದ ಯೋಗಿ ॥೧॥

ಮುಂಚಿನ ಗಾನದ ಶಾಸ್ತ್ರಪದ್ಧತಿಯ
ಅಂಚಿಯ ತೆರದಿಂ ಹಂಚಿದ ತ್ಯಾಗಿ ॥೨॥

ಸಂಚಿತ ಆಗಾಮಿ ಪ್ರಾರಬ್ಧಕೆ
ಕೊಂಚವಾದರೂ ಸಿಲುಕದ ಮಹಿಮಾ ॥೩॥

ಗಾನದ ಸುಧೆಯನು ಊನರಿಗುಣಿಸುತ
ಗಾನದ ದಾನವ ಗೈದ ಸುದಾನಿ ॥೪॥

ವರಸುತ ತರಳಗೆ ಕರುಣಾಮೃತವನು
ಸರಸದಿ ನೀಡಿದ ಪರಮ ಗುರುವರಾ ॥೫॥

**—ಸದಾಶಿವಾರ್ಯ ಬಸವಲಿಂಗಸ್ವಾಮಿ, ಮರೋಳ.**

# ಹರಸು ಬಾ ಗುರುದೇವಾ

ಯಾವ ಜನ್ಮ ಜನ್ಮಾಂತರದ ತಪದಿಂದ
ಮನ ಶುದ್ಧ ಘನ ಶುದ್ಧ ಈ ಸೇವೆ ಲಭಿಸಿತೋ !
ಎನ್ನನಿಂದೀ ದಿವ್ಯತಮ ದೇವ ನಂದನಕೆ
ವೈದಳೆದ ಕರುಣೆಯಾಗಿ ಕರೆತಂದಿತೋ ||೧||

ಗದಗು ಗದ್ದುಗೆಯಾಗಿ 'ಪುಣ್ಯಾಶ್ರಮ'ದ ನೆಲದೊಳು
ಶಿವಕಲೆಯು ಬೆಳಗುತಿದೆ ಪರಮ ಪಂಚಾಕ್ಷರಿಯಾಗಿ,
ಅಂತರಂಗದ ಜ್ಯೋತಿಗಳ್ ತೆರೆಯುತಿದೆ
ಹೃದಯಮಂದಿರದ ಬೆಳಕಿಗಾಗಿ ||೨||

ಕಳೆಯಿತೆನ್ನೆದೆಯ ಕಾರಿರುಳು ಭಯ
ಹೊಂಗಿರಣವಾ ತಿಳಿಬೆಳಗು ಸಿರಿದೋರಿ,
ಹಿಗ್ಗು–ಕುಗ್ಗುಗಳಳಿದು. ಮೇಲು- ಕೀಳುಗಳಳಿದು
ನಮ್ಮ ಬಾಳಿನ ಗುರಿಯ ಹೆದ್ದಾರಿಯನು ತೋರಿ ||೩||

ಪರಮ ಪುಣ್ಯದ ಗಂಗೆ ಕಾರುಣ್ಯರಸಗೊಂಡು,
ನಾಕದಿಂ ಧರೆಗಿಳಿದು ಬಂದಳಾತುರದಿ
ಇಲ್ಲಿಂತು ನೆಲೆಸಿಂತು 'ವಾಗ್‌ರೂಪವಮಂ' ತಾಳಿ
ಮನದ ಮಲಿನವ ತೊಳೆಯೆ ನಿಂದಳೈ ಜವದಿ ||೪||

ಸಂಗೀತ ಸರೋವರದಿ ಸರೋಜಸುಮದನುಳ
ಚನ್ನ ಶ್ರೀ ಚಲುವಿಕೆಗೆ ಮನ ಮೋಹಗೊಂಡು,
ಬಾಲಭೃಂಗವ ದಂಡು ಝೇಂಕಾರದೋಂಕಾರ
ಮಾಡುತಿದೆ ಸ್ವರ್ಗಲೋಕದ ಸುಧೆಯನುಂಡು ||೫||

ಹೇ ದೇವ, ಮಂಗಳನೆ ಪ್ರತಿದಿನದೊಳಿಂತು
ನೀಂ ದರುಶನದ ಬ್ರಹ್ಮ ಶ್ರೀ ರಸಸ್ಪರ್ಶವನು ನೀಡೆ
ಜ್ಞಾನಸಿರಿ ತೋರುತಿದೆ ಜಡ ಸುಷುಪ್ತಿಯು ಜಡಿಮ
ಜಾಗರದಿ 'ಬಾಳ್‌ವಿಜಯ' ನಿರ್ಘೋಷವನು ಮಾಡಿ ||೬||

ಒಳ ಹೊರಗು ಹುಸಿ ಭೇದ ಕಲ್ಪಿಸದ ನಿನ್ನಲ್ಲಿ
'ನಾನಳಿವು' ದಿವ್ಯತಮ ಸಾನ್ನಿಧ್ಯದಲ್ಲಿ
ಓ ದೇವ ಗುರುವರನೆ ಅದ್ವೈತವಾಯಿತ್ತೈ 'ನನ್ನ ನಿನ್ನ'
ಸತ್ವಯುತ ಸಂಗಮಕೆ ಸಿರಿ ಸಾಮೀಪ್ಯದಲ್ಲಿ ||೭||

ಹೇ ಪುಣ್ಯಾಶ್ರಮದ ಪುಣ್ಯ ಪುರುಷಾ !
ನೋಡಿಲ್ಲಿ ಶಿಷ್ಯಣುಗ ಸಂತಾನವದು ತಾನಿಂದು,
ಧನ್ಯತೆಯ ತಾಳಿಹುದು ಪ್ರತಿಕ್ಷಣವು ನೆನೆಯುವುದು
ಹರಸು ಬಾ ದರ್ಶನದ ರಸ ಶ್ರೀ ಸ್ಪರ್ಶದಿಂದ ||೮||

ನಿನ್ನ ಕರದಿಂದೆನ್ನಂ ಮುಟ್ಟೆ ಭ್ರಮರಕೀಟನ್ಯಾಯದಂತೆ
ಪರಮ ಪರಿಣಾಮವೆರಸು ನಿನ್ನ ಬಾಳಂತೆ,
ಹಿರಿಶಕ್ತಿ ಮಾನವತೆಯಮೃತ ಝುರಿಯು
ಹರಿಸು ಪೊನ್ನಾಗಿಸಿ ಹೃದಯದೊಳು ತುಂಗೆಯಂತೆ ||೯||

ಬ್ರಹ್ಮಪದ ರುದ್ರಪದ ವಿಷ್ಣುಪದ ಬೇಕಿಲ್ಲವು
ನಿನ್ನಡಿಯ ಸೇವೆಯದು ಮುಕ್ತಿ ಸೋಪಾನವು,
ಶಿವ ನೀನು ಸಿಸು ನಾನು 'ಬಸವನಂ' ಸಂತೈಸಿ
ಹರಸು ಬಾ ಗುರುದೇವ, ಕೃಪೆಯು ಮಂಗಲವು ||೧೦||

—ತಾಳಕೇರಿ ಬಸವರಾಜ

## ನುಡಿ ಹೂವ ಮುಡಿಸ ಬಂದೆ

ಪುಟ್ಟಿದನು ಸೃಷ್ಟಿಯೊಳು ಅಂಧನಾಗಿ,
ಶ್ರೇಷ್ಠ ಪಂಚಾಕ್ಷರ ನಾಮವ ಧರಿಸಿದನಾಗಿ,
ಬೆಳೆದನು ಸಂಗೀತ ಶಾರದೆಯ ಮಗನಾಗಿ,
ಪಡೆದನು ಸಂಗೀತವ ಕುಮಾರೇಶನ ಕಂದನಾಗಿ.
ದಿಟ್ಟತನದಿ ನಿಷ್ಠೆಯಿಂದ,
ಹಿಡಿದನು ಮುಕ್ತಿಯ ಮಾರ್ಗವನು;
ಸಪ್ರೇಮ ಸದ್ಭಕ್ತಿಯಿಂದ,
ಪಡೆದನು ಕುಮಾರೇಶನ ಪಾದವನು;
ಅತುಲ ಭಕ್ತಿಗೆ ಮೆಚ್ಚಿ ಅಕ್ಕರತೆಯಿಂದ.
ಕುಮಾರೇಶ ಮಾಡಿದನಾಶೀರ್ವಾದವನು.

ಆರು ಹಗೆಗಳನು ಅಳಿದು,
ಅರಿತು ನಡೆದನು ಸನ್ಮಾರ್ಗದಲಿ,
ಸಕಲ ಸದುಗುಣಗಳಿಂದ
ಕೂಡಿ ಪಡೆದ ಸಂಗೀತವನಾಕ್ಷಣದಲಿ.

ಸಮಾಜದಲ್ಲಿಯ ಸರ್ವಜನರ,
ಬಕುತಿ ಮೊಳೆಯಿತು ಇವನಲಿ,

ಕೀರ್ತಿಯವನ ಎಲ್ಲೆಡೆಗೂ
ಪಸರಿಸಿತು ದಶದಿಶೆಗಳಲಿ.

ಮಾನವನಾಗಿ ಪುಟ್ಟಿ
ಪುಣ್ಯ ಜೀವಿಯಾಗದೆ,
ಎಷ್ಟು ದಿವಸ ಬಾಳಿದರೇನು ?

ದೇಶಸೇವೆಯನೆಸಗಿ

ಈಶನನೊಲಿಸದಿಪ್ಪರೆ
ಜನ್ಮ ಸಾರ್ಥಕವೇನು ?

ಮಾನವ ಜನುಮಕೆ ಕಲಂಕವ ತಾರದೆ
ಸಮಾಜಕೆ ನೀ ತನುವ ಸವೆಸಿದೆ,
ಜನಮನರಂಜನ ಸುಗಾನ
ನಾಡಿನ ಜನಕೆಲ್ಲ ನೀ ನೀಡಿದೆ.

ಚಿರಕಾಲ ಕೇಳಲೆಂದು,
ಜನ ಬದುಕಿ ಬಾಳಲೆಂದು
ಸಂಗೀತ ಶಾರದೆಯ ಕಹಳೆಯನೂದಿದೆ.

ಪುಟ್ಟ ಕುವರನಿಗೆ ಕವಿ ಗೇಯಕಾರನಿಗೆ
ಸಂಗೀತ ಸಾಮ್ರಾಜ್ಯದ, ಕಲಾಸಗ್ಗದ
ಪಟ್ಟವ ಕಟ್ಟಿ ನೀನವಗೆ
ಲಿಂಗದೊಳು ನಿಜೈಕ್ಯವ ನೀ ಪೊಂದಿದೆ.
ಸಾದಳದಿ ನಾನು ನಿನ್ನಡಿಗೆ
ನುಡಿ ಹೂವ ಮುಡಿಸ ಬಂದೆ.

—ರುದ್ರಪ್ಪ ಮಾಸ್ತರ, ಮುತ್ತಿಗಟ್ಟಿ

# ಮೂಡಿದನು ರವಿ ಗವಯಿ

( ಷಟ್ಪದಿ )

ಕಾಡಶೆಟ್ಟಿಯ ಹಳ್ಳಿಯಲ್ಲಿಯೆ
ಕೇಡು ಇಲ್ಲದ ಜನನವನು ಹರ
ಹಾಡುಗಾರನಿಗಿತ್ತು ನೋಡಿದನು ಪಾಡಿದನು ಹರಸಿ
ನೀಡಿದನು ಶಿವಯೋಗಮಂದಿರ
ಕಾಡಿನಲಿ ಕಳುಹಿದನು ಗಾನದ
ಮೂಡಿದನು ರವಿ ಗವಯಿ ಕುವರರ ಜ್ಞಾನ ನೇತ್ರದಲಿ ||೧||

ನೋಟವಿಲ್ಲದೆ ತಿಳಿಯುವವನೆ
ಪಾಠ ಹೇಳುತ ಗಾನ ಕಲಿಸುತ
ಆಟ ಮಾಯಾ ಮಾಟಗಳ ಕತ್ತರಿಸು ಬಿತ್ತರಿಸು!
ರಾಟಿ-ಮೋಟಿಗಳಿಂದಲೀ ಜಗ-
ನೋಟ ನಡೆದಿದೆ ನುಡಿಯುತಿದೆ ರಸ-
ದೂಟ ಗಾನದ ತ್ರಾಣಕೊಡುತಿರೆ ಧರ್ಮಪಥಪಿಡಿದೆ ||೨||

ಕಡು ದಯಾನಿಧಿ ಪೊಡವಿಗಿಳಿದನು
ಮಡದಿ ಮಾಯಾ ಮೋಹವಳಿದನು
ಪಿಡಿದ ಶ್ರೀ ಗುರುವರ್ಯರಾ ಪದಪದ್ಮಸೇವೆಯನು
ಬಿಡದೆ ಭಜಿಸಿದ ಮೃಡನನೊಲಿಸಿದ
ಗುಡುಗುಡಿಸಿ ತಾನೊಸೆದು ಗಾನವ
ನುಡಿಸಿದನು ಕಂಠವನು ಕರಿನಾಡಿನಲಿ ಉಳಿಸಿದನು ||೩||

ಅಸಮನೇತ್ರ ಪಂಚಾಕ್ಷರೇಶನು
ಬಸವ ಉಸುರಿದ ಮೃದುವಚನಗಳ
ಪಸರಿಸಿದ ಹೊಸತನದ ರೂಪಿನ ಗಾನಮೇಳದಲಿ
ಯಶವ ಪಡೆಯುತ ತಾಪಕಳೆಯುತ
ಹೆಸರುವಾಸೀ ಇಳೆಯೊಳಾದನು
ಎಸಗಿದನು ಕರುಣಾಳು ಗುರುಭಕ್ತಿಯನು ಶಕ್ತಿಯನು ||೪||

ಬಲ್ಲಿದನು ಗುರು ಪಂಡಿತಾರ್ಯನು
ಬಲ್ಲವನು ಸಂಗೀತಗಾರನು
ಎಲ್ಲರೊಳು ಮನೆಮಾಡಿಕೊಂಡಿಹ ಭಕ್ತಿಪಥವಿಡಿದು
ತಲ್ಲಣಿಸದಿರು ಮನುಜ ನೀ ಮನ
ದಲ್ಲಿ ಶಾಂತಿಯ ತಾಳು ಅನುದಿನ
ನಿಲ್ಲದೇ ಹೋಗೆಂದನಾ ಗಾಯಕ ಸುಕರ್ಮದಲಿ ||೫||

ಕಾಯಕವ ಅನವರತ ಮಾಡುತ
ತಾಯಿಯೊಲು ಕನಿಕರಿಸಿ ಮಕ್ಕಳ
ಬಾಯಿಯೊಳು ಸುಧೆ ಸುರಿಸಿದನು ಹರಸಿದನು ಕರುಣದಲಿ
ನ್ಯಾಯವಾಗೀ ಜಗದೊಳಲೆದು
ಮಾಸುವಾದನು ಗಾಯಕಾಂಧನು
ಕಾಯುವನು ಈ ಗಾನ ಶಿಷ್ಯರ ಸ್ಥಾನದಲಿ ಬಂದು ||೬||

ಗದಗು ಕರೆಯಿತು ಕೀರ್ತಿಗಸಳಿಲು
ವಿಧಿಯು ಕರೆಯಿತು ಆಟಗೆಲ್ಲಲು
ಕದವ ತೆರೆಯಿತು ಸ್ವರ್ಗವಾ ಸೀಮೆಯಲಿ ಶಿವನಿಂದ
ಮದನ ಹರ ಪಂಚಾಕ್ಷರೇಶನ
ವದನವನು ನಿಟ್ಟಿಸುತ ಎಲ್ಲರು
ಸದಭಿಮಾನದಿ ಗಾನಕಲಿರೆನುತಿದ್ದನಾ ಹರನು ||೭||

ಜ್ಞಾನಿ ಬಸರೀಗಿಡದ ವೀರಪ್ರ-
ಧಾನಿ ತನ್ನಯ ನಾಮ ಉಳಿಸಲು
ದಾನವಾಗೀ ಧನವನಿತ್ತನು ಭೂಮಿ ಕೊಟ್ಟಹನು
ಗಾನಭಾಸ್ಕರರಿರುವ ಸ್ಥಳದಲಿ
ಲೀನನಾಗುತ ದಾನತೋರುತ
ದೀನರ ದರಿದ್ರರಾ ಕೀರ್ತಿಯ ಗಿಡವ ನೆಟ್ಟಿಹನು ||೮||

ಪುಣ್ಯದಿಂ ಪುದ್ಭವಿಸಿ ಮೆರೆಯುವ
ಗಣ್ಯಕಲಿ ಪಂಚಾಕ್ಷರೇಶನ
ಕಣ್ಣು ಒಳಗೊಂದಾಗಿ ಪುಣ್ಯಾಶ್ರಮವು ತೋರ್ಪುವುದು
ತನ್ನ ಅಷ್ಟೈಶ್ವರ್ಯದಿಂದಲಿ
ಬನ್ನಿರೆನ್ನುತ ಗಾನದಮೃತ
ವನ್ನವನು ಉಣಬಡಿಸಿ ತಣಿಸಿ ಕುಣಿಸುವದು ಮುದದಿ ||೯||

ಭರತಮಾತೆಯ ವರಕುಮಾರರ
ಕರುಣನಯನಾಗಿರುವ ಪಂಚಾ-
ಕ್ಷರ ಗವಾಯಿಗಳವರ ಗದ್ದುಗೆ ಗದುಗಿನಲಿ ಇಹುದು
ಹರನ ಪೂಜೆಯ ಮಾಡುವಂದದಿ
ಗುರು ಗವಾಯಿಗಳನ್ನು ಪೂಜಿಸಿ
ಕುರುಡ-ಕುಂಟರನಾಥ ಮಕ್ಕಳು ಗಾನ ಕಲಿಯುವರು ||೧೦||

ಪರಮ ಪಂಚಾಕ್ಷರರ ಕಿರಣವ
ಸುರಿಸುವದು ದಿನಕರನ ತೆರದಲಿ
ಸಿರುತ ಭಕ್ತರ ರಕ್ಷಿಪುದು ಶಿಕ್ಷಿಪುದು ಕುಜನರರ
ಸಿರಿತನದ ಬಡತನದ ಮಕ್ಕಳ
ಪೊರೆವುದಾವುದು ಭೇದವಿಲ್ಲದೆ
ಉರಗ ಭೂಷಣನಾಶ್ರಯದಿ ನಡಿಸುವನು ಕಾರ್ಯಗಳು ||೧೧||

ಶಾಸ್ತ್ರಸಂಗೀತವನು ಹೇಳುತ
ಖ್ಯಾತಿಗಾಯಕರನ್ನು ಮಾಡುತ
ಮಾತೆಯಾ ಮಮತೆಯಲಿ ಮಾನ-ಸನ್ಮಾನ ನೀಡುವದು
ನೀತಿಯಿಂದಲಿ ಸ್ತೋತ್ರಮಾಡಲು
ಜ್ಯೋತಿ ಪಂಚಾಕ್ಷರರ ಸುಖಕರ
ಗೀತ ಕಲಿಸುವದನುದಿನದಲತಿ ಹರುಷ ಚಿತ್ತದಲಿ ||೧೨||

ಹುಟ್ಟುಗುರುಡರ ಸೃಷ್ಟಿಯೊಳು ಗುರು
ಪಟ್ಟಗಟ್ಟಿದ ಪುಟ್ಟರಾಜರಿ-
ಗಷ್ಟ ದಿಕ್ಕುಗಳಲ್ಲಿ ಗಾನದ ಹೊಳೆಯ ಹರಿಸೆನುತ
ದಿಟ್ಟ ಗುರು ಪಂಚಾಕ್ಷರೇಶನು
ಶಿಷ್ಯತನದಲಿ ಶ್ರೇಷ್ಠ ಪದವಿಯ
ಕೊಟ್ಟು ಸೇರಿದನವನು ಗುರುಗಳ ಕರುಣಹೃದಯುದಲಿ ॥೧೩॥

ಕಾರಹುಣ್ಣಿವೆ ಪರ್ವದಲಿ ಗುರು
ಮಾರಹನವತಾರದಿಂದಲಿ
ಸಾರುವನು ಬೀರುವನು ಹಾಡಿನ ಮಳೆಯ ಸುರಿಸುವನು
ತೋರುವನು ಪರಿಪರಿಯ ಲೀಲೆಯ
ಮೀರುವನು ಸುರಲೋಕದವರಿಗೆ
ಹಾರಿಸುವನು ಪತಾಕಿಯನು ಜಯಭೇರಿ ಹೊಡೆಹೊಡೆದು ॥೧೪॥

—ಹನಮಂತಪ್ಪ ಅಂಬಿಗೇರ

## ಹೇ ಗಾನಸುಧಾಮಯಾ !

ಪರಮ ಗುರುವೆ, ಪಂಚಾಕ್ಷರಿ !
ವರ ಕುಮಾರನ ಕೃಪಾವಿಹಾರಿ ॥ ಪ ॥

ಸಾರ ಕಲಾಸಂಗೀತ ನಿಪುಣನೆ !
ಪೂರ ಪುಣ್ಯ ಶಿವಯೋಗಿ ವರೇಣ್ಯನೆ !
ಕರುನಾಡಿನ ಸಿರಿ–ಭಾಗ್ಯಮಂದಿರನೆ !
ಕರುಣಾಪಾರನೆ, ವಿಶ್ವವಂದ್ಯನೆ ! ॥ ೧ ॥

ಧ್ರುವಕೀರ್ತಿ ನಿನ್ನದು ಭವವಿದೂರಾ !
ಸವಿ ಗಾನ-ಸಂಗೀತ ಸಾಗರಾ !
ಪುಟ್ಟರಾಜ ಕವಿ ಯೋಗೀಂದ್ರಪ್ರಿಯಾ !
ಪುಟ್ಟ ಬಾರೋ ಹೇ ಗಾನಸುಧಾಮಯಾ ॥ ೨ ॥

—ಮಾರುತೇಶ ಮಾಂಡ್ರೆ

# ಸಂಗೀತ ವಿದ್ಯೆಯ ಸುಪ್ರಯೋಜನ

[ ದಿ. ೨೬–೧೨–೩೮ ರಂದು ಹುಬ್ಬಳ್ಳಿಯಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾ ಸಭೆಯ ಅಂಗವಾಗಿ ನೆರವೇರಿದ ವೀರಶೈವ ಸಂಗೀತ ಸಮ್ಮೇಲನದ ಅಧ್ಯಕ್ಷ ಭಾಷಣ ]

‘ ಉಭಯ ಗಾನವಿಶಾರದ’

**ಪಂ. ಪಂಚಾಕ್ಷರ ಗವಾಯಿಗಳು**

ಸಂಗೀತ ವಿದ್ಯಾಪ್ರೋತ್ಸಾಹಕರಾದ ಸಭಾಸದರೆ, ಗುರುಗಳೇ ಮತ್ತು ವಿದ್ವನ್ಮಣಿಗಳೇ,

ಅಖಿಲ ಭಾರತ ವೀರಶೈವ ಮಹಾಸಭಾ ಸಂಚಾಲಕರು ಈ ವರ್ಷದ ಮಹಾಸಮ್ಮೇಲನದ ಅಂಗವಾಗಿ ಈ ಸಂಗೀತ ಸಭೆಯನ್ನು ಕರೆದದ್ದು ಮತ್ತು ನನ್ನನ್ನೇ ಈ ಸಭೆಯ ಅಧ್ಯಕ್ಷನನ್ನಾಗಿ ಆರಿಸಿದ್ದು ಅನಿರೀಕ್ಷಿತವಾದ ಆಶ್ಚರ್ಯ ಕಾರಕ ಸಂಗತಿಗಳಾಗಿವೆ. ಸಂಗೀತ ಸಭೆಯು ಪ್ರಯೋಜನಕಾರಿಯಾಗಿದ್ದರೂ ಅದಕ್ಕೆ ತಕ್ಕ ಅಧ್ಯಕ್ಷನು ನಾನಲ್ಲವೆಂದು ಪ್ರಾಂಜಲತನದಿಂದ ಹೇಳಿಕೊಳ್ಳುವೆನು. ಆದರೂ ತಾವೆಲ್ಲರೂ ಪ್ರೇಮದಿಂದ ಈ ಜವಾಬುದಾರಿಯನ್ನು ನನ್ನ ಮೇಲೆ ಹೊರಿಸಿದ್ದಕ್ಕೆ ಉಪಾಯಗಾಣದೆ ತಮ್ಮ ಆಜ್ಞೆಯು ಅನುಲ್ಲಂಘನೀಯವೆಂದು ತಿಳಿದು ನಿರ್ವಾಹವಿಲ್ಲದೆ ಇದನ್ನು ನಿರ್ವಹಿಸಬೇಕಾಯಿತು. ಈ ಸಭೆಯ ಕಾರ್ಯ ಗಳು ಯಶಸ್ವಿಯಾಗುವದಕ್ಕೆ ತಮ್ಮೆಲ್ಲರ ಸೌಹಾರ್ದ ಸಹಕಾರಗಳನ್ನು ಕೋರಿ ಈ ಪದವಿಯನ್ನು ಪ್ರೇಮದಿಂದ ನನಗೆ ಕೊಟ್ಟ ತಮ್ಮೆಲ್ಲರ ಆಭಾರಮನ್ನಿಸಿ, ಇನ್ನು ವಿಷಯ ಪ್ರವೇಶಕ್ಕೆ ಅಣಿಯಾಗುವೆನು.

**ಬಂಧು–ಭಗಿನಿಯರೇ,**

ಕಿವಿಗಿಂಪಾಗಿ ಕೇಳಿಸುವ ಸ್ವರಭೇದಗಳಿಂದ ಚಿತ್ತರಂಜನೆ ಮಾಡು ವದೇ ಸಂಗೀತವು. ಈ ಸಂಗೀತವು ಕಿವುಡಲ್ಲದ ಜೀವನಕೋಟಿಯನ್ನೆಲ್ಲ ರಂಜನೆ ಮಾಡಬಲ್ಲದು. ಇದು ಅನಾದಿಕಾಲದಿಂದಲೂ ಬಳಿಕೆಯಲ್ಲಿರಬಹುದು. ವೇದ ಕಾಲದಲ್ಲಿ ಇದಕ್ಕೆ ಒಂದು ಕ್ರಮುವು ಪ್ರಾಪ್ತವಾಗಿ ಸಪ್ತಸ್ವರಗಳಿಂದ ಪ್ರಾರಂಭ ಮಾಡಿಕೊಂಡು ಅವುಗಳಲ್ಲಿ ಬಗೆಬಗೆಯ ಸರಲ ವಕ್ರಗತಿಗಳ ಏರಿಳಿತಗಳ ಮತ್ತು ವರ್ಜ್ಯಾವರ್ಜ್ಯಗಳ ಕೌಶಲ್ಯದಿಂದ ಹೇಳುವ ಪದ್ಧತಿಯು ರುಚಿಯನ್ನು ಹೆಚ್ಚಿಸು ವದಕ್ಕೆ ಅನುಕೂಲವಾಗುವ ಕ್ರಮುವನ್ನು ಅನುಸರಿಸಿ ಮುಂದುವರೆಯಿತು. ಹೇಳಿದ ರುಚಿಕಟ್ಟಾದ ಪದ್ಧತಿಗಳು ಮರೆತುಹೋಗಬಾರದೆಂದು ಅವುಗಳಿಗೆ ಒಂದೊಂದು ಹೆಸರನ್ನು ಕೂಡ ಕೊಡುವ ವಾಡಿಕೆಯುಂಟಾಯಿತು. ಅವೇ ರಾಗಗಳು.

ಏರಿಳಿತಗಳ ಪ್ರಮಾಣದಂತೆ ಅನ್ವರ್ಥವಾಗುವ ಹಾಗೆ ಸ್ವರಗಳಿಗೆಲ್ಲ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಹೀಗೆ ಬೇರೆ ಬೇರೆ ಏಳು ಹೆಸರುಗಳನ್ನಿಟ್ಟರು. ಈ ಹೆಸರುಗಳನ್ನಿಡದಿದ್ದರೆ ಮುಂದೆ ಸಂಗೀತ ಶಾಸ್ತ್ರವನ್ನು ವಿಸ್ತಾರಗೊಳಿಸಲಿಕ್ಕೂ, ರಾಗಾಲಾಪನೆಗಳನ್ನು ವಿಸ್ತಾರಮಾಡಲಿಕ್ಕೂ, ಅವಕಾಶವಾಗುತ್ತಿದ್ದಿಲ್ಲ. ಸ್ವರವಿಚಾರವು ಹೆಚ್ಚಾಗಿ ಶೋಧವಾಗುತ್ತ ಬಂದು ಮುಖ್ಯ ಏಳು ಸ್ವರಗಳಲ್ಲಿ ಸ್ವಲ್ಪ ಏರಿಳಿತ ಮಾಡಿದ ಸ್ವರಗಳಿಗೆ ಕೋಮಲ- ಅತಿ ಕೋಮಲ, ತೀವ್ರ, ಅತಿ ತೀವ್ರ ಎಂಬ ಸಂಕೇತಗಳನ್ನಿಟ್ಟು ಆ ಸ್ವರವರ್ಗವನ್ನು ಮತ್ತೂ ಬೆಳೆಸಲಾಯಿತು.

ಸ್ವರಗಳು ಗೊತ್ತಾದ ಮೇಲೆ ಯಾವ ಇಂಪಾದ ರಾಗವನ್ನು ಮಾಡಿದರೂ ಅದಕ್ಕೆ ಸ್ವರಪ್ರಸ್ತಾರವನ್ನು ಬರೆದು ಆ ರಾಗವು ಸೂಕ್ಷ್ಮವಾಗಿ ಯಾವ ಭಾವಗಳಿಗೆ ಪ್ರಚೋದಕವಾಗುವದೋ ಆ ಅರ್ಥಗರ್ಭಿತವಾದ ಹೆಸರಿಟ್ಟು ರಾಗಸಂಗ್ರಹವನ್ನು ಹೆಚ್ಚಿಸುವ ಕ್ರಮವು ನಡೆಯಿತು.

ಆನಂದಕ್ಕೆ ಹೇತುವಾದ ಆ ರಾಗಸ್ವರಗಳು ಹೆಚ್ಚು ಪರಿಣಾಮಕಾರಿ ಯಾಗುವದಕ್ಕೆ ಅವುಗಳಿಗೆ ಸಾಹಿತ್ಯದ ಜೊತೆಗೂಡಿಸುವ ಪರಿಪಾಠವುಂಟಾ ಯಿತು. ಆ ಸಾಹಿತ್ಯವೆಂದರೆ ಆಗಿನ ಕಾಲಕ್ಕೆ ಪ್ರಚಾರವಾಗಿದ್ದ ವೇದ ಸಾಹಿತ್ಯ. ಆ ವೇದ ಋಚೆಗಳನ್ನೇ ರಾಗಬದ್ಧವಾಗಿ ಹೇಳಿ ಅದಕ್ಕೆ ಸಾಮ ವೇದ ಪಾಠಕ್ರಮವೆಂದು ಹೆಸರಿಡಲಾಯಿತು. ಆ ಸಾಮ ಪದ್ಧತಿಯಿಂದ ಹೇಳು ವದಕ್ಕೆ ಅರ್ಹರಾದವರು ಸ್ವಾಭಾವಿಕವಾಗಿ ಸವಿ ಸ್ವರವಿದ್ದವರಾಗಿದ್ದರು. ಅವರು ತಾವು ಸ್ವತಃ ಆತ್ಮಾನಂದವನ್ನು ಹೊಂದುವಂತೆ ಶ್ರೋತೃಗಣವನ್ನು ಸಹ ಆನಂದಪರವಶರನ್ನು ಮಾಡುತ್ತ ಪರಮ ಲೋಕಪ್ರಿಯರಾದರು.

ಏಕಕಾಲಕ್ಕೆ ಸಕಲ ಋಷಿಜನ ಮನಾನಂದಕರವಾದ ಈ ಸಾಮ ಪದ್ಧತಿಯು ಬಹು ಸಲಭವಾಗಿ ಒಳ್ಳೇ ಸುಲಲಿತವಾಗಿ ಆತ್ಮಾನಂದಕ್ಕೆ ಕಾರಣ ವಾದ ಮೂಲಕ ಇದೇ ಮಾರ್ಗದಿಂದ ದೇವರನ್ನು ಒಲಿಸಿಕೊಳ್ಳುವ ಕ್ರಮವು ಮುಂದೆ ಕೆಲಕಾಲದ ಮೇಲೆ ಭಕ್ತಿ ಮಾರ್ಗಕ್ಕೆ ಪೋಷಕವಾಯಿತು. ಇದೇ ಕಾರಣದಿಂದ ಶ್ರೀ ನಿಜಗುಣ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಘನಮಠಾರ್ಯರು, ಬಾಲಲೀಲಾ ಮಹಾಂತಸ್ವಾಮಿಗಳು ಇನ್ನೂ ಅನೇಕ ವೀರ ಶೈವ ಕವಿಪುಂಗವರೂ, ವೈಷ್ಣವ ಮತದ ದಾಸಕೂಟ ಸಾಂಪ್ರದಾಯದವರೂ ತಮ್ಮ ಭಕ್ತಿ, ಜ್ಞಾನ, ವೈರಾಗ್ಯ ಸಂಬಂಧದ ವಿಚಾರಗಳನ್ನು ಜನಗಳಲ್ಲಿ ಪ್ರಚಾರ

ಪಡಿಸಲಿಕ್ಕೆ ಈ ಸಂಗೀತ ಮಾರ್ಗವನ್ನೇ ಅವಲಂಬಿಸಿ ಅನೇಕ ರಾಗ ರಚನೆಗಳಲ್ಲಿ ಪದ-ಪದ್ಯಗಳನ್ನು ರಚಿಸಿ ಜನಮನಾಕರ್ಷಣ ಮಾಡಿ ತಮ್ಮ ಕಾರ್ಯವನ್ನು ಸುಲಭವಾಗಿ ಯಶಸ್ವಿಯನ್ನಾಗಿ ಮಾಡಿದರು.

ಜೀವ ವಿಕಾಸಕ್ಕೆ ಪೋಷಕವಾದ ಈ ಸಂಗೀತ ಕಲೆಯನ್ನು ಕೆಲವರು ನಿಷ್ಪ್ರಯೋಜಕವಾದದ್ದೆಂದು ಹೇಳುವರು. ಅದು ಸತ್ಯದ ಅಪಲಾಪ. ಈ ಜನರು ಕೋಕಿಲೆಗಳ ಕೂಜನ, ನವಿಲುಗಳ ಕೇಕೆ, ಮಧುಕರಗಳ ಗುಂಜಾರವ, ಚಂಡೋಲ ಪಕ್ಷಿಗಳ ಮಂಜುಲ ರಾಗಗಳನ್ನು ಆಸ್ಥೆಯಿಂದ ಕೇಳದಿರುವರೆ? "ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣಿಃ" ಎಂಬ ಸಂಸ್ಕೃತ ಸುಭಾಷಿತೋಕ್ತಿಯಂತೆ ಕೇವಲ ಸುಜ್ಞಾನಿಯಾದ ಮನುಷ್ಯನೇ ಏಕೆ ಇನ್ನೂ ಇಂದ್ರಿಯ ವಿಕಸನೆಯನ್ನು ಪಡೆಯದ ಅಜ್ಞಾನಿಗಳಾದ ಶಿಶುಗಳು ಸಹ ಗಾನ ಸ್ವರವನ್ನು ಕೇಳಿ ಅಳುವನ್ನು ಬಿಟ್ಟು ಆನಂದಿತರಾಗಿ ಆಡುವರು. ಮಾನವೇತರ ಪ್ರಾಣಿಗಳಲ್ಲಿ ಸಹ ಸಂಗೀತ ಪ್ರೇಮವಿದೆ ಎಂಬುದು ಸೂಕ್ಷ್ಮ ನಿರೀಕ್ಷಣೆ ಮಾಡಿದ ಪ್ರತಿಯೊಬ್ಬನಿಗೆ ಮನದಟ್ಟಾಗಬಹುದು. ತಿಂಗಳ ಬೆಳಕಿನಲ್ಲಿ ನಾಯಿಗಳೆಲ್ಲ ತಮಗೆ ಸಾಧ್ಯವಾದ ಸ್ವರತೆಗೆದು ಕೂಗುವದುಂಟು; ಕೇಳಿದ ನಾಯಿಗಳೆಲ್ಲ ಆ ಸ್ವರಕ್ಕೆ ಸ್ವರ ಕಲಿಸಿ ಸಹಕರಿಸುವದೂ ಉಂಟು. ಪಂಜರದೊಳಗಿನ ಗಿಳಿಗಳೂ ಚಂಡೋಲ ಪಕ್ಷಿಗಳೂ ಹೊಟ್ಟೆ ತುಂಬಿ ಆನಂದವಾಗಿ ವಿರಾಮವಾಗಿದ್ದಾಗ ಬಗೆಬಗೆಯ ಮಧುರ ಮಂಜುಲ ಸ್ವರ ತೆಗೆದು ಹಾಡುವದನ್ನು ಬಹು ಜನರು ಕೇಳಿರಬಹುದು.

ಇನ್ನು ಬಗೆಬಗೆಯ ವಿವಿಧ ಸ್ವರಗಳನ್ನು ತೆಗೆಯಲಸಮರ್ಥವಾದ ಕಂಠಗಳುಳ್ಳ ಜಿಂಕೆ, ಮೇಕೆ, ಮೊಲ, ದನಗಳೇ ಮೊದಲಾದವುಗಳು ಮಂಜುಲ ನಾದವನ್ನು ಕೇಳಿ ಮೋದಪಡುವದನ್ನೂ ಬಹು ಜನರು ನೋಡಿರ ಬಹುದು. ಸುಸ್ವರಕ್ಕೆ ಸರ್ಪವೂ ಸಹ ತಲೆದೂಗುವದಂತೆ.

ಅಂತೂ ಜೇಸರಪಟ್ಟ ಜೀವಿಗಳನ್ನು ತಣಿಸುವದಕ್ಕೆ ಸಂಗೀತವು ಒಂದು ಬಲವಾದ ಸಾಧನವಾಗಿರುವದೆಂಬುದನ್ನು ಕಂಡು ಹಿಡಿದೇ ಇತ್ತೀಚಿಗಿನ ಕೆಲ ಶೋಧಕರಾದ ಡಾಕ್ಟರ ಜನರು ರೋಗಿಗಳನ್ನು ತೀವ್ರ ಗುಣ ಪಡಿಸುವದಕ್ಕೆ ಅವರಿಗೆ ಗ್ರಾಮೊಫೋನ, ರೆಡಿಯೋಗಳ ಮೂಲಕ ಸಂಗೀತವನ್ನು ಕೇಳಿಸುವ ಕ್ರಮವನ್ನು ಪ್ರಾರಂಭಮಾಡಹತ್ತಿದ್ದಾರೆ. ಈ ಕ್ರಮಕ್ಕೆ ಇಂಗ್ಲೀಷಿನಲ್ಲಿ 'ನೇಚರ ರೆಮಿಡಿ' ಅನ್ನುವರು. ನಾವು ಇದಕ್ಕೆ 'ನಿಸರ್ಗ ಚಿಕಿತ್ಸೆ' ಎಂದೆನ್ನುವಾ. ಬೇನೆಯಿಂದ ನರಳುವವರ ಮನವು ಸಂಗೀತದಕಡೆಗೆ ವೇಧಿಸಿದಕೂಡಲೇ ಅವರಿಗೆ

ಕೆಲ ಸಮಯ ಆ ಬೇನೆಯ ಮರವಾಗುವದು. ಹಾಗೆಯೇ ಬೇನೆಯನ್ನು ಮರೆಯಿಸುವ ಕಾರ್ಯಕ್ರಮವನ್ನು ಹೆಚ್ಚಿಸಿ, ರಕ್ತದೊಳಗಣ ತಾರಕ ಜಂತು ಗಳನ್ನು ಬೆಳೆಯಿಸುವದಕ್ಕೆ ಅವಕಾಶವನ್ನು ಕಲ್ಪಿಸಿಕೊಡುತ್ತ ಹೋದರೆ ಕ್ಷಿಪ್ರದಲ್ಲಿ ರೋಗ ನಿವಾರಣೆಯಾಗುವದು.

ಸಂಗೀತವು ಹಸಿವು ತೃಷೆಗಳನ್ನು ಸಹ ಮರೆಯಿಸುವದು. ಇದು ಸರ್ವಾನುಭವದ ಮಾತು.

ಹೀಗೆ ತೀವ್ರ ಆತ್ಮಾನಂದಕ್ಕೆ ಕಾರಣವಾದ ಈ ಸಂಗೀತದ ಅತರ್ಕ್ಯ ಪ್ರಯೋಜನವನ್ನು ಕಂಡು ಹಿಡಿದೇ ಋಷಿಗಳು ಇದರ ಸಲುವಾಗಿ ಒಂದು ಸ್ವತಂತ್ರ ವೇದವನ್ನೇ ನಿರ್ಮಿಸಿ ಅದಕ್ಕೆ ಸಾಮವೇದವೆಂದು ಕರೆದರು. ಇದೂ ಅಲ್ಲದೆ ಗಾಂಧರ್ವ ವೇದವೆಂಬದೊಂದು ಉಪ ವೇದವೂ ಸಹ ಉಂಟು. ಏಕಸಮಯದಾನಕ್ಷೇದವಲ್ಲಿ ಅನೇಕ ಜನರನ್ನು ಆನಂದದಲ್ಲಿ ಮೈಮರೆಯು ವಂತೆ ಮಾಡುವ ಸಂಗೀತಗಾರನು ಸರ್ವಾಂತರ್ಯಾಮಿಯಾದ ಆ ಪರಶಿವನನ್ನು ತನ್ನ ಆನಂದಮಯವಾದ ಸಂಗೀತದಿಂದ ಪ್ರಸನ್ನೀಕರಿಸಿಕೊಳ್ಳಲಾರನೆ? ಶಿವನಿಗೆ ಸಂಗೀತವು ಪ್ರಿಯವಾದದ್ದೆಂಬುದರ ದ್ಯೋತಕವಾಗಿ ಅವನನ್ನು ಸಾಮಗಾನಲೋ ಲನೆಂದು ಕೊಂಡಾಡಿರುವರು. ಕಂಬಲಾಶ್ವತರರು ಆತನ ಕರ್ಣದಲ್ಲಿ ಸದಾ ಸಂಗೀತ ಸುಧೆಯನ್ನು ಸುರಿಸುತ್ತಿರುವದು ಸರ್ವಶ್ರುತವಾಗಿರುವದು

ಬರ ಬರುತ್ತ ರಾಗಾಲಾಪನೆಗೆ ತಾಳದ ಜೊತೆ ಸಿಕ್ಕು ಪದಗಳ ರೂಪವನ್ನು ತಾಳಿ, ಆ ಸಂಗೀತ ವಿದ್ಯೆಯು ಮತ್ತೂ ಕಳೆ ಕಟ್ಟಿ ಹೆಚ್ಚು ಪ್ರಚೋದಕವಾಯಿತು. ಸಂಗೀತಕ್ಕೆ ತಾಳಗಳನ್ನು ಋಷಿಗಳು ಬಹುಶಃ ಪಕ್ಷಿ ಗಳ ರಾಗಾಲಾಪನೆಗಳ ಮತ್ತೂ ಕ್ರಮಬದ್ಧವಾದ ಆವರ್ತನೆಗಳ ಕ್ರಮವನ್ನು ನಿರೀಕ್ಷಿಸಿ ಕಂಡುಹಿಡಿದಿರಬಹುದು. ವಿಚಾರಮಾಡಿರಿ– ಬೆಳವಪಕ್ಷಿಯು ತನ್ನ ಸ್ವರ ದಲ್ಲಿ ಏರಿಳಿತಗಳನ್ನು ಇಟ್ಟುಕೊಳ್ಳದೆ ಬರೀ ಒಂದೇ ತರದ ಧ್ವನಿಯಲ್ಲಿ ಕೂ– ಕೂ–ಕೂ ಎನ್ನುತ್ತ ಹೋಗಿದ್ದರೆ ಅದು ಅಷ್ಟು ಆಕರ್ಷಕವಾಗುತ್ತಿರಲಿಲ್ಲ; ಸ್ವರದಲ್ಲಿ ಏರಿಳಿತಗಳನ್ನಿಟ್ಟದೆ. ಆವರ್ತನೆಗಳು ಸರಿಯಾಗಿ ಕುಕ್ಕೂ–ಉಕ್ಕೂ.... ಕುಕ್ಕೂ ...–ಉಕ್ಕೂ ಅಂದರೆ ಪ್ರಥಮ ಕು ವ್ಯಂಜನ ನಂತರ ಪ್ಲುತ ಕೊನೆಗೆ ದೀರ್ಘ ಕೂ ಹೀಗೆ ಆವರ್ತನೆಗಳಿವೆ. ಅಂತೂ ಅದು ತನ್ನ ಆರು ಮಾತ್ರೆಗಳ ವೃತ್ತವನ್ನೇ ಕಲ್ಪಿಸಿಕೊಂಡು ಹಾಡುವದು. ಅಂತೆಯೇ ಅದರ ಸಂಗೀತವು ಆಕರ್ಷಕವಾಗಿದೆ. ಒಂದೊಂದು ಸಲ ಮಾನವ ಬಾಲಕರನ್ನೂ ಅದು ತನ್ನ ಕೂಡ ಸಹಕರಿಸುವಂತೆ ಮಾಡುವದು. ಬೆಳವ ಕೂಗುವಾಗ ಅದರ ಸ್ವರದ

ಲ್ಲಿಯೇ ಚಿಕ್ಕ ಮಕ್ಕಳು ಕುಕ್ಕೂ....ಕ್ಕೂ.... ಗೂಳ ಚೀಟ್ಟೆ... ಎಲ್ಲೀಟ್ಟೆ.... ಹಳ್ಳ ದಾಗ.... ತೇಲೀಟ್ಟೆ" ಎಂದು ಮುಂತಾಗಿ ಹೇಳುವದನ್ನು ತಾವೆಲ್ಲರೂ ಬಹು ಸಾರೆ ಕೇಳಿರಬಹುದು.

ಇನ್ನೂ ಕೆಲವು ಪಕ್ಷಿಗಳು ಎಳೇಳು-ಎಂಟೆಂಟು ಸ್ಥಾಯಿಗಳ ವೃತ್ತ ಗಳನ್ನು ಕಲ್ಪಿಸಿ ಅದಿ ತಾಳದಲ್ಲಿ ಹಾಡುವದೂ ಉಂಟು. ಅದರ ಸಂಗೀತಕ್ಕೆ ಸಾಹಿತ್ಯವನ್ನು ಕಲ್ಪಿಸಿಕೊಂಡು ಹಿಂದುಗಳು "ರಾಂ ಲಚಮನ್ ದಶರಥ್" ಎಂದೂ ಮಹಮ್ಮದೀಯ ಬಂಧುಗಳು "ಸುಬಾನ್ ತೇರೀ ಕುದರತ್" ಎಂದೂ ಹೇಳು ವರು.

ಅಂತೂ ಚಿತ್ತಾಕರ್ಷಕವಾದ ಪಕ್ಷಿಗಳ ಕ್ರಮಬದ್ಧವಾದ ಸಂಗೀತವೇ ಮಾನವನ ಸಂಗೀತಕ್ಕೆ ತಾಳವನ್ನು ಹೇಳಿ ಕೊಟ್ಟಿರಬಹುದು.

ಈ ಪ್ರಕಾರ ಕ್ರಮಶಃ ಬೆಳೆದು ಬಂದು ಕ್ರಮಬದ್ಧವಾದ ಶಾಸ್ತ್ರ ಸ್ವರೂಪವನ್ನು ಹೊಂದಿ ಮಾನವನಿಗೆ ಮನರಂಜನೆಯ ಜೊತೆಗೆ ಮಹತ್ ಸಾಧನೆ ಯನ್ನೂ ಮಾಡಿಕೊಡುವ ಈ ಕಲೆಯು ಈಗಲೂ ಬೆಳೆಯುತ್ತಲೇ ಇದೆ.

ಪರಮಾತ್ಮನನ್ನು ಒಲಿಸಿಕೊಳ್ಳುವ ಶಕ್ತಿಯುಳ್ಳಂಥ, ಚಿತ್ತಾಕರ್ಷಕ-ವಾದಂಥ, ಪರಮ ಪವಿತ್ರವಾದಂಥ, ಶ್ರೇಷ್ಠವಾದ ಈ ಕಲೆಯು ಅಜ್ಞಾನಿಗಳ, ಅಯೋಗ್ಯರ ವಶವಾಗಿ; ಪ್ರಪಂಚದಲ್ಲಿ ಅನೇಕಾನೇಕ ಅನರ್ಥಗಳನ್ನು ಉಂಟು ಮಾಡಿದೆ. ಅದು ಕಾರಣವೇ " ಕ್ವಚಿದ್ಗಾಯಕಃ ಶುಚಿಃ " ಎಂಬ ನಾಣ್ನುಡಿ ಯುಂಟಾಗಲಿಕ್ಕೆ ಕಾರಣವಾಯಿತು. ಪರಮ ಪ್ರಯೋಜನಕಾರಿಯಾದ ಬೆಂಕಿ ಯಿಂದ ವಿಧವಿಧದ ಪಕ್ವಾನ್ನಗಳನ್ನೂ ಮಾಡಿಕೊಳ್ಳಬಹುದು. ಪ್ರಮಾಣಬದ್ಧವಾದ ಶಾಖವನ್ನು ಕೊಟ್ಟು, ಅನೇಕಾನೇಕ ರೋಗಗಳನ್ನು ನಿವಾರಿಸಬಹುದು. ಯಜ್ಞ-ಯಾಗಗಳಲ್ಲಿ ಅದಕ್ಕೆತಕ್ಕ ಇಂಧನಗಳನ್ನು ಒದಗಿಸಿಕೊಟ್ಟು,ಅದರಿಂದ ಅನೇಕಸಾಂಕ್ರ ಮಿಕ ರೋಗಗಳನ್ನೂ ನಾಶಮಾಡಬಹುದು. ಕಾಲ ಕಾಲಕ್ಕೆ ಮಳೆ ಬರುವಂತೆ ಮಾಡಿ ಲೋಕದಲ್ಲಿ ಸುಭಿಕ್ಷ, ಸುಶಾಂತಿಗಳನ್ನುಂಟುಮಾಡಲೂ ಬಹುದು. ಆದರೆ ಅದೇ ಅಗ್ನಿಯು ಮೂರ್ಖರ ಕೈಯಲ್ಲಿ ಸಿಕ್ಕು, ಮಂದಿಯ ಮನೆ, ಬಣಿವೆಗಳನ್ನು ಸುಡ-ಲಿಕ್ಕೂ ಪ್ರಸಂಗವಶಾತ್ ತಮ್ಮ ಮೈಯನ್ನಾದರೂ ಸುಟ್ಟುಕೊಳ್ಳಲಿಕ್ಕೂ ಕಾರಣ ವಾಗಬಹುದು. ಏವಂಚ, ಯಾವದೇ ಶಕ್ತಿಯಾಗಲಿ ಎಂಥ ವ್ಯಕ್ತಿಗಳ ಕೈಯಲ್ಲಿ ಸಿಗುವದೋ ಆ ವ್ಯಕ್ತಿಗಳ ಅಧಿಕಾರ ಅನಧಿಕಾರಗಳ ತಾರತಮ್ಯಪರತ್ವದಿಂದ ಸುಪರಿ ಣಾಮವನ್ನಾಗಲಿ ದುಷ್ಪರಿಣಾಮವನ್ನಾಗಲಿ ಉಂಟುಮಾಡುವದೆಂಬುದರಲ್ಲಿ ಸಂದೇ

ಹವಿಲ್ಲ. ಅದರಂತೆ ಪರಶಿವನ ಒಲುಮೆಗೆ ಮಿಕ್ಕ ಸಾಧನೆಗಳಿಗಿಂತ ಈ ಸಂಗೀತ ಕಲೆಯು ಹೇಗೆ ತೀವ್ರ ಫಲಪ್ರದವಾದ ಸಾಧನವಾಗಿರುವದೋ ಹಾಗೆಯೇ ಇದರ ದುರುಪಯೋಗ ಮಾಡಿಕೊಳ್ಳುವ ಮೂರ್ಖರನ್ನು ಅತಿ ತೀವ್ರವಾಗಿಯೇ ಮಣ್ಣು-ಪಾಲು ಮಾಡುವ ಮಾರಿಯಾಗಿದೆ. ಅದು ಕಾರಣ ಈ ಸಂಗೀತ ಕಲಾ ಜೀವಿಗಳಾದ ನನ್ನ ಬಂಧುಗಳಿಗೆ ಇದರ ದುರುಪಯೋಗ ಮಾಡಿಕೊಳ್ಳದಂತೆ ಯಾವಾಗಲೂ ಎಚ್ಚರದಿಂದಿರಬೇಕೆಂದು ಅತ್ಯಂತ ಕಳಕಳಿಯಿಂದ ಅಂತಃಕರಣಪೂರ್ವಕವಾಗಿ ಹೇಳಿಕೊಳ್ಳುವೆನು.

ಪವಿತ್ರಾಚರಣೆಯುಳ್ಳ ಸಂಗೀತಜ್ಞರು ತಮ್ಮ ವಿದ್ಯಾಬಲದಿಂದ ಪರಶಿವನನ್ನು ತಮ್ಮ ಸಖನನ್ನಾಗಿ ಮಾಡಿಕೊಂಡು ಕುಣಿಸಿಬಿಟ್ಟಿದ್ದಾರೆ. ಅಪವಿತ್ರರು ಅನೇಕ ರೋಗಗಳನ್ನು ಕರಕೊಂಡು ಇಹದಲ್ಲಿಯೇ ಯಮಯಾತನೆಗಳನ್ನನುಭವಿಸಿ, ಆ ರೋಗಗಳ ಜೊತೆಯಲ್ಲಿ ಕುದಿಕುದಿದು ದುಃಖಪಟ್ಟು ಕೊನೆಗೆ ಅಕಾಲಮೃತ್ಯುವಿಗೆ ತುತ್ತಾಗಿದ್ದಾರೆ. ಹೀಗಿದೆ ಈ ಸಂಗೀತ ವಿದ್ಯೆಯ ಸಹವಾಸ. ಇದರಲ್ಲಿ ಸಂಗೀತಕಲಾ ಜೀವಿಗಳಾದ ನನ್ನ ಸಹೋದರರು ಯಾವ ಮಾರ್ಗವನ್ನು ಅನು-ಸರಿಸಬೇಕೆಂಬುದನ್ನು ಆಲೋಚಿಸಬೇಕು. ಅಸ್ತು;

ಸದ್ಯಕ್ಕೆ ನಮ್ಮೀ ಭರತಖಂಡದಲ್ಲಿ ಪ್ರಚಲಿತವಿರುವ ಸಂಗೀತದಲ್ಲಿ ದಕ್ಷಿಣಾದಿ ಮತ್ತು ಹಿಂದುಸ್ಥಾನಿ ಹೀಗೆ ಎರಡು ಬಗೆಗಳಿವೆ. ಸುಸಂಗತವಾಗಿ ಹೇಳಿದರೆ ಎರಡೂ ಸುಶ್ರಾವ್ಯಗಳೇ. ಒಂದಕ್ಕೆ ಒಂದು ಬಗೆಯ ರುಚಿ ಇದ್ದರೆ ಮತ್ತೊಂದಕ್ಕೆ ಮತ್ತೊಂದು ವಿವಿಧ ರುಚಿಯುಂಟು. ಮಾತ್ರ ಕೇಳತಕ್ಕವರು ನಿಷ್ಪಕ್ಷಪಾತಿಗಳಾದ ರಸಿಕರಾಗಿರತಕ್ಕದ್ದು. ಧೈರ್ಯವಿದ್ದ ಸಾಹಸಿಯಾದ ಸಾಧಕನು ಎರಡೂ ವಿಧದ ಸಂಗೀತ ಪದ್ಧತಿಗಳನ್ನು ಸಾಧಿಸಿಕೊಳ್ಳತಕ್ಕದ್ದೆಂದು ನಮ್ಮ ಅಭಿಪ್ರಾಯ. ಅದರಲ್ಲಿ ನಮ್ಮ ವೀರಶೈವ ಸಮಾಜದ ಸಂಗೀತಗಾರರಂತೂ ಸವ್ಯ-ಸಾಚಿಗಳಾಗಿರಲೇ ಬೇಕು. ಅಂದರೆ ಎರಡೂ ಬಗೆಯ ಸಂಗೀತಗಳನ್ನು ಕರತಲಾ-ಮಲಕ ಮಾಡಿಕೊಂಡಿರಬೇಕು. ಯಾಕಂದರೆ, ಅವರ ಸಂಗೀತ ಕಲೆಯ ಉದ್ದೇಶವು ಮನರಂಜನೆಯ ಮಟ್ಟಿಗೆ ಮಾತ್ರ ಉಪಯೋಗಮಾಡಿಕೊಳ್ಳುವದಿಂದೆ ಮತಪ್ರಚಾರ ಕಾರ್ಯದಲ್ಲಿಯೂ ಅವಶ್ಯವಾಗಿ ಅದರ ಸಹಾಯವನ್ನು ತೆಗೆದುಕೊಳ್ಳಬೇಕಾಗಿದೆ. ನಮ್ಮ ಧರ್ಮವು ಪ್ರಚಾರಾರ್ಹವಾಗಿದೆ. ವಿಶ್ವಬಂಧುತ್ವವನ್ನು ಹೆಚ್ಚುಗೊಳಿಸುವಂಥ ಉದಾತ್ತ ತತ್ವಗಳನ್ನೊಳಗೊಂಡದ್ದಾಗಿದೆ. ವಿಶೇಷವೇನು! ಮಾನವರೆಲ್ಲ ಒಂದೇ ಸಾತ್ವಿಕವಾದ ಅಹಿಂಸಾಮಯ ವಾತಾವರಣದಲ್ಲಿ ತಂದುಬಿಡುವಂತಹದಾಗಿದೆ. ಇಂತಹ ಧರ್ಮದೂತರಾಗುವ ನಮ್ಮೊಳಗಿನ ಕೆಲವರು ಪುರಾಣಿಕರಾಗ

ಬಹುದು; ಕೆಲವರು ಕೀರ್ತನಕಾರರಾಗಬಹುದು. ಇನ್ನೂ ಹಲವರು ನಮ್ಮ ಪುರಾತನರು ತಾವು ಆಧ್ಯಾತ್ಮ ಮಾರ್ಗದಲ್ಲಿ ಮುಂದುವರಿಯುತ್ತ ಸಾಗಿರುವಾಗ ತಮಗೆ ಬಂದ ಅನುಭವಗಳನ್ನು ಅರ್ಥಪೂರ್ಣವಾಗಿ ಅಮೃತಮಯವಾಗಿ ಹೆಣೆದು ಆಡಿದ ವಚನಗಳನ್ನೂ, ಅವರು ಕಟ್ಟಿಹಾಡಿ ಶಿವನನ್ನೊಲಿಸಿಕೊಂಡ ಪದಗಳನ್ನೂ ಗಮಕವಾಗಿ ಕಿವಿಗೆ ಇಂಪಾಗುವಂತೆ ಹಾಡುವವರಾಗಬಹುದು. ಇವರೆಲ್ಲರೂ ಎರಡೂ ಬಗೆಯ ಗಾಯನವನ್ನು ಕಲಿಯಬೇಕೆಂಬುದಷ್ಟೇ ಅಲ್ಲ; ಈಗ ನಮ್ಮ ಹಿಂದುಸ್ತಾನದ ಬಹು ಭಾಗದಲ್ಲಿ ಪ್ರಚಲಿತವಾಗಿರುವ ನಮ್ಮ ರಾಷ್ಟ್ರಭಾಷೆಯಾದ ಹಿಂದಿಯನ್ನೂ ಅದರ ಜೊತೆಯಲ್ಲಿಯೇ ಅವಶ್ಯವಾಗಿ ಕಲಿಯಬೇಕೆಂದು ನಮ್ಮ ಆಶೆಯಿರುತ್ತದೆ. ಉತ್ತರ ಹಿಂದುಸ್ತಾನದಲ್ಲಿ ಸಂಚರಿಸುವಾಗ ನಮ್ಮ ವೀರಶೈವ ಕೀರ್ತನಕಾರರು ಕನ್ನಡ ವಚನಗಳನ್ನು ಸ್ವಾರಸ್ಯಪೂರ್ಣವಾದ ಹಿಂದುಸ್ತಾನಿ ರಾಗಗಳಲ್ಲಿ ಹಾಡಿ ಅದರ ಅರ್ಥವನ್ನು ಹಿಂದೀ ಭಾಷೆಯಲ್ಲಿಯೇ ಹೇಳಿದರೆ ಎಷ್ಟು ಸ್ವಾರಸ್ಯವಾದೀತು. ನಾವು ಸವಿಯುವ ಅಮೃತವನ್ನೇ ನಮ್ಮ ನೆರೆಯ ಪ್ರಾಂತದ ಭಾರತ ಬಂಧುಗಳಿಗುಣಿಸಿದ ಶ್ರೇಯವೂ ನಮಗೆ ಬರಲಾರದೇ ? ಅದೇ ಪ್ರಕಾರ ದಕ್ಷಿಣದೇಶಕ್ಕಿಳಿದ ಸಂದರ್ಭದಲ್ಲಿ ಸುಶ್ರಾವ್ಯವಾದ ದಕ್ಷಿಣಾದಿಯಲ್ಲಿ ಪದ-ಪದ್ಯ-ವಚನಗಳನ್ನು ಹೇಳಿ ಅದರ ಅರ್ಥವನ್ನು ಕರ್ನಾಟಕದ ಮಟ್ಟಿಗೆ ಮಾತ್ರ ಕನ್ನಡದಲ್ಲಿ, ಉಳಿದ ಪ್ರಾಂತಗಳಲ್ಲಿ ರಾಷ್ಟ್ರಭಾಷೆಯಾದ ಹಿಂದಿಯಲ್ಲಿ ಪ್ರಚಾರ ಮಾಡಿದರೆ ಆ ಸೇವೆಯು ಶಿವನಿಗೆ ಸಲ್ಲಲಾರದೇ ? ಇದಕ್ಕೂ ಇನ್ನೂ ಹೆಚ್ಚಿನ ಸಾಹಸಿಗಳಾದ ಸುಕಂಠ ತ್ರಾಣವುಳ್ಳ ತರುಣರು ಜಗದ್ವ್ಯಾಪಿಯಾದ ಇಂಗ್ಲೀಷ ಭಾಷೆಯಲ್ಲಿ ಸಹ ಪ್ರಭುತ್ವವನ್ನು ಸಂಪಾದಿಸಿ ಇಡೀ ಭೂಮಂಡಲದಲ್ಲೆಲ್ಲ ತಮ್ಮ ಪ್ರವಚನಗಳನ್ನು ನಡೆಸುವ ಶಕ್ತಿಸಂಪನ್ನರಾಗಿ ಕೀರ್ತನ ಪರಿಮುಖವಾಗಿಯೇ ತಮ್ಮ ಪ್ರಚಾರ ಕಾರ್ಯವನ್ನು ಕೈಕೊಳ್ಳಬೇಕು.

ಕೀರ್ತನ ಪರಿಮುಖನಾಗಿ ಪ್ರಚಾರ ಮಾಡಬೇಕೆಂದು ಒತ್ತಿಹೇಳಿದ ಮಾತಿನ ಆಶಯವಿಷ್ಟೇ- ಪ್ರವಚನಗಳನ್ನು ಇಂಗ್ಲೀಷಿನಲ್ಲಿ ನಡಿಸಿದರೂ ಬಸವಾದಿ ಪುರಾತನರ ವಚನಗಳನ್ನೂ, ಪದ ಪದ್ಯಗಳನ್ನೂ ಕನ್ನಡ ಭಾಷೆಯಲ್ಲಿಯೇ ದಿವ್ಯವಾಗಿ ಹಿಂದೀ ಇಲ್ಲವೆ ದಕ್ಷಿಣಾದಿ ರಾಗಗಳಲ್ಲಿ ಸಾಗ್ರ ಸಂಗೀತವಾಗಿ ಹೇಳಿದರೆ ಇದೊಂದು ಹೊಸ ರುಚಿಯೆಂದು ಆಸ್ಥೆಯಿಂದ ಕೇಳುವರು. ಮುಕ್ಕ ವೇದ ಶಾಸ್ತ್ರಾದಿ ಆಧಾರಗಳನ್ನೆಲ್ಲ ಸಂಸ್ಕೃತದಲ್ಲಿ ಹೇಳಬಹುದು. ಹೀಗೆ ಕೇವಲ ನಿರಹಂಕಾರ ವೃತ್ತಿಯಿಂದ ನಾವು ನಮ್ಮ ಪರಮ ಶ್ರೇಷ್ಠವಾದ ಕಾಲೋಚಿತವಾದ ವೀರಶೈವ ಮತತತ್ವಗಳನ್ನು ಸೇವಾಧರ್ಮವೆಂಬ ಭಾವನೆಯಿಂದ ಪ್ರಸಾರ ಮಾಡುತ್ತ ಹೋದರೆ ಜಗವೆಲ್ಲ ನಮ್ಮ ಬಂಧುಗಳಿಂದಲೇ ತುಂಬಿಹೋದೀತು. ಜೊತೆಯಲ್ಲಿಯೇ

ನಮ್ಮ ಭಾಷೆಯ ಚಂದ, ನಮ್ಮ ಪದ-ಪದ್ಯಗಳ ಅಂದ, ಮೇಲೆ ನಮ್ಮ ಸಂಗೀತದ ಸ್ವಾರಸ್ಯದ ಸವಿ ಇವುಗಳ ಪರಿಚಯವನ್ನು ನಮ್ಮ ಮಾನವ ಬಂಧುಗಳಿಗೆಲ್ಲ ಮಾಡಿಕೊಟ್ಟ ಶ್ರೇಯಸ್ಸು ಬಂದೀತು. ಅಂದೇ ಈ ಮಹಾಸಭೆಯ ಸದುದ್ದೇಶವು ಸಂಪೂರ್ಣವಾಗಿ ನೆರವೇರೀತು.

**ಬಂಧುಗಳೇ,**

ನಾವು ಧರ್ಮಋಣವನ್ನು ಸ್ವಲ್ಪಾದರೂ ತೀರಿಸುವದಿದ್ದರೆ ನಮ್ಮ ಸಂಗೀತ ಕಲಾಜೀವಿಗಳು ಈ ಮೊದಲು ನಾವು ವಿವರಿಸಿದ ವಿಚಾರಗಳನ್ನು ಆಚಾರದಲ್ಲಿ ತರಲಿಕ್ಕೆ ಮನಃಪೂರ್ವಕ ಪ್ರಯತ್ನ ಮಾಡಬೇಕೆಂದು ನಮ್ಮ ಪ್ರಾಮಾಣಿಕವಾದ ಅಭಿಪ್ರಾಯ. ಈ ಹುರುಪಿನ ವಿಚಾರಗಳಿಗೆ ತಕ್ಕಂತೆ ನಾವು ಗತ-ವಯಸ್ಕರಾಗದೆ ಇದ್ದಿದ್ದರೆ ಹಲವು ವರ್ಷಗಳ ವರೆಗೆ ಅಹೋರಾತ್ರಿ ಶ್ರಮಪಟ್ಟು ಹಿಂದೀ ಮತ್ತು ಇಂಗ್ಲೀಷ ಭಾಷಾ ಪ್ರಭುತ್ವವನ್ನು ಸಂಪಾದಿಸಿ ನಿಸ್ಸಂದೇಹವಾಗಿ ಧರ್ಮಸೇವೆ ಮಾಡಲು ಹೆಣಗುತ್ತಿದ್ದೆವು. ಆದರೂ ನಮ್ಮ ಶಿಷ್ಯರೂ, ಇತರ ನಮ್ಮ ವೀರಶೈವ ತರುಣ ಸಂಗೀತ ಕಲಾಕೋವಿದ ಬಂಧುಗಳೂ, ಪ್ರಯತ್ನಪಟ್ಟರೆ ನಮ್ಮ ಕನಸನ್ನು ನನಸನ್ನಾಗಿ ಮಾಡುವದು ಅಸಾಧ್ಯವಲ್ಲವೆಂದು ಆಶಿಸುತ್ತೇವೆ.

ವಿಶ್ವವನ್ನೇ ತನ್ನ ಬಳಗದಲ್ಲಿ ಎಳೆದುಕೊಳ್ಳುವ ಸಾತ್ವಿಕವಾದ ಸುಲಭವಾದ ಮತ್ತು ಸತ್ಯವಾದ ಮಾರ್ಗವನ್ನು ಶ್ರೀ ಬಸವಣ್ಣನವರು ತಮ್ಮ ಪವಿತ್ರತಮವಾದ ನಡೆಯಿಂದಲೂ ಅಮೃತಮಯವಾದ ತಮ್ಮ ನುಡಿಯಿಂದಲೂ ಪ್ರಚುರಪಡಿಸಿ ಇಂದಿಗೆ ಸಮಿಸಮೀಪ ಒಂಭತ್ತುನೂರು ವರುಷಗಳಾಗಿದ್ದರೂ ನಾವು ಇನ್ನೂ ನಿಂತಲ್ಲಿಯೇ ನಿಲ್ಲುವದೊತ್ತಟ್ಟಿಗಿರಲಿ, ಅನೇಕಾನೇಕ ಒಡಕುಗಳನ್ನೂ, ಒಳಪಂಗಡಗಳನ್ನು ಹುಟ್ಟಿಸಿಕೊಂಡು ಹಿಂದೆ ಹಿಂದೆ ಸರಿಯುತ್ತಲಿದ್ದೇವೆ. ಇದು ಶ್ರೇಯಸ್ಕರವಲ್ಲ. ಇನ್ನು ನಾವು ನಮ್ಮ ಜನಮನ ವಶೀಕರಣ ವಿದ್ಯೆಯಾದ ಸಂಗೀತದ ಸಹಾಯದಿಂದ ಸತ್ಯವಾದ ಧರ್ಮಸೇವೆಯನ್ನು ಹುರುಪಿನಿಂದ ಮಾಡುವದಕ್ಕಾಗಿ ಟೊಂಕ ಕಟ್ಟುವಾ; ನಿಜವಾದ ವೀರಶೈವರೆಂಬ ಹೆಸರನ್ನು ಸಾರ್ಥಕಗೊಳಿಸುವಾ.

ವೀರಶೈವ ಮಹಾಸಭೆಯ ಸಂಚಾಲಕ ಸಮಿತಿಯವರು ಮಹಾಸಭೆಯ ಅಧಿವೇಶನದೊಡನೆಯೇ ಈ ಸಂಗೀತಗಾರರ ಸಮ್ಮೇಲನವನ್ನೂ ಕರೆದದ್ದಕ್ಕೆ ನಾವು ಹೃತ್ಪೂರ್ವಕವಾಗಿ ಅವರ ಆಭಾರ ಮನ್ನಿಸುವಾ. ಅವರು ಈ ಸಮ್ಮೇಲನವನ್ನು ಕರೆದದ್ದರಿಂದಲೇ ನಮಗೆ ಬಹು ದಿವಸಗಳಿಂದ ಮನಸ್ಸಿನಲ್ಲಿ

ಮಾಡಿಕೊಂಡ ನಮ್ಮ ವಿಚಾರಗಳನ್ನು ಪ್ರಕಾಶಪಡಿಸಲಿಕ್ಕೆ ಅವಕಾಶವಾಯಿತು. ಇನ್ನು ತಮ್ಮ ಸಮಯವನ್ನು ಹೆಚ್ಚಾಗಿ ತೆಗೆದುಕೊಳ್ಳದೇ ಸ್ವಲ್ಪದರಲ್ಲಿಯೇ ನನ್ನ ವಿಚಾರಗಳ ಉಪಸಂಹಾರವನ್ನು ಮಾಡಿ ಸಶಾಸ್ತ್ರಶುದ್ಧವಾದ ಸಂಗೀತ ವಿದ್ಯೆಯು ಪ್ರಸಾರವಾಗುವದಕ್ಕೂ, ಅದರಿಂದ ತಕ್ಕ ಪ್ರಯೋಜನವಾಗುವದಕ್ಕೂ ಅನುಕೂಲವಾದ ಆಲೋಚನೆಗಳನ್ನು ಸರ್ವ ಸಭಿಕರು ಒಮ್ಮನದಿಂದ ಮಾಡುವದಕ್ಕೆ ಅವಕಾಶ ಕೊಡಬೇಕೆಂದು ಆಶಿಸುತ್ತೇನೆ.

ನಮ್ಮ ಹೇಳಿಕೆಯ ಪ್ರಕಾರ ಸಂಗೀತ ಪ್ರಚಾರಕರನ್ನು ನಿರ್ಮಿಸಬೇಕಾದರೆ ಕರ್ನಾಟಕದ ಬೇರೆ ಬೇರೆ ಕೇಂದ್ರಗಳಲ್ಲಿ ಎರಡೂ ಬಗೆಯ ಸಶಾಸ್ತ್ರ ಸಂಗೀತ ಶಿಕ್ಷಣ ಕೊಡುವ ವಿದ್ಯಾನಿಲಯಗಳು ನಿರ್ಮಾಣವಾಗಬೇಕಾಯಿತು. ಅದಕ್ಕೆ ಧಾರಾಳವಾಗಿ ಧನದ ಸಹಾಯವು ಬೇಕಾಯಿತು. ಆ ವಿಚಾರವನ್ನು ಸರ್ವ ಸಮರ್ಥವಾದ ನಮ್ಮ ವೀರಶೈವ ಮಹಾಸಭೆಯು ನಿಸ್ಸಂದೇಹವಾಗಿ ಮಾಡಿ ನಮ್ಮ ಸದ್ವಾಂಛಿತಗಳೆಲ್ಲ ನೆರವೇರುವದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟೀತೆಂದು ಆಶಿಸಿದ್ದೇನೆ. ಈ ಸಂಗೀತ ಸಭೆಯ ಮುಖಾಂತರವಾಗಿ ಸಭಾಸದಸ್ಯರೆಲ್ಲರು ಅದಕ್ಕೆ ಯೋಗ್ಯ ಪ್ರಯತ್ನಗಳನ್ನು ಮನಃಪೂರ್ವಕವಾಗಿ ಮಾಡುವರೆಂದು ತುಂಬಾ ನಂಬಿ ತಮ್ಮೆಲ್ಲರ ಅನುಜ್ಞೆಯನ್ನು ಪಡೆದು ವಿರಮಿಸುವದಕ್ಕಿಂತ ಮೊದಲು, ನಾನು ಜನ್ಮಾಂಧನಾಗಿದ್ದರೂ ನನ್ನನ್ನು ಸಂಗೀತ ವಿದ್ಯಾಕೋವಿದನನ್ನಾಗಿ ಮಾಡಿಸಿ, ಸದ್ಧರ್ಮ ಸೇವೆಗೆ ಯೋಜಿಸಿದ ಆ ನನ್ನ ಪೂಜ್ಯ ಗುರುಗಳೂ ಮತ್ತು ಈ ಅಖಿಲ ವೀರಶೈವ ಮಹಾಸಭೆಯ ಉತ್ಪಾದಕರೂ ಶ್ರೀಮದ್ವೀರಶೈವ ಶಿವಯೋಗಮಂದಿರದ ಸಂಸ್ಥಾಪಕರೂ ಸಂಗೀತ ವಿದ್ಯೆಯು ಸತ್ಪಾತ್ರದಲ್ಲಿ ನೆಲಸಿ, ಅದು ಸುಪರಿಣಾಮಕಾರಿಯಾದ ಪ್ರಯೋಜನಕಾರಿಯಾಗಬೇಕೆಂದು ಇಚ್ಛಿಸಿ, ಆ ತಮ್ಮ ಸದಿಚ್ಛೆಯನ್ನು ಕಾರ್ಯರೂಪಕ್ಕಿಳಿಸಿದವರೂ ಆದಂಥ ಪರಮ ಪೂಜ್ಯ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಅಡಿದಾವರೆಗಳನ್ನು ಸ್ಮರಿಸಿ, ನನ್ನ ಅನಂತ ಮಂಗನೆಗಳನ್ನು ಅರ್ಪಿಸಿ, ತಮ್ಮೆಲ್ಲರ ಅಪ್ಪಣೆಯನ್ನು ಪಡೆದು ವಿರಮಿಸುತ್ತೇನೆ-

ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು



ಜೀಯಾಚ್ಛ್ರೀರೇಣುಕಾಚಾರ್ಯಃ ಶಿವಾಚಾರ್ಯಶಿಖಾಮಣಿಃ ।
ಯೋ ವೀರಶೈವಸಿದ್ಧಾಂತಂ ಸ್ಥಾಪಯಾಮಾಸ ಭೂತಲೇ ॥

**ಶ್ರೀಮದ್ವೇದವೇದಾಂತಸಿದ್ಧಾಂತಪುರಾಣಾಗಮೇತಿಹಾಸಸಕಲ ಶಾಸ್ತ್ರಪ್ರಸಿದ್ಧಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀಮದ್ರೇಣುಕಾಚಾರ್ಯಪರಂಪರಾಗತ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯಭಗವತ್ಪಾದೈಃ**

ಶ್ರೀ ಶಾಲಿವಾಹನ ಶಕೇ ೧೮೫೭ತಮೇ ಯುವ ಸಂವತ್ಸರೇ ಆಶ್ವಯುಜ ಶುಕ್ಲಪಕ್ಷೇ ವಿಜಯದಶಮ್ಯಾಂ ತಿಥೌ ಪರಮಸದ್ಗುರುಪದನಖಚಂದ್ರ ಸಾಂದ್ರರುಚಿರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಕೇವಲಾಸ್ಮದೀಯಕಾರುಣ್ಯಾಮೃತಸರಸೀಮರಾಳೋಪಮಾನರಾದ ಕಾಡಶೆಟ್ಟಿಹಳ್ಳಿ ಚರಂತೀಮಠೀಯ ಗುರುಪಾದಶರ್ಮಣಃ ಪುತ್ರಃ ವೇ॥ ಗವಾಯಿ ಪಂಚಾಕ್ಷರ ಶರ್ಮಾ ತನುಮನೋಧನಾದಿಭಿಃ ಭಗವತ್ಪಾದಾಚಾರ್ಯಕೃಪಯಾ ನಿಷ್ಪಕ್ಷಪಾತಧಿಯಾ ದಕ್ಷಯಾ ಚ ಶ್ರೀ ಮದಾಚಾರ್ಯಸೇವಾನಿರತತ್ವಾದಸ್ಮೈ **ಸಂಗೀತ ಸಾಗರ** ಇತಿ ಪದವೀ ಪ್ರದತ್ತಾ.

ಮುಕ್ಕಾಂ:- ರಾಣೇಬೆನ್ನೂರು.
ತಾರೀಖು: ೭-೧೦-೧೯ . ೫

**इत्याशिषः**

॥ ಶ್ರೀ ಗುರು ಸಾರ್ವಭೌಮ ಪ್ರಸನ್ನ ॥



卐 ( ಶ್ರೀಮದ್ಗೌರವ ಪತ್ರಿಕಾ ) 卐

## ವೇದಮೂರ್ತಿ ಸಂ. ವಿದ್ವನ್ಮಣಿಶ್ರೀಮತ್ಪಂಚಾಕ್ಷರ ಗವಾಯಿಗಳು

ಶ್ರೀ ಶಿವಯೋಗಮಂದಿರ ಇವರ

ಪತ್ಕಂಜಯುಗಳಲ್ಲಿ

**ಗದಗ ತಾಲೂಕ ಹೊಂಬಳ ಗ್ರಾಮದ ಜ್ಞಾನವರ್ಧಕ ವಾಚನಾಲಯ ಮಹಾಸಂಸ್ಥೆಯಿಂದ—**

**ಮಹೋದಯರೇ ?**

**ಸಂ**ಗೀತ, ವಿದ್ಯೆಯನ್ನು ತಾವು ಧರ್ಮಾರ್ಥವಾಗಿ ನಮ್ಮ ದೇಶದ ಬಡವಿದ್ಯಾರ್ಥಿಗಳಿಗೀಯುವ ಮೂವರಿಯ ಸಂಚಾರಕ ಶಾಲೆಯನ್ನು ಸ್ಥಾಪಿಸಿ ಸ್ವಪರ ಹಸ್ತದಿಂದ ಅನ್ನೋದಕವಿತ್ತು ಅವಿಶ್ರಾಂತವಾದ ಪರಿಶ್ರಮದಿಂದ ದುಡಿದು ಅನಾಥರಿಗೂ, ಬಡವರಿಗೂ, ಹುಟ್ಟು ಕುರುಡರಿಗೂ ಸುಲಭವಾಗಿ ವಾಚನ, ಬರಹ. ಗಾಯನ, ಮೃದಂಗ ಮುಂತಾದ ಕಲೆಗಳನ್ನು ಕಲಿಸಿ ದೇಶಸುಧಾರಣೆ, ಶಿವ-ಕೀರ್ತನ, ಪುರಾಣ-ಪ್ರವಚನ, ಗ್ರಾಮೋದ್ಧಾರ ಮೊದಲಾದ ಸತ್ಕಾರ್ಯಗಳನ್ನೆಸಗಿ ಪುರನಿವಾಸಿಗಳಿಗೂ, ಪರಸ್ಥಳದ ಗುಣಗ್ರಾಹಿಗಳಿಗೂ ಮಾರ್ಗದರ್ಶಕರಾಗಿ ನಮ್ಮ ಗ್ರಾಮದಲ್ಲಿ ಸತತ ಐದು ತಿಂಗಳು ಅಧಿಕವಾದ ಸುಧಾಪಾನ ಮಾಡಿಸಿ, ಕೀರ್ತಿ-ಭಾಜನರಾದ ಪ್ರಯುಕ್ತ ನಾವೆಲ್ಲರೂ ಕೃತಜ್ಞರಾಗಿ ಏಕೋಭಾವದ ಭಕ್ತಿಯಿಂದ ತಾ. ೨೮-೧೦-೩೯ ನೆಯ ಶುಭದಿವಸ **"ಸಂಗೀತ ಸುಧಾನಿಧಿ"** ಎಂಬ ನವಾಕ್ಷರ ಯುಕ್ತ " ಗೌರವ " ಪತ್ರಿಕೆಯನ್ನು ಸಮರ್ಪಿಸಿರುವೆವು. "ಸದ್ಭಕ್ತ್ಯೋ ಹಿ ಮಮಃ

ಪ್ರಾಣಂ" ಎಂಬ ವಚನಾನುಸಾರವಾಗಿ ಈ ಅಲ್ಪ ಸೇವೆಯನ್ನು ಪರಿಗ್ರಹಿಸಬೇಕೆಂದು ಪ್ರಾರ್ಥಿಸುವ—

ಗದಗ ತಾಲೂಕ
**ಹೊಂಬಳ**
ಪ್ರಮಾಥಿನಾಮ ಸಂ।ರದ ಅಶ್ವಿನ
ಶುಕ್ಲಪಕ್ಷ ಪೌರ್ಣಿಮಾ (೧೫)
ತಾ॥ ೨೮—೧೦—೩೯

ಭಗವತ್ಪಾದಸೇವಕ-
**ಲಿಂಗಪ್ಪ ಶಂಕರಪ್ಪ ಮೈಲಾರದ,**
ಜ್ಞಾನವರ್ಧಕ ವಾಚನಾಲಯ, ಹೊಂಬಳ-
ಅಧ್ಯಕ್ಷ.

|| ಶ್ರೀ ಸಿದ್ಧೇಶ್ವರಃ ಪ್ರಸೀದತು ||

# ಪ್ರಶಸ್ತಿ ಪತ್ರಿಕೆಯು

ಶ್ರೀ ಸಿದ್ಧೇಶ್ವರ ಸಂಸ್ಥೆ ವಿಜಾಪುರ ಇವರ ಕಡೆಯಿಂದ-

**ಗಾನವಿಶಾರದ ಪಂಡಿತ ಶ್ರೀ ಪಂಚಾಕ್ಷರ ಗವಾಯಿಗಳು**

**ಶ್ರೀ ಶಿವಯೋಗಮಂದಿರ ಇವರ ಸನ್ನಿಧಾನಕ್ಕೆ-**

**ಮಹಾನುಭಾವರೇ,**

ತಾವು ಗಾಯನ ಕಲೆಯಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಸಂಪಾದಿಸಿ, ಇದುವರೆಗೆ ಬಹುಭಾಗದಲ್ಲಿ ಸಂಚರಿಸಿ, ಸರ್ವರಿಗೆ ಕರ್ಣಾಮೃತವನ್ನಿತ್ತು ಸಂತೋಷಗೊಳಿಸುತ್ತಿರುವಿರಿ. ಇಂದು ಆ ಭಾಗ್ಯವು ನಮ್ಮ ಪಾಲಿಗೂ ಬಂದಿದೆ. ಆದುದರಿಂದ ವಿಜಾಪುರಸ್ಥರಾದ ನಾವು ಆ ಆನಂದಾತಿಶಯದ್ಯೋತಕವಾಗಿಯೂ ತಮ್ಮ ಬಗ್ಗೆ ನಮಗಿದ್ದ ಪೂಜ್ಯ ಭಾವನೆಯನ್ನು ವ್ಯಕ್ತಮಾಡುವದಕ್ಕಾಗಿಯೂ ತಮಗೆ ಈಹೊತ್ತಿನ ದಿವಸ ಮೆ|| ಕೆ. ಬಿ. ವಾಸುದೇವ ಡಿಸ್ಟ್ರಿಕ್ಟ ಜಜ್ಜ ಇವರ ಅಧ್ಯಕ್ಷತೆಯ ಕೆಳಗೆ ಸಭೆಗೂಡಿ **“ ಗಾನ ಕಲಾನಿಧಿ ”** ಎಂಬ ಪ್ರಶಸ್ತಿಯನ್ನು ಅರ್ಪಿಸಿದ್ದೇವೆ. ಇವನ್ನು ತಾವು ದಯವಿಟ್ಟು ಸ್ವೀಕರಿಸಬೇಕೆಂದೂ, ಮತ್ತು ಉತ್ತರೋತ್ತರಾರೋಗ್ಯಾಭಿವೃದ್ಧಿಯನ್ನು ಹೊಂದಿ ಸದಾ ಸಹೃದಯರಿಗೆ ಮೋದವನ್ನೀಯುತ್ತಿರಬೇಕೆಂದೂ ಬಯಸುವ-

ತಮ್ಮ

**ಶ್ರೀ ಸಿದ್ಧೇಶ್ವರ ಸಂಸ್ಥೆ**
**ವಿಜಾಪುರ.**

**ಅಂದಾನಪ್ಪ ಚನ್ನಪ್ಪ ಅಂಗಡಿ.**
ಬಿ. ಎ., ಎಲ್‌ಎಲ್. ಬಿ.
ಅಧ್ಯಕ್ಷರು

೧೫—೧—೧೯೪೯

# ಸುಗುಣಿ ಪಂಚಾಕ್ಷರ ಮಣಿ !

ಮರೆಯಾದೆಯಾ ಈ ಕಣ್ಗೆ
ಗಾಯನಾಚಾರ್ಯ ಪಂಚಾಕ್ಷರ ಮಣಿ
ಸುಗುಣಿ ಲೋಕಮಾನ್ಯ ॥ ಪ ॥

ಶಿವಯೋಗ ನಿರುತ ಶಾಂತ
ಗಾನಮಾತೃ ದೈವತ
ನಿಜ ಭಾರತಿ ಗುರುಮೂರ್ತಿ ಧವಲಿತ ಕೀರ್ತಿ ॥ ೧ ॥

ಗುರುದೇವ ಸಮತಾಭಾವ
ಹೇ ಸುದೀನ ಬಾಂಧವ
ಮನು ನಾಮನೆ ಕೃತಧಾಮ ಜನದನುರಾಗಿ ॥ ೨ ॥

ತನು ನೀಗಿ ಜನತಾರಾಗಿ
ಹೇ ವಿರಾಗಿ ಪೋದೆಯಾ
ಶಿವಲೋಕದಿ ಪಡೆ ಶಾಂತಿ ತವೆ ಶಿಸುವಾಗಿ ॥ ೩ ॥

—'ಕವಿಚಂದ್ರ' ಶ್ರೀಕಂಠಶಾಸ್ತ್ರಿ ನಲವಡಿ.

# ಶ್ರೀ ಪಂ. ಪುಟ್ಟರಾಜರ ಕೃತಿಗಳು

## " ಯು. ಪಿ. ಎಸ್. "

ಪಂ. ಪುಟ್ಟರಾಜರು ವಾಗ್ಗೇಯಕಾರರಾಗಿರುವಂತೆ ಪ್ರತಿಭಾವಂತ ಕಾವ್ಯ ಶ್ರೀಮಂತರೂ ಆಗಿರುವರು. ಅವರು ಮುಟ್ಟಿದುದನ್ನೆಲ್ಲ ಚಿನ್ನವನ್ನಾಗಿಸುವ ಪರುಷ ಹಸ್ತವನ್ನು ಪಡೆದಿರುವಂತೆ ನುಡಿದುದನ್ನೆಲ್ಲ ಕಾವ್ಯವನ್ನಾಗಿಸುವ ವಾಕ್-ಸಂಪದವನ್ನೂ ಗಳಿಸಿ ವರಕವಿಗಳಾಗಿರುವರು. ಮಾತೃಭಾಷೆಯಾದ ಕನ್ನಡದಲ್ಲಿ ಅಲ್ಲದೆ ದೇವವಾಣಿಯಾದ ಸಂಸ್ಕೃತ ಮತ್ತು ರಾಷ್ಟ್ರಭಾಷೆಯಾದ ಹಿಂದಿಯಲ್ಲಿಯೂ ಕಾವ್ಯಗಳ ರಚನೆಯನ್ನು ಮಾಡಿ 'ತ್ರಿಭಾಷಾ ಪಂಡಿತ'ರೆಂಬ ಪ್ರಶಸ್ತಿಗೆ ಅರ್ಹರಾಗಿರುವರು. ಶ್ರವಕಾವ್ಯ ಪುರಾಣಗಳನ್ನು ದೃಶ್ಯಕಾವ್ಯ ನಾಟಕಗಳನ್ನು ರಚಿಸುವ ಪುಟ್ಟರಾಜರ ಕವಿತ್ವಶಕ್ತಿ ಸತ್ವಯುತವಾಗಿದೆ. ಇವು ಅವರ ರಚನೆಗಳು.

೧. ಪುರಾಣಗಳು

೧. ಉಡುತಡಿಯ ಅಕ್ಕಮಹಾದೇವೀ ಪುರಾಣ (ಕನ್ನಡ)
೨. ಹಾವೇರಿ ಶ್ರೀ ಶಿವಬಸವೇಶ್ವರ ಪುರಾಣ (ಕನ್ನಡ)
೩. ಬಸವ ಪುರಾಣ. (ಹಿಂದೀ)

೨. ಗೀತೆ

೪. ಕುಮಾರ ಗೀತಾ. (ಸಂಸ್ಕೃತ)

೩. ನಾಟಕಗಳು

| | | |
|---|---|---|
| ೫. | ಭಕ್ತಪ್ರೇಮಿ ಶ್ರೀ ಕೃಷ್ಣ (ಕೃಷ್ಣಗಾರುಡಿ) | (ಅಚ್ಚಾಗಿಲ್ಲ) |
| ೬. | ದೇವರ ದುಡ್ಡು | ,, |
| ೭. | ಮಿಂಚು.(ಸಾಮಾಜಿಕ) | ,, |
| ೮. | ರತ್ನಹಾರ (ಸಾಮಾಜಿಕ) | ,, |
| ೯. | ನೆಲ್ಲೂರ ನಂಬೆಕ್ಕ | (ಅಚ್ಚಾಗಿದೆ) |
| ೧೦. | ಭಗವಾನ್ ಬಸವೇಶ್ವರ | ,, |
| ೧೧. | ಶಿವಶರಣ ಚನ್ನಯ್ಯ | ,, |

೧೨. ಶಿರಹಟ್ಟಿ ಶ್ರೀ ಫಕೀರಸ್ವಾಮಿ (ಅಚ್ಚಾಗಿಲ್ಲ)
೧೩. ಸ್ತ್ರೀ ಜೀವನ ,,
೧೪. 'ದಾನವೀರ' ಸಿರಸಂಗಿ ಲಿಂಗರಾಜ ,,
೧೫. ರಾಜಶೇಖರ ,,
೧೬. ಸೊನ್ನಲಿಗೆಯ ಸಿದ್ಧರಾಮೇಶ್ವರ ,,
೧೭. ಬಸವೇಶ್ವರ–ನೀಲಮ್ಮ (ಅಪೂರ್ಣ) –

ಇವಲ್ಲದೇ "ಕಿಶೋರ" ಎಂಬ ಅಂಕಿತದಿಂದ ಹಿಂದಿಯಲ್ಲಿ ನೂರಾರು ಚೀಜಗಳನ್ನು ರಚಿಸಿರುವರು.

ಪಂ. ಪುಟ್ಟರಾಜರ ಈ ಕಾವ್ಯರಚನಾ ಪ್ರತಿಭೆಗೆ ಅವರ ಪರಮ ಗುರುಗಳಾದ ಶ್ರೀ ಪಂಚಾಕ್ಷರ ಗವಾಯಿಗಳವರು 'ಉಭಯ ಗಾನವಿಶಾರದ'ರಾಗಿದ್ದರೂ ಶಿವಯೋಗ ಸಿದ್ಧರಾಗಿದ್ದರೂ ಕವಿತ್ವಶಕ್ತಿಯನ್ನು ಪಡೆದಿರಲಿಲ್ಲ. ಅವರು ಆಗಾಗ ತಮ್ಮ ಈ ಕೊರತೆಗೆ ಪರಿತಪಿಸುತ್ತಿದ್ದರು. ಗಾಯಕನು ಸ್ವತಃ ಪಂಡಿತನೂ, ಭಾಷಾವಿದನೂ, ಕವಿಯೂ ಆಗಿರಬೇಕೆಂದು ಅವರು ಪದೇ ಪದೇ ಹೇಳುತ್ತಿದ್ದರು. ೧೯೩೮ರಲ್ಲಿ ಹುಬ್ಬಳ್ಳಿಯಲ್ಲಿ ಕೂಡಿದ ಅ. ಭಾ. ವೀರಶೈವ ಮಹಾಸಭೆಯ ಅಂಗವಾಗಿ ನಡೆದ ಸಂಗೀತ ಸಭೆಯ ಅಧ್ಯಕ್ಷರಾಗಿ ಅವರು ಮಾಡಿದ ಭಾಷಣ ಮನನೀಯವಾಗಿದೆ. ಆ ಭಾಷಣದಲ್ಲಿ ಅವರು ಸಂಗೀತ ವಿದ್ಯೆಯ ಸುಪ್ರಯೋಜನಗಳನ್ನು ವಿವರವಾಗಿ ಹೇಳಿ ಕೊನೆಗೆ ತಮ್ಮ ಆಶೆಯನ್ನು ಈ ತೆರನಾಗಿ ಸ್ಪಷ್ಟವಾಗಿ ವ್ಯಕ್ತಮಾಡಿದರು.

"ನಾವು ಧರ್ಮಋಣವನ್ನು ಸ್ವಲ್ಪಾದರೂ ತೀರಿಸುವದಿದ್ದರೆ ನಮ್ಮ ಸಂಗೀತಕಲಾ ಜೀವಿಗಳು ಸುವಿಚಾರಗಳನ್ನು ಆಚಾರದಲ್ಲಿ ತರಲಿಕ್ಕೆ ಮನಃಪೂರ್ವಕ ಪ್ರಯತ್ನಮಾಡಬೇಕೆಂದು ನಮ್ಮ ಪ್ರಾಮಾಣಿಕವಾದ ಅಭಿಪ್ರಾಯ. ಈ ಹುರುಪಿನ ವಿಚಾರಗಳಿಗೆ ತಕ್ಕಂತೆ ನಾವು ಗತವಯಸ್ಕರಾಗದೆ ಇದ್ದಿದ್ದರೆ ಹಲವು ವರ್ಷಗಳ ವರೆಗೆ ಅಹೋರಾತ್ರಿ ಶ್ರಮಪಟ್ಟು ಹಿಂದೀ ಮತ್ತು ಇಂಗ್ಲೀಷ ಭಾಷಾ ಪ್ರಬುತ್ವವನ್ನು ಸಂಪಾದಿಸಿ ನಿಸ್ಸಂದೇಹವಾಗಿ ಧರ್ಮಸೇವೆ ಮಾಡಲು ಹೆಣಗುತ್ತಿದ್ದೆವು. ಆದರೂ ನಮ್ಮ ಶಿಷ್ಯರೂ, ಇತರ ನಮ್ಮ ವೀರಶೈವ ತರುಣ ಸಂಗೀತ ಕಲಾಕೋವಿದ ಬಂಧುಗಳೂ ಪ್ರಯತ್ನಪಟ್ಟರೆ ನಮ್ಮ ಕನಸನ್ನು ನನಸನ್ನಾಗಿ ಮಾಡುವದು ಅಸಾಧ್ಯವಲ್ಲವೆಂದು ಆಶಿಸುತ್ತೇನೆ." ಗುರುವರ್ಯರ ಈ ಕನಸು ಪಂ. ಪುಟ್ಟರಾಜರ ಈ ಕೃತಿಗಳಲ್ಲಿ ನನಸಾಗಿ ಬಂದಿತು. ಪಂ. ಪುಟ್ಟರಾಜರು ತಮ್ಮ ಗುರುವರ್ಯರ ಆಶೆಯನ್ನು ಈಡೇರಿಸಿ ಕೃತಕೃತ್ಯರಾಗಿರುವರು.



'ಉಭಯಗಾಯನ ವಿಶಾರದ' ಪಂ. ಶ್ರೀ ಪುಟ್ಟರಾಜ ಗವಾಯಿಗಳು



ಮೈಸೂರು ರಾಜ್ಯದ ಮುಖ್ಯಮಂತ್ರಿ ಶ್ರೀ. ಎಸ್. ನಿಜಲಿಂಗಪ್ಪನವರು
ಶ್ರೀ ಪುಟ್ಟರಾಜ ಗವಾಯಿಗಳವರಿಗೆ
ರಾಜ್ಯದ ಸಂಗೀತ ಅಕಾಡಮಿಯ ಪ್ರಶಸ್ತಿಯನ್ನು ದಯಪಾಲಿಸುತ್ತಿರುವುದು.



ಬೆಂಗಳೂರಿನ ಅರವಿಂದ ಸಂಗೀತ ವಿದ್ಯಾಲಯದಲ್ಲಿ ೧೯೫೯ ರಲ್ಲಿ ವಿದ್ಯಾಸಚಿವ
ಶ್ರೀ ಅಣ್ಣಾರಾವ ಗಣಮುಖಿ ಅವರ ಅಧ್ಯಕ್ಷತೆಯಲ್ಲಿ
ಶ್ರೀ ಪುಟ್ಟರಾಜ ಅವರನ್ನು ಗೌರವಿಸುತ್ತಿರುವುದು.



## ನಾ ಕಂಡ ಗುರುವರ್ಯ ಗಾಯನಾಚಾರ್ಯ

# ಶ್ರೀ ಪುಟ್ಟರಾಜ ಗವಾಯಿಗಳವರು

ಆರ್. ವ್ಹಿ. ಶೇಷಾದ್ರಿ ಗವಾಯ್, ಬೆಂಗಳೂರು

ಪೂಜ್ಯ ಗುರುವರ್ಯ ಶ್ರೀ ಪುಟ್ಟರಾಜ ಗವಾಯಿಗಳು ೧೯೧೪ ನೇ ಇಸ್ವಿಯಲ್ಲಿ ಹುಟ್ಟಿದರು. ಧಾರವಾಡ ಜಿಲ್ಹೆಯ ಕರ್ಜಗಿಯ ಹತ್ತಿರದ "ದೇವಗಿರಿ" ಎಂಬ ಹಳ್ಳಿಯು ಅವರ ಜನ್ಮಸ್ಥಳವಾದರೂ ಅವರು ಕಲಾಪ್ರಪಂಚಕ್ಕೆ ಅತ್ಯಮೂಲ್ಯ ಅನರ್ಘ್ಯ ರತ್ನವಾಗಿದ್ದಾರೆ. ಶ್ರೀ ಪುಟ್ಟರಾಜ ಗವಾಯಿಗಳು ಇಂತಹ ಉನ್ನತ ಸ್ಥಾನದಲ್ಲಿ ವಿರಾಜ ಮಾನರಾಗಬೇಕಾದರೆ ಅವರು ಆ ಸ್ಥಾನಕ್ಕಾಗಿ ತೆತ್ತ ಬೆಲೆ ಅಮೂಲ್ಯವಾದುದು.

ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಪುಟ್ಟರಾಜರು ಸೋದರ ಮಾವಂದಿರಾದ ಶ್ರೀ ಚಂದ್ರಶೇಖರಯ್ಯನವರಲ್ಲಿ ಪೋಷಣೆ ಹೊಂದಿದರು. ಹುಟ್ಟಿ ವಾಗ ಶ್ರೀ ಗವಾಯಿಗಳಿಗೆ ಕಣ್ಣುಗಳೆರಡೂ ಕಾಣುತ್ತಿದ್ದರೂ ಬಾಲ್ಯದಲ್ಲಿ ಸಿಡುಬಿನ ಬಾಯಿಲೆ ಬಂದು ಕಣ್ಣುಗಳು ಕಾಣದಂತಾಗಲು, ಪುಟ್ಟರಾಜರ ತಾಯಿಗೆ ಮತ್ತು ಮಾವನಿಗೆ ಆದ ದುಃಖ ವರ್ಣಿಸಲಸದಳ. ಪಾಪ, ಅಂದು ಅವರಿಗೇನು ಗೊತ್ತು "ಪುಟ್ಟರಾಜ ಜನಿಸಿ ಬಂದ, ಕಾವ್ಯ ನಾಟ್ಯಗಾನದಿಂದ ಜಗವ ಬೆಳಕ ಮಾಡ ಬಂದ" ಎಂದು ಜನರು ಮುಂದೆ ಹಾಡುವರೆಂದು! ಹೀಗೆ ದಿನಕಳೆದಂತೆ ದುಃಖಿಸಿ ಫಲವಿಲ್ಲ ವೆಂದು ಶ್ರೀ ಚಂದ್ರಶೇಖರಯ್ಯನವರು ಅಳಿಯ ಪುಟ್ಟಯ್ಯನಿಗೆ ಸಂಗೀತ ವಿದ್ಯಾಭ್ಯಾಸ ವನ್ನು ಪ್ರಾರಂಭಿಸಿದರು. ಶ್ರೀ ಚಂದ್ರಶೇಖರಯ್ಯನವರು ಶ್ರೀಗುರುವರ್ಯ ಗಾನಯೋಗಿ ಪಂಚಾಕ್ಷರಿ ಗವಾಯಿಗಳವರ ಶಿಷ್ಯರೆಂಬುವುದನ್ನು ಇಲ್ಲಿ ಸ್ಮರಿಸಬಹುದು. ಆನಂತರ ಪ್ರಾರಂಭಿಕ ವಿದ್ಯಾಭ್ಯಾಸ ಮುಗಿಯುವುದರಲ್ಲೇ ದೇವಗಿರಿಗೆ "ಭಿಕ್ಷಕ್ಕೆ" ದಯಮಾಡಿಸಿದ ಶ್ರೀ ಪಂಚಾಕ್ಷರಿ ಗವಾಯಿಗಳವರು ಬಾಲಕ ಪುಟ್ಟಯ್ಯನನ್ನು ನೋಡಿ

ಆತನ ಸಂಗೀತ ವಿದ್ಯಾಚತುರತೆಯನ್ನು ಮನಗಂಡು ಪುಟ್ಟರಾಜರ ತಾಯಿ ಮತ್ತು ಮಾವನವರ ಒಪ್ಪಿಗೆ ಮೇರೆಗೆ ಬಾಲಕ ಪುಟ್ಟಯ್ಯನನ್ನು ತಮ್ಮ ನೆಚ್ಚಿನ ಶಿಷ್ಯಮಾಲೆಯಲ್ಲಿ ಸೇರಿಸಿಕೊಂಡರು. ಪುಟ್ಟಯ್ಯನನ್ನು ಗುರುಗಳಿಗೆ ಒಪ್ಪಿಸುವಾಗ "ಗುರುದೇವಾ, ಈ ಕಣ್ಣಿಲ್ಲದ ಕಂದನನ್ನು ನಿನ್ನ ಚರಣಗಳಿಗೆ ಒಪ್ಪಿಸಿದ್ದೇವೆ. ಇವನು ನೇತ್ರಹೀನನಾಗಿರುವುದು ನಮಗೆ ದುಃಖವನ್ನುಂಟುಮಾಡಿದೆ. ಇವನು ಮುಂದೆ ಜಗತ್ತಿನಲ್ಲಿ ಹೇಗೆ ಜೀವನ ಸಾಗಿಸುತ್ತಾನೋ ನಮಗೆ ತಿಳಿಯದೇ ಕಳವಳವಾಗಿದೆ. ಇದೆಲ್ಲವನ್ನೂ ಸರಿಪಡಿಸಲು ನಿನ್ನ ವಿನಾ ಬೇರಿಲ್ಲವೆಂಬುದನ್ನೂ ಮನಗಂಡಿದ್ದೇವೆ. ಈ ಮಗುವಿನ ಮೇಲೆ ಕೃಪೆ ಮಾಡಬೇಕು" ಎಂದು ಪುಟ್ಟರಾಜರ ಮಾವ ಮತ್ತು ತಾಯಿಯವರು ಕಣ್ಣೀರು ಸುರಿಸಿ ಗುರುವರ್ಯ ಶ್ರೀ ಪಂಚಾಕ್ಷರಿ ಗವಾಯಿಗಳಿಗೆ ನಮಸ್ಕರಿಸಿದರು. ಶ್ರೀ ಪಂಚಾಕ್ಷರಿ ಗವಾಯಿಗಳು ಇವರ ಮಾತಿಗೆ ನಕ್ಕು "ನೀವೇನು ಚಿಂತಿಸಬೇಕಾಗಿಲ್ಲ. ಇವನ ಮೇಲೆ ಕುಮಾರೇಶ್ವರನ ಕೃಪೆ ಸಂಪೂರ್ಣವಾಗಿದೆ. ಈತನು ತನ್ನ ಜೀವನವನ್ನು ಸುಗಮವಾಗಿ ಮಾಡಿಕೊಳ್ಳುವುದೊಂದಿರಲಿ, ಜಗತ್ತಿನ ಸಾವಿರಾರು ಜನರ ಜೀವನದ ನಿರ್ವಹಣೆಗೆ ಕಾರಣೀಭೂತನಾಗುವಂತಹ ಭಾಗ್ಯಶಾಲಿಯಾಗಿದ್ದಾನೆ. ಇವನಿಂದ ಕರ್ನಾಟಕದ ಕಲೆ ಜೀರ್ಣೋದ್ಧಾರವಾಗಬೇಕಾಗಿದೆ" ಎಂದು ಹೇಳಿ ಅವರನ್ನು ಹರಸಿ ಶ್ರೀ ಪುಟ್ಟರಾಜರೊಡನೆ ಶ್ರೀ ಗವಾಯಿಗಳು ಅಲ್ಲಿಂದ ಹೊರಟರು.

ತರುವಾಯ ಶ್ರೀ ಪುಟ್ಟರಾಜರು ಗವಾಯಿಗಳ ಪೂರ್ಣ ಕೃಪೆಗೆ ಪಾತ್ರರಾಗಿ ಸಂಗೀತ ಸಾಹಿತ್ಯಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿಕೊಂಡುದ್ದಲ್ಲದೇ, ಶ್ರೀ ಪಂಚಾಕ್ಷರಿ ಗವಾಯಿಗಳವರಂತೆ ಬ್ರಹ್ಮಚರ್ಯ, ಆಚಾರ, ನೇಮನಿಷ್ಠೆಗಳಲ್ಲಿ ಶ್ರದ್ಧೆವಹಿಸಿ, ಸಾಧಿಸಿ ಗುರುಗಳ ಹಾಕಿಕೊಟ್ಟ ಮಾರ್ಗದಲ್ಲಿ ಚಾಚೂ ತಪ್ಪದಂತೆ ನಡೆದು ಜಗತ್ತಿನ ಹಲವಾರು ಕುಟುಂಬಗಳಿಗೆ ಮಾರ್ಗದರ್ಶಕರಾಗಿ ಕರ್ನಾಟಕದ ಕಲಾಪಿಪಾಸು ಬಡಮಕ್ಕಳ ಕಾಮಧೇನುವಾಗಿದ್ದಾರೆ. ಸಂಗೀತ ಸಾಹಿತ್ಯ ಕಲಾ ಮಹಾ ವಿಶಾರದ, ಉಭಯ ಗಾಯನಾಚಾರ್ಯ, ತ್ರಿಭಾಷಾ ಕವಿ ವೇ. ಪಂ. ಶ್ರೀ ಗುರುವರ್ಯ ಪುಟ್ಟರಾಜ ಗವಾಯಿಗಳವರು ಹಿರಿಯ ಗವಾಯಿಗಳಂತೆ. ಕುರುಡ ಬಡಮಕ್ಕಳಿಗೆ ಅನ್ನ ವಸ್ತ್ರಗಳನ್ನು ನೀಡುತ್ತಾ ಸಂಗೀತ, ನಾಟಕ, ಇತ್ಯಾದಿ ಕಲೆಗಳಲ್ಲಿ ಜಾತಿ–ಕುಲಗಳನ್ನೆಣಿಸದೇ ಕೇವಲ ನೀತಿಗೇನೇ ಬೆಲೆ ಕೊಟ್ಟು ವಿದ್ಯಾದಾನ ಮಾಡುತ್ತಾ ಶ್ರೀ ಪಂಚಾಕ್ಷರ ಗವಾಯಿಗಳಿಂದ ಸ್ಥಾಪಿತವಾದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಧರ್ಮಾರ್ಥ ಸಂಚಾರಕ ಸಂಗೀತ ಮಹಾ ವಿದ್ಯಾಲಯ ಹಾಗೂ ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮ ಇವುಗಳ ಕುಲಪತಿಗಳಾಗಿ ಕನ್ನಡತಾಯಿಯ ಸತ್ಪುತ್ರರಾಗಿದ್ದಾರೆ.

## ನನ್ನದೇನಿಲ್ಲ, ಎಲ್ಲ ಗುರುಕೃಪೆ

ಒಮ್ಮೆ ಸುಮಾರು ಇಪ್ಪತ್ತು ವರ್ಷಗಳಿಗೂ ಹಿಂದೆ ಗವಾಯಿಗಳ ನಾಟಕ ಸಂಸ್ಥೆ ಕೊಪ್ಪಳದಲ್ಲಿ ಮುಕ್ಕಾಂ ಮಾಡಿತ್ತು. ಆಗ ದಿ. ಸದಾಶಿವರಾವ ಗರುಡರು "ಸತ್ಯ

ಸಂಕಲ್ಪ " ನಾಟಕವನ್ನು ಹೊಸದಾಗಿ ಅಭ್ಯಾಸ ಮಾಡಿ ಆಡಬೇಕಿತ್ತು. ಆ ನಾಟಕದ ಉದ್ಘಾಟನೆಯಂದು ಶ್ರೀ ಗರುಡರು ಶ್ರೀ ಹಮ್ಮಿಗಿ ನೀಲಕಂಠಪ್ಪನವರು ನಮ್ಮೆಲ್ಲ ವಿದ್ಯಾರ್ಥಿಗಳೊಡನೆ ಪಾತ್ರವಹಿಸಿದ್ದರು. ಆಗ್ಗೆ ಶ್ರೀ ಪಂಚಾಕ್ಷರಿ ಗವಾಯಿಗಳವರು ಸಂಸ್ಥೆಯ ಭಾರವನ್ನು ಶ್ರೀ ಪುಟ್ಟರಾಜರಿಗೆ ಒಪ್ಪಿಸಿ ತಾವು ಗದುಗಿನಲ್ಲಿ ಅನುಷ್ಠಾನಕ್ಕೆ ಕುಳಿತು ನಿಶ್ಚಿಂತೆಯಿಂದಿದ್ದರು. ಆದರೆ ಆ ದಿನ ಶ್ರೀ ಪಂಚಾಕ್ಷರಿ ಗವಾಯಿಗಳು ಸಹ ಈ ಹೊಸ ನಾಟಕವನ್ನು ನೋಡಲು ಗದುಗಿನಿಂದ ಕೊಪ್ಪಳಕ್ಕೆ ಬಂದಿದ್ದರು. ಜನದ ಒತ್ತಾಯದ ಮೇರೆಗೆ ನಾಟಕದ ಮಧ್ಯ ಶ್ರೀ ಪುಟ್ಟರಾಜರ ಹಾರ್ಮೋನಿಯಂ ಶ್ರೀ ಪಂಚಾಕ್ಷರಿ ಗವಾಯಿಗಳ ತಬಲಾ ವಾದನ ಕಾರ್ಯಕ್ರಮವೇರ್ಪಟ್ಟಿತ್ತು. ಪೂರ್ಯಾಧನಾ ಶ್ರೀ ರಾಗದಿಂದ ಪ್ರಾರಂಭವಾದ ಹಾರ್ಮೋನಿಯಂ ವಾದನ ಶ್ರೋತೃಗಳನ್ನು ಆನಂದಪರವಶರಾಗುವಂತೆ ಮಾಡಿ ವೈಮರೆಸಿತು. ಅರ್ಧ ಘಂಟೆ ಮಾತ್ರ ನಾಟಕದ ಮಧ್ಯ ಕಾರ್ಯಕ್ರಮ ಸಾಕೆಂದು ನಿಶ್ಚಯಿಸಲಾಗಿತ್ತು. ಆದರೆ ಆ ಕಾರ್ಯಕ್ರಮ ದಲ್ಲಿ ಒಂದೇ ರಾಗ ಎರಡು ಘಂಟೆ ಕಾಲ ನುಡಿಸಿದರು. ಶ್ರೀ ಪಂಚಾಕ್ಷರಿ ಗವಾಯಿಗ ಳಂತೂ ತಬಲಾ ಬಾರಿಸುತ್ತ ಹಾರ್ಮೋನಿಯಂ ವಾದ್ಯ ಕೇಳಿ, ಕುಳಿತೇ ಕುಣಿಯು ತ್ತಿದ್ದರು. ಗುರುಶಿಷ್ಯರ ಆ ಕಾರ್ಯಕ್ರಮ ನಾನಂದು ಕೇಳದಿದ್ದರೆ ಮುಂದೆಂದೂ ಸಿಕ್ಕುತ್ತಿರಲಿಲ್ಲ; ಅಂಥ ಸುಯೋಗ. ಕೊನೆಗೆ ಶ್ರೋತೃಗಳು ಶ್ರೀ ಪುಟ್ಟರಾಜರ ಬಳಿ ತಮ್ಮ ಆತ್ಯಾನಂದವನ್ನು ತಡೆಯದೆ ಧನ್ಯವಾದಗಳನ್ನರ್ಪಿಸ ಬಂದಾಗ ಶ್ರೀ ಪುಟ್ಟರಾಜರು " ಈಗ ನಾನು ನುಡಿಸಿದ್ದರಲ್ಲಿ ನನ್ನದೇನಿಲ್ಲ. ಇದೆಲ್ಲಾ ನಮ್ಮೆಲ್ಲರಿಗೆ ಪರಮಗುರುವಾಗಿರುವ ಶ್ರೀ ಪಂಚಾಕ್ಷರಿ ಗವಾಯಿಗಳವರ ಕೃಪೆ " ಎಂದು ನಿರಾಡಂಬರ ದಿಂದ ನಿರಾಹಂಕಾರದಿಂದ ಹೇಳಿದ ಸರ್ವಾರ್ಪಣ ಬುದ್ಧಿಯ ನಿರ್ವಿಕಾರ ಹೃದಯ ಉದ್ಗಾರವನ್ನು ಕೇಳಿ ಜನ ಬೆರಗಾದರು. ಲೋಕದಲ್ಲಿ ಇನ್ನೂ ಇಂತಹ ಪುಣ್ಯಾತ್ಮ ರಿರುವುದರಿಂದ ಕಾಲ ಕಾಲಕ್ಕೆ ಮಳೆ–ಬೆಳೆಗಳಾಗುತ್ತವೆ ಎಂದು ಹೇಳಿದ್ದಲ್ಲದೇ, ಸಂಸ್ಥೆಯು ಆ ಕ್ಯಾಂಪಿನಲ್ಲಿರುವತನಕ ಸರ್ವತೋಮುಖ ಸೇವೆಯು ಜನರಿಂದ ದೊರೆತು ಮನ್ನಣೆಗೆ ಪಾತ್ರವಾಯಿತು. ಶ್ರೀ ಪುಟ್ಟರಾಜ ಗವಾಯಿಗಳವರಿಗೆ ಹಿಂದಿ ಭಾಷೆಯಲ್ಲಿ ಅತ್ಯದ್ಭುತ ಕವಿತಾ ಸಾಮರ್ಥ್ಯವಿದೆ. ಇವರು ಗದ್ಯ ಸಾಹಿತ್ಯವನ್ನು ಬರೆಯುವುದು ಮಾತ್ರವಲ್ಲದೇ ಹಿಂದಿಯಲ್ಲಿ ಅನೇಕ ಉತ್ತಮ ಚೀಜುಗಳನ್ನು ರಚಿಸಿ ಸಂಗೀತ ಪ್ರಪಂಚಕ್ಕೆ ಮಹೋನ್ನತ ಸೇವೆ ಸಲ್ಲಿಸಿದ್ದಾರೆ. ಇವರು ರಚಿಸಿದ ಅನೇಕ ಚೀಜುಗಳು ಬಳಕೆಯಲ್ಲಿರುವುದಲ್ಲದೇ ಅನೇಕ ರೇಡಿಯೊ ನಿಲಯಗಳಿಂದ ಶಿಷ್ಯಪ್ರಶಿಷ್ಯ ರಿಂದ ನಮಗೆ ಕೇಳಲು ಹೇರಳವಾಗಿ ಸಿಕ್ಕುತ್ತದೆ. " ಕಿಶೋರ " ಎಂಬ ಅಂಕಿತದಿಂದ ಇವರು ಚೀಜುಗಳನ್ನು ರಚಿಸಿದ್ದಾರೆ. ಕೆಲವು ಹಾಡುಗಳಲ್ಲಿ ಅಂಕಿತವಿಲ್ಲದೆಯೂ ಇರುವುದು ಕಂಡು ಬರುವುದು. ಈ ರೀತಿ ಇವರು ಕೇವಲ ಸಂಗೀತ ವಿದ್ವಾಂಸ ರಾಗಿರದೆ " ವಾಗ್ಗೇಯಕಾರ " ರೂ ಆಗಿರುವುದು ನಮ್ಮೆಲ್ಲರಿಗೆ ತುಂಬಾ ಹೆಮ್ಮೆಯ ಮಾತಾಗಿದೆ.

ಆದರೆ ನಮ್ಮ ಜನರಿಗೆ ಹಿತ್ತಲ ಗಿಡ ಮದ್ದಲ್ಲ. ನಮ್ಮವರು ಎಷ್ಟೇ ದೊಡ್ಡವರಿರಲಿ, ಪ್ರತಿಭಾವಂತರಿರಲಿ, ಅವರಿಗೆ ಗೌರವ ತೋರಿಸಬೇಕೆಂದರೆ ಖಂಡಿತ ಮನಸ್ಸು ಬರುವುದಿಲ್ಲ. ಬೇರೆ ದೇಶದವರ ಸಾಹಿತ್ಯ ಕಲೆ ಇತ್ಯಾದಿಗಳು ಯಾವ ಮಟ್ಟದಲ್ಲಿದ್ದರೂ ಆ ಹಳಸಿದ ಅನ್ನವೇ ಇವರಿಗೆ ಅಮೃತ. ಆದರೆ ಪುಟ್ಟರಾಜರಿಗೆ ಯಾರ ಹೊಗಳಿಕೆ ತೆಗಳಿಕೆಗಳೂ ಅನಗತ್ಯ. ಅವರು ಕಲೆಗಾಗಿ ಕಲಾಸೇವೆ ಮಾಡುತ್ತಾರೆ. ಅವರು ಮನಸ್ಸನ್ನು ಪ್ರತಿಯೊಂದರಲ್ಲೂ ಸಾಕ್ಷಿಯಾಗಿರಿಸಿಕೊಂಡು ಮನ ಒಪ್ಪುವಂತೆ ಕಲಾ ಸೇವೆ ಮಾಡಿ ಇಹಪರಗಳೆರಡಕ್ಕೂ ತಮ್ಮ ಜೀವನವನ್ನು ಜಗತ್ತಿಗೆ ಮಾದರಿಯಾಗುವಂತೆ "ಕಲೆಯ ನೆಲೆಯೇ ಆತ್ಮದ ಅರಿವು" ಎಂಬ ನಾಣ್ಣುಡಿಯನ್ನು ಸತ್ಯ ಮಾಡಿ ತೋರಿಸಿದ್ದಾರೆ.

## ಸರಳತೆಯ ಪರಮಾವಧಿ

ಒಮ್ಮೆ ಗವಾಯಿಗಳ ಶಾಲೆಯ ಮೊಕ್ಕಾಂ ಹೊಸಪೇಟೆಯಲ್ಲಿತ್ತು. ಆಗ ಅಲ್ಲಿನ ಶ್ರೀಮಂತರ ಮನೆಯವರೊಬ್ಬರು ಶ್ರೀ ಪುಟ್ಟರಾಜ ಗವಾಯಿಗಳವರ ಗಾಯನವನ್ನೇರ್ಪಡಿಸಿದ್ದರು. ಕಾರ್ಯಕ್ರಮವು ಸಾರ್ವಜನಿಕರಿಗೆ ಸಂಬಂಧಿಸಿದ ವಿಶಾಲ ಕಟ್ಟಡ ಒಂದರಲ್ಲಿ ನಡೆಯಿತು. ಇನ್ನೇನು ಕಾರ್ಯಕ್ರಮ ಪ್ರಾರಂಭವಾಗುವ ಸ್ವಲ್ಪ ಮುಂಚೆ ಕಾರ್ಯಕ್ರಮವೇರ್ಪಡಿಸಿದ ಶ್ರೀಮಂತನನ್ನು ಕರೆದು "ನಿಮ್ಮ ತಾಯಿಯವರು ನಮ್ಮ ಕೀರ್ತನೆ, ಗಾಯನಗಳಿಗೆ ಎಂದು ಬರಲು ತಪ್ಪಿದವರಲ್ಲ ಇಂದೇಕೆ ಬರಲಿಲ್ಲ" ಎಂದು ಆದಿನ ಅಲ್ಲಿಗೆ ಗೈರಾಜರಿಯಾಗಿದ್ದ ಶ್ರೀಮಂತನ ಹಣ್ಣಾನ್ನ ಮುದಿತಾಯಿಯ ಬಗ್ಗೆ ವಿಚಾರಿಸಿದರು. ಆಗ ಶ್ರೀಮಂತನು "ಗುರುದೇವಾ, ನನ್ನ ತಾಯಿಗೆ ತುಂಬಾ ವಯಸ್ಸಾಯಿತು. ಎದ್ದು ಕೂಡುವುದೇ ಪ್ರಯಾಸ. ಸಾಲದುದಕ್ಕೆ ತುಂಬಾ ಖಾಯಿಲೆಯಾಗಿ ಹಾಸಿಗೆ ಹಿಡಿದಿದ್ದಾಳೆ. ಈ ದಿನ ನಿಮ್ಮ ಕಾರ್ಯಕ್ರಮ ಕೇಳಿ ತಮ್ಮ ದಿವ್ಯ ದರ್ಶನ ಲಾಭ ಪಡೆಯಲಾಗದುದಕ್ಕಾಗಿ ತುಂಬಾ ವ್ಯಥೆ ಪಟ್ಟಳು" ಎಂದು ಹೇಳಿದ ಶ್ರೀಮಂತನ ಮಾತಿಗೆ ಗವಾಯಿಗಳು ನಕ್ಕು "ನೀನೇನು ಚಿಂತಿಸಬೇಡ! ಗುರುದೇವನು ಸರ್ವರ ಸತ್ಕಾಮನೆಗಳನ್ನೂ ಈಡೇರಿಸುವನು" ಎಂದು ಹೇಳಿ ಗಾಯನವನ್ನು ಪ್ರಾರಂಭಿಸಿ ಎಲ್ಲರನ್ನೂ ಸಂತೋಷಗೊಳಿಸಿದ ಮೇಲೆ ಮಂಗಲ ಹಾಡಿದರು. ಕೊನೆಯಲ್ಲಿ ಶ್ರೀಮಂತನ ಆತಿಥ್ಯ ತಾಂಬೂಲ ದಕ್ಷಿಣೆಯನ್ನು ಸ್ವೀಕರಿಸಿ ಅಲ್ಲಿಂದ ತಮ್ಮ ಬಿಡಾರಾಭಿಮುಖವಾಗಿ ಶಿಷ್ಯರೊಡನೆ ಹೊರಟರು. ಶ್ರೀಮಂತನು ಗುರುಗಳು ಹೊರಟು ಹೋದ ಮೇಲೆ ತನ್ನ ಮಿತ್ರರೊಡನೆ ಹರಟೆ ಹೊಡೆದು ಅಲ್ಲಲ್ಲಿ ಸುತ್ತಾಡಿ ಒಂದು ತಾಸಿನ ನಂತರ ಮನೆಗೆ ಹೋದಾಗ ಶ್ರೀ ಪುಟ್ಟರಾಜ ಗವಾಯಿಗಳು ಕಾರ್ಯಕ್ರಮವನ್ನು ತೀರಿಸಿಕೊಂಡು, ನೇರವಾಗಿ ತನ್ನ ಮನೆಗೆ ಬಂದು, ತಕ್ಷಣವೇ ತಂಬೂರಿ ತಬಲ, ಇತ್ಯಾದಿ ವಾದ್ಯಗಳನ್ನು ಶೃತಿಪಡಿಸಿಕೊಂಡು ಒಂದು ಘಂಟೆ ಕಾಲ ಶ್ರೀಮಂತನ ತಾಯಿಗೆ ಸಂಗೀತ ಕೇಳಿಸಿ ಆಕೆಗೆ ಆಶೀರ್ವದಿಸಿ ಕೇವಲ ಒಂದೇ ನಿಮಿಷದ ಹಿಂದೆ

ಹೊರಟ ಹೋದ ಸುದ್ದಿ ಕೇಳಿ ಅವಾಕ್ಕಾದ, ದಂಗು ಬಡಿದು ಹತ್ತು ನಿಮಿಷ ಶಿಲೆಯಂತೆ ನಿಂತುಬಿಟ್ಟ. ಇಂತಹ ನೂರಾರು ಪ್ರಸಂಗಗಳನ್ನು ನಾನು ಅವರ ಸಾನಿಧ್ಯದಲ್ಲಿದ್ದಾಗ ಕಂಡಿದ್ದೇನೆ. ಆದರೆ ಇವೆಲ್ಲಾ ಅಘಟಿತ ಘಟನೆಗಳನ್ನು ನಂಬುವುದಕ್ಕೆ ಸಾಮರ್ಥ್ಯವೂ ಬೇಕು. ಮೇಲ್ಕಂಡ ಘಟನೆಯಿಂದ ಅವರಲ್ಲಿರುವ ನಿರಭಿಮಾನ, ಭೂತದಯೆ, ಪಶ್ಚಾತ್ತಾಪ ಇವು ವ್ಯಕ್ತವಾಗುತ್ತವೆ. ಕೇವಲ ಒಬ್ಬ ಮುದುಕಿಗಾಗಿ ಅಲ್ಲಿಯವರೆಗೆ ಹೋಗಿ ಶ್ರೀಮಂತನು ಬರುವುದರೊಳಗೆ ಒಂದು ತಾಸು ಹಾಡಿ ಆಕೆಗೆ ಸಂತೋಷಪಡಿಸುವುದರ ಮುಖಾಂತರ ಎಂತಹ ಕಲಾವಿದನಾದರೂ ನಿರಹಂಕಾರಿಯಾಗಿರಬೇಕೆಂಬ ವಿಚಾರವನ್ನು ಜಗತ್ತಿಗೆ ತೋರಿಸಿದ ಶ್ರೀ ಪುಟ್ಟರಾಜ ಗವಾಯಿಗಳಂತಹವರು ನಮ್ಮ ಪವಿತ್ರ ಕರ್ನಾಟಕದವರೆಂದು ಹೇಳುವಾಗ ಕನ್ನಡಿಗರಾದ ಯಾರಿಗಾದರೂ ಅತ್ಯಾನಂದವಾಗುವುದರಲ್ಲಿ ನಿಸ್ಸಂದೇಹ.

ಶ್ರೀ ಪುಟ್ಟರಾಜ ಗವಾಯಿಗಳು ಅನೇಕ ವಾದ್ಯಗಳಲ್ಲಿ ಪಾಂಡಿತ್ಯ ಪಡೆದಿದ್ದಾರೆ. ಹಾಗೂ ಅನೇಕರನ್ನು ವಿವಿಧ ವಾದ್ಯಗಳಲ್ಲಿ ತಯಾರು ಮಾಡಿದ್ದಾರೆ. ಇವರಲ್ಲಿ ತಯಾರಾದ ಅನೇಕ ವಾದ್ಯವಾದನ ಪಟುಗಳು ಭಾರತದ ನಾನಾ ಮೂಲೆಗಳಲ್ಲಿ ಕೀರ್ತಿವಂತರಾಗಿ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ತಬಲಾ, ಸಾರಂಗಿ, ಪಿಟೀಲು, ಹಾರ್ಮೋನಿಯಂ, ಶಹನಾಯಿ, ಸಿತಾರ, ದಿಲ್‌ರುಬಾ, ಮೃದಂಗ, ಕೊಳಲು ಇತ್ಯಾದಿ ವಾದ್ಯಗಳಲ್ಲಿ ಪ್ರಾವೀಣ್ಯತೆ ಪಡೆದ ಇವರ ಶಿಷ್ಯರನ್ನು ನೋಡಿ ಅನೇಕ ದೊಡ್ಡ ದೊಡ್ಡ ವಿದ್ವಾಂಸರು, ಕಣ್ಣಿಲ್ಲದವರೊಬ್ಬರು ಇಷ್ಟೆಲ್ಲಾ ವಿವಿಧ ವ್ಯಾದ್ಯಗಳಲ್ಲಿ ಶಿಷ್ಯರನ್ನು ತಯಾರು ಮಾಡಿರುವುದರ ಬಗ್ಗೆ ಆಶ್ಚರ್ಯ ಪಟ್ಟು ತಮ್ಮ ಹೃತ್ಪೂರ್ವಕ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಕೆಲವು ದಿನಗಳ ಹಿಂದೆ ಭಾರತದ ಸುಪ್ರಸಿದ್ಧ ಶಹನಾಯಿ ವಾದನಕಾರರಾದ ಶ್ರೀ ಬಿಸ್ಮಿಲ್ಲಾಖಾನರ ಕಾರ್ಯಕ್ರಮವು ಗದುಗಿನಲ್ಲಿ ಶ್ರೀ ಪುಟ್ಟರಾಜ ಗವಾಯಿಗಳವರ ಅಧ್ಯಕ್ಷತೆಯಲ್ಲಿ ನಡೆಯಿತು. ನಂತರ ಶ್ರೀ ಖಾನರನ್ನು ಗವಾಯಿಗಳವರು ತಮ್ಮ ಶಾಲೆಗೆ ಆಹ್ವಾನಿಸಿ ತಮ್ಮ ಶಿಷ್ಯ ಶ್ರೀ ಭೀಮಸೇನ ಗಜೇಂದ್ರಗಡರವರಿಂದ ಶಹನಾಯಿ ವಾದನವನ್ನು ನುಡಿಸಿಸಿ ಖಾನರಿಗೆ ಕೇಳಿಸಿದರು. ಖಾನರು ಗಜೇಂದ್ರಗಡರವರ ಶಹನಾಯಿ ವಾದನವನ್ನು ಕೇಳಿ ಸಂತೋಷಭರಿತರಾಗಿ ಶ್ರೀ ಪುಟ್ಟರಾಜ ಗವಾಯಿಗಳನ್ನು ತುಂಬಾ ಹೊಗಳಿದರು. ಇಂತಹ ರಸ ನಿಮಿಷಗಳು ಗವಾಯಿಗಳ ಜೀವನದಲ್ಲಿ ಸಾವಿರಾರು. ಆದರೂ ಗವಾಯಿಗಳಿಗೆ ಮಾತ್ರ ಹೊಗಳಿದರೂ ಸಂತೋಷ, ಇಲ್ಲದಿದ್ದರೂ ಸಂತೋಷ. "ಸೇವೆ ಮನುಷ್ಯನ ಧರ್ಮ. ನನ್ನ ಸಹಜ ಧರ್ಮವನ್ನು ನಾನು ಪಾಲಿಸಿದರೆ ಅದಕ್ಕೆ ಹೊಗಳಿಕೆ ಅಗತ್ಯವಿಲ್ಲ"ವೆಂದೇ ಅವರ ಧೃಡ ನಂಬಿಕೆ.

# ಕೇಂದ್ರ ಮತ್ತು ರಾಜ್ಯ ಸರಕಾರಗಳ ಮನ್ನಣೆ

ಶ್ರೀ ಪುಟ್ಟರಾಜ ಗವಾಯಿಗಳ ಶ್ರೀ ಬಸವೇಶ್ವರ ಪುರಾಣವನ್ನು ನೋಡಿ ಭಾರತದ ರಾಷ್ಟ್ರಪತಿಗಳಾಗಿದ್ದ ಶ್ರೀ ಬಾಬು ರಾಜೇಂದ್ರ ಪ್ರಸಾದರು ತಮ್ಮ ಹೃತ್ಪೂರ್ವಕ ಮೆಚ್ಚಿಗೆಯನ್ನು ವ್ಯಕ್ತಪಡಿಸಿ ದೆಹಲಿಯ ತಮ್ಮ ರಾಷ್ಟ್ರ ಭವನದಲ್ಲಿ ಶ್ರೀ ಪುಟ್ಟರಾಜ ರನ್ನು ಸತ್ಕರಿಸಿದರೆಂಥ ಮೇಲೆ ಅವರ ಆ ಮಹಾಕೃತಿ ಶ್ರೀ ಬಸವೇಶ್ವರ ಪುರಾಣದ ಬಗ್ಗೆ ಹೆಚ್ಚಿಗೆ ಹೇಳುವುದು ಅನಗತ್ಯ. ಇತ್ತೀಚಿನ ವರ್ಷಗಳಲ್ಲಿ ಶ್ರೀ ಪುಟ್ಟರಾಜ ಗವಾಯಿಗಳು ವಿದ್ಯಾಲಯದ ಗೌರವವನ್ನು ಸಾರುವ ಸದುದ್ದೇಶ್ಯದಿಂದ ಮದ್ರಾಸ, ಮಥುರಾ, ರಾಮೇಶ್ವರ ಮೊದಲಾದ ಕಡೆ ಸಂಚರಿಸಿ ಅನೇಕ ಪ್ರಶಸ್ತಿಗಳನ್ನು ಪಡೆದು ಕೊಂಡು ಬೆಂಗಳೂರಿಗೆ ಬಂದು ರಾಜಧಾನಿಯಲ್ಲಿಯೂ ಅನೇಕ ಕಾರ್ಯಕ್ರಮಗಳನ್ನು ನಡೆಸಿ ರಾಜ್ಯಪಾಲರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ ಅವರ ಆಹ್ವಾನದ ಮೇರೆಗೆ ಅರಮನೆಯಲ್ಲಿ ಸಂಗೀತ (ಉಭಯ) ಹಾಡಿ ಮಹಾರಾಜರ ದಿವ್ಯ ಕೃಪೆಗೆ ಪಾತ್ರರಾಗಿದ್ದಾರೆ. ಕಳೆದ ೧೯೬೨ ರಲ್ಲಿ ಮೈಸೂರ ಸಂಗೀತ ನಾಟಕ ಅಕಾಡೆಮಿಯವರು ಇವರಿಗೆ ಪ್ರಶಸ್ತಿ ನೀಡಿ ಗೌರವಿಸಿದ ವಿಚಾರವಂತೂ ನಾಡಿನ ಕಲಾ ವಿದರಿಗೆಲ್ಲ ಆನಂದವನ್ನುಂಟು ಮಾಡಿದೆ. ಇವರು ಬರೆದ " ಅಕ್ಕಮಹಾದೇವಿಯ " ಪುರಾಣದ ಬಗ್ಗೆ ಕರ್ನಾಟಕದ ಕವಿಪುಂಗವರಾದ ಬಳ್ಳಾರಿಯ ಶ್ರೀ ಪಂ. ವೈ. ನಾಗೇಶ ಶಾಸ್ತ್ರಿಗಳು "ಇವರು ಬರೆದ ಈ ಪುರಾಣದಲ್ಲಿ ಅಕ್ಕನವರ ಚಿತ್ರವು ಹೃದಯಂಗಮವಾಗಿ ಪ್ರಕಾಶಿಸುವುದು. ಕವಿಗಳು ಚರ್ಮಚಕ್ಷು ವಿರಹಿತರಾಗಿದ್ದರೂ ಶ್ರೇಷ್ಠತಮವಾದ ಜ್ಞಾನ ಚಕ್ಷುವಿನಿಂದ ಬೆಳಗುತ್ತಿರುವರೆಂಬುದು ಇದರ ಪುರಾಣವನ್ನು ಓದುವವರಿಗೆ ಅವಶ್ಯವಾಗಿ ಬೋಧೆಯಾಗಿಗುವದೆಂದು ಭಾವಿಸುವೆವು " ಎಂದು ಹೇಳಿದ್ದಾರೆ. ಅಂದ ಮೇಲೆ ನನ್ನಂತಹ ಅಜ್ಞನೇನು ಅವರ ಕಾವ್ಯದ ಬಗ್ಗೆ ಹೇಳುವುದಿದೆ.

ಶ್ರೀ ಪುಟ್ಟರಾಜ ಗವಾಯಿಗಳವರಿಗೆ ರಾಜ್ಯ ಸಂ. ನಾ. ಅಕಾಡೆಮಿಯವರು ಪ್ರಶಸ್ತಿಯನ್ನು ನೀಡಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು ಸಹ ಇವರು ಮಾಡಿರುವ ಸಂಗೀತ ಸಾಹಿತ್ಯಗಳ ಅತ್ಯದ್ಭುತ ಸೇವೆಯ ಪ್ರತಿಯಾಗಿ ಗೌರವ ಸೂಚಿಸುವ ಸದುದ್ದೇಶದಿಂದ ಶ್ರೀ ಗವಾಯಿಗಳನ್ನು ಪರಿಷತ್ತಿಗೆ ಆಹ್ವಾನಿಸಿ ಸನ್ಮಾನಿಸಿದರು.

ಒಮ್ಮೆ ಇವರು ಮೈಸೂರಿಗೆ ವೈ. ಆ. ಸಂಗೀತ ವಿದ್ವಾನ್ ಶ್ರೀ ಬಿ.ದೇವೇಂದ್ರಪ್ಪ ನವರಲ್ಲಿ ಶ್ರೀ ಹನುಮಜಯಂತಿಯ ಕಾರ್ಯಕ್ರಮಕ್ಕಾಗಿ ಗದಗಿನಿಂದ ಆಹ್ವಾನಿತರಾಗಿ ಬಂದಿದ್ದರು. ಅಂದು ನಾನು ಸಹ ಗವಾಯಿಗಳ ಕಾರ್ಯಕ್ರಮದಲ್ಲಿ ಕಿರಿದಾದ ಒಂದು ಸೇವೆ ಸಲ್ಲಿಸಲು ಅಲ್ಲಿಗೆ ಹೋಗಿದ್ದೆ. ಅಂದಿನ ಅವರ ವಿದ್ಯಾ ಪ್ರೌಢಿಮೆಯನ್ನು ಮನ ಗಾಣಲು ಮೈಸೂರು ಆಸ್ಥಾನ ವಿದ್ವಾಂಸರು, ಹಿರಿಯರು, ನಾಗರಿಕರು ಅಧಿಕ ಸಂಖ್ಯೆ

ಯಲ್ಲಿ ನೆರೆದಿದ್ದರು. ಶ್ರೀ ಗವಾಯಿಗಳು ಅಂದಿನ ಶ್ರೀ ಹನುಮಜ್ಜಯಂತಿಯ ಅಂಗವಾಗಿ ಸಭೆಯಲ್ಲೆ ಕುಳಿತು ರಚಿಸಿ ಹಾಡಿದ ಸಂಸ್ಕೃತ ಪದ್ಯವೊಂದನ್ನು ಕೇಳಿ, ಎಲ್ಲ ವಿದ್ವಾಂಸರು ತಲೆ ದೂಗಿದರು. ಇವರ ಸಂಗೀತ ಸಾಹಿತ್ಯ ಪ್ರೌಢಿಮೆ, ಆಚಾರ-ನೇಮ ಇತ್ಯಾದಿಗಳನ್ನು ಮನಗಂಡ ಅನೇಕರು ಇವರ ದರ್ಶನವಾದದ್ದೇ ನಮಗೆ ಮಹದ್ಭಾಗ್ಯವೆಂದು ಹೊಗಳಿದರು. ಉತ್ತರ ಮತ್ತು ದಕ್ಷಿಣ ಸಂಗೀತಗಳ ತವರುಮನೆಯಾದ ಮೈಸೂರು ಶ್ರೀಮನ್ಮಹಾರಾಜರ ಆದಿ ದೈವತೆಯಾದ ಶ್ರೀ ಚಾಮುಂಡೇಶ್ವರಿಯ ಸನ್ನಿಧಿಯಲ್ಲಿ ಕರ್ನಾಟಕ ರತ್ನ ಸಿಂಹಾಸನವನ್ನು ತಲೆಯಲ್ಲಿ ಹೊತ್ತು ನಿಂತು ಪ್ರಪಂಚಕ್ಕೆ ತನ್ನ ಹೆಸರನ್ನು ಮಾದರಿಯಾಗಿ ಮಾಡಿರುವ ಮೈಸೂರು ನಗರದಲ್ಲಿ ಗೌರವ ಮರ್ಯಾದೆಯನ್ನು ಸಂಪಾದಿಸಿದ ಶ್ರೀ ಪುಟ್ಟರಾಜರು ನಮ್ಮ ಕನ್ನಡ ನಾಡಿನವರೆಂದು ಹೇಳುವಾಗ ನಮಗಾಗುವ ಆನಂದ ವರ್ಣನಾತೀತ.

ಶ್ರೀ ಪುಟ್ಟರಾಜ ಗವಾಯಿಗಳವರಿಗೆ ರಾಜ ಗೌರವ ದೊರೆಯಿತು, ರಾಜ್ಯ ಅಕಾಡೆಮಿಯ ಗೌರವ ದೊರೆಯಿತು, ಕನ್ನಡಮ್ಮನ ಗುಡಿಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ, ಪರಿಷತ್ತಿನಲ್ಲಿ ಮತ್ತು ಸಮ್ಮೇಳನಗಳಲ್ಲಿ ದೊರೆಯಿತು. ಮಹಾತ್ಮಾ ಗಾಂಧಿಯವರ ಪಟ್ಟ ಶಿಷ್ಯರೂ ಭಾರತದ ಪ್ರಥಮ ಅಧ್ಯಕ್ಷರೂ ಆಗಿದ್ದ ದಿ. ಶ್ರೀ ಬಾಬೂ ರಾಜೇಂದ್ರ ಪ್ರಸಾದರ ಮೆಚ್ಚಿಗೆಯನ್ನೂ ಪಡೆದರು. ಆದರೆ ಈಗ ಉಳಿದಿರುವುದು ಕೇಂದ್ರದ ಸಂಗೀತ ನಾಟಕ ಅಕಾಡೆಮಿಯ ಗೌರವ. ಆ ಗೌರವ ಆದಷ್ಟು ಬೇಗ ಇವರಿಗೆ ಲಭಿಸಲೇಬೇಕು. ತಾವು ಕುರುಡರಾಗಿದ್ದು ಕಣ್ಣಿದ್ದವರು ಇಲ್ಲದವರಿಗೆ ಕುಲಗೋತ್ರಗಳನ್ನೆಣಿಸದೇ ಸಾವಿರಾರು ಜನರಿಗೆ ಅನ್ನ-ವಸ್ತ್ರಗಳನ್ನು ಕೊಡುತ್ತಾ ೪೦ ವರ್ಷಗಳಿಂದ ಕರ್ನಾಟಕದ ಬಡ-ಮಕ್ಕಳ ಉದ್ಧಾರಕ್ಕಾಗಿ ಶ್ರಮಿಸುತ್ತಿರುವ ಇವರಿಗೆ ಕೇಂದ್ರದ ಅಕಾಡೆಮಿಯು ಗೌರವ ಕೊಟ್ಟು ಪ್ರಶಸ್ತಿಯನ್ನು ಕೊಡುವುದರ ಮುಖಾಂತರ ಕನ್ನಡ ನಾಡಿಗೆ ಗೌರವವನ್ನು ಕೊಡಬೇಕೆಂದು ನಾನು ಸೂಚಿಸುವುದು ಅಪ್ರಾಸಂಗಿಕವಾಗಲಾರದೆಂದು ನಂಬುತ್ತೇನೆ.

ಶ್ರೀ ಪುಟ್ಟರಾಜರಿಗೆ ಈಗ ಐವತ್ತು ವರ್ಷಗಳು ತುಂಬಿ ಬಂದಿವೆ. ಅವರನ್ನು ಅವರ ಅಭಿಮಾನಿಗಳೂ, ಭಕ್ತರು ಮತ್ತು ಶಿಷ್ಯರೂ ಆದ ನಾವೆಲ್ಲ ತುಂಬಾ ಭಕ್ತಿಯಿಂದ ಆದರಿಸುವ ಈ ಸುಪ್ರಸಂಗದಲ್ಲಿ ಅವರ ಆಶೀರ್ವಾದವನ್ನು ಪಡೆಯುವ ಸದುದ್ದೇಶ್ಯದಿಂದ ಈ ಜ್ಞಾಪಕಾರ್ಥ ಹೊತ್ತಿಗೆಯನ್ನು ಪ್ರಕಟನೆಯ ಸಂಕಲ್ಪ ಮಾಡಿರುವ ವಿಚಾರ ತುಂಬ ಸ್ತುತ್ಯಾರ್ಹವಾದುದು. ಈ ಮಹತ್ಕಾರ್ಯವನ್ನು ನಡೆಸುತ್ತಿರುವ ಸುವರ್ಣೋತ್ಸವ ಸಮಿತಿಯವರು ವಂದನಾರ್ಹರು. ಪರಮ ಪೂಜ್ಯ ಗುರುವರೇಣ್ಯ ವೇ. ಪಂ. ಶ್ರೀ ಪುಟ್ಟರಾಜ ಗವಾಯಿಗಳ ವಿಚಾರವನ್ನು ಬರೆಯುವುದಕ್ಕೆ ಹೊರಟ ನನ್ನ ಕಾರ್ಯ, ಸಣ್ಣ ಬಿಂದಿಗೆಯೊಂದರಲ್ಲಿ ಸಮುದ್ರವನ್ನೆಲ್ಲ ತುಂಬಲು ಪ್ರಯತ್ನ ಮಾಡಿದಂತಾಗಿರುವುದಾದರೂ ಗುರುಗಳ ಸೇವೆಯನ್ನು ಈ

ರೂಪದಲ್ಲಾದರೂ ಮಾಡುವ ಸುಸಂದರ್ಭವನ್ನು ಕಳೆದುಕೊಳ್ಳದೇ ಈ ಸಣ್ಣ ಲೇಖನ ವನ್ನು ಬರೆದುದಾಗಿದೆ. ಈ ಲೇಖನ ಬರೆಯುವುದಕ್ಕಾಗಿ ದೊರೆತ ಜೀತನವು ಸಹ ಆ ಗುರುದೇವನ ಕೃಪೆಯಿಂದಲೇ ದೊರೆತುದಾದ್ದರಿಂದ "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೊ" ಎಂಬಂತೆ ಇದೆಲ್ಲವೂ ಗುರುಪಾದಕ್ಕೇ ಸೇರಿದು ದಾಗಿದೆ. ಜೊತೆಗೆ ಶ್ರೀ ಪುಟ್ಟರಾಜರು ವಿದ್ಯಾಧ್ಯಯನ ಮಾಡಿ ಗುರುವಿನ ಕೃಪೆಗೆ' ಪಾತ್ರರಾಗಿ ಈಗ ಪಾಲಕರಾಗಿರುವ ಸಂಸ್ಥೆಯಾದ ಶ್ರೀ ಕುಮಾರೇಶ್ವರ ಕೃಪಾ ಪೋಷಿತ ಸಂಗೀತ ಮಹಾ ವಿದ್ಯಾಲಯಕ್ಕೂ ಐವತ್ತು ವರ್ಷಗಳಾಗಿವೆ. ಮತ್ತು ಮೇಲ್ಕಂಡ ವಿದ್ಯಾಲಯದ ಆಶ್ರಮದಲ್ಲಿ ಸ್ಥಾಪಿತವಾದ ನಾಟಕ ಸಂಸ್ಥೆಗೆ ಇಪ್ಪತ್ತೈದು ವರ್ಷಗಳಾಗಿ ಪವಿತ್ರವಾದ ತ್ರಿವೇಣಿ ಸಂಗಮವಾಗಿದೆ. ಇಂತಹ ಒಂದು ಉತ್ಸವ ದಲ್ಲಿ ಭಾಗಿಗಳಾದ ನಮ್ಮೆಲ್ಲರ ಸಂತೋಷಕ್ಕೆ ಪಾರವೇ ಇಲ್ಲದಾಗಿದೆ. ಇಂತಹ ಸಂತೋಷ ಶ್ರೀ ಪುಟ್ಟರಾಜ ಗವಾಯಿಗಳ ನೂರನೇ ಹುಟ್ಟಿದ ಹಬ್ಬದ ದಿನವೂ ಶಿಷ್ಯ ರಾದ ನಮ್ಮೆಲ್ಲರಿಗೂ ದೊರೆತು ಅವರು ಅಂದು ಸಹ ನಮ್ಮೆಲ್ಲರನ್ನು ಇದೇ ರೀತಿ ಆಶೀರ್ವದಿಸಲಿ ಎಂಬ ಬಯಕೆಯನ್ನು ಆ ಗುರುವಿನಡಿಯಲ್ಲಿ ಸಲ್ಲಿಸಿ ವಿರಮಿಸುತ್ತೇನೆ.

# ಕಾಯಕನಿರತ ಶ್ರೀ ಪುಟ್ಟರಾಜರು

ಡಾ॥ ಕಲ್ಲಿನಾಥಸ್ವಾಮಿ ಹಿರೇಮಠ, ದ್ಯಾಂಪುರ, ಒಂಕಲಕುಂಟಿ.

ಮನುಷ್ಯನು ಕೇವಲ ಹೊಟ್ಟೆ ತುಂಬಿಕೊಂಡ ಮಾತ್ರಕ್ಕೆ ತನ್ನ ಜೀವನದ ಗುರಿಯನ್ನು ಮುಟ್ಟಲಾರ. ಸದ್ಧರ್ಮ, ಸದಾಚಾರ, ಶಾಂತಿ, ಸಹಿಷ್ಣುತೆ, ಸಮತಾ ಭಾವ ಮೊದಲಾದ ಸದ್ಗುಣಗಳಿಂದ ಒಳ್ಳೆಯ ಬಾಳನ್ನು ಸಾಧಿಸಬೇಕು. ಈ ಒಳ್ಳೆಯ ಬಾಳಿನ ಸಾಧನೆಗೆ ಒಂದು ಚಿನ್ನದಂತಹ ಮಾರ್ಗವನ್ನು ಎಂಟುನೂರು ವರ್ಷಗಳ ಹಿಂದೆ ಬಸವಾದಿ ಪ್ರಮಥರು ಶಿವಾನುಭವ ಮಂಟಪದಲ್ಲಿ ಕಂಡು ಹಿಡಿದರು. ಅದುವೆ ಕಾಯಕ !

ಐಹಿಕ ಮತ್ತು ಆಧ್ಯಾತ್ಮಿಕ ಗುರಿಗಳನ್ನು ಮುಟ್ಟಲು ಶರಣರು ಕಾಯಕದ ಕಟ್ಟಳೆಯನ್ನು ಒತ್ತಾಯದಿಂದ ವಿಧಿಸಿದರು. ಈಗ ನಾವು ನಿತ್ಯವೂ ಕೇಳುತ್ತಿರುವ ಶ್ರಮದಾನ ಭೂದಾನ ಸಂಪದ್ದಾನಾದಿಗಳನ್ನು ಬಸವಣ್ಣನವರು ಅಂದೇ ಪ್ರಯೋಗ ಮಾಡಿ, ಅವುಗಳಿಗಿಂತಲೂ ಬಹು ವಿಶಾಲಾರ್ಥವುಳ್ಳ ಕಾಯಕ ಎಂಬ ಅಮೋಘ ಹೆಸರಿನಿಂದ ಲೋಕಕ್ಕೆ ಕಾಣಿಕೆಯಾಗಿ ಕೊಟ್ಟಿರುವರು.

ಹೀಗೆ ಬಸವಾದಿ ಪ್ರಮಥರು ಆಚರಿಸಿ ತೋರಿದ ಕಾಯಕವನ್ನು ಸಂಪೂರ್ಣ ಅಳವಡಿಸಿಕೊಂಡು ನಡೆಯುತ್ತಿರುವವರಲ್ಲಿ, ಇಂದು ಶ್ರೀ ಪುಟ್ಟರಾಜರ ಸ್ಥಾನ ಬಹು ಹಿರಿದಾದುದು. ಅವರು ಸ್ಥಿರ ಬುದ್ಧಿಯುಳ್ಳವರು; ಅಂತೆಯೇ ಸ್ಥಿತಪ್ರಜ್ಞರು. ಸಂಯಮ ವಿಲ್ಲದೆ ಬುದ್ಧಿ ಸ್ಥಿರವಾಗಲಾರದು. ಅವರು ಸರ್ವೇಂದ್ರಿಯಗಳಿಗೂ ಮೂಗು ದಾರ ಹಾಕಿ, ಅವುಗಳನ್ನು ಕಾಯಕದಲ್ಲಿ ಓಡಿಸಿ ಸ್ಥಿತಪ್ರಜ್ಞರಾಗಿರುವರು. ಆದರೆ ಇಂದ್ರಿಯ ಸಂಯಮವು ಸುಲಭವಲ್ಲ. ಇಂದ್ರಿಯಗಳನ್ನು ಬಳಸದೆಯೇ ಇರು ವದೂ ಒಂದು ರೀತಿಯಿಂದ ಸುಲಭವಾಗಬಹುದು. ಮೌನ ನಿರಾಹಾರಗಳೂ ಅಷ್ಟು ಕಠಿಣವಾಗದಿರಬಹುದು; ಇಂದ್ರಿಯಗಳನ್ನು ಮನಬಂದಂತೆ ಹರಿಬಿಡುವದಂತೂ ಎಲ್ಲರಿಗೂ ಬಹಳ ಹಗುರಾದುದು. ಆದರೆ ಆಮೆಯು ಅಪಾಯದ ಸಮಯದಲ್ಲಿ ತನ್ನ ಅಂಗಗಳನ್ನೆಲ್ಲ ಒಳಕ್ಕೆಳೆದುಕೊಂಡು, ನಿರಪಾಯದಲ್ಲಿ ಅವನ್ನು ಬಳ ಸುವಂತೆ, ವಿಷಯ ಸುಖದಲ್ಲಿ ಮಾತ್ರ ಇಂದ್ರಿಯಗಳನ್ನು ಕಟ್ಟಿ ಹಾಕಿ, ಕಾಯಕದಲ್ಲಿ ಅವುಗಳನ್ನುಪಯೋಗಿಸುವದು ಸಂಯಮ. ಇದಕ್ಕೆ ಬಹಳ ಪ್ರಯತ್ನ ಬೇಕು. ಇಂತಹ ಹೋರಾಟದ ಮಹಾ ಪ್ರಯತ್ನವನ್ನು ಪುಟ್ಟ ರಾಜರು ತಮ್ಮ ಜೀವನದ ಪೂರ್ವಾರ್ಧದಲ್ಲಿ ಮಾಡಿ, ಕರ್ಮಯೋಗಿ ಗಳಾಗಿ ಯಶಸ್ವಿಗಳಾಗಿರುವರು.

ಸಮಾಜಕ್ಕೆ ಮುಡಿಪಾಗಿರುವ ಪುಟ್ಟರಾಜರ ಬಾಳು ನಾಡಿಗೆ ಒಂದು ಆದರ್ಶ ವಾಗಿದೆ. ಹರಿಜನರಿಂದ ಹಿಡಿದು ಬ್ರಾಹ್ಮಣ, ಮುಸಲ್ಮಾನ, ಕ್ರೈಸ್ತರವರೆಗೆ ಇವರ

ಕಾಯಕ ಕ್ಷೇತ್ರವು ವ್ಯಾಪಿಸಿದೆ. ದಾಸೋಹಂಭಾವದಿಂದ ಶಿವಾರ್ಪಿತ ಬುದ್ಧಿಯಿಂದ ಸಂಗೀತ, ಎಲ್ಲ ವಿಧ ವಾದ್ಯ, ನಾಟ್ಯ, ಕನ್ನಡ ಹಿಂದಿ ಸಂಸ್ಕೃತ ಸಾಹಿತ್ಯ ಮತ್ತು ಕುರುಡರ ಓದು-ಬರೆಹಗಳನ್ನು ನಿತ್ಯವೂ ನೂರಾರು ವಿದ್ಯಾರ್ಥಿಗಳಿಗೆ ಪ್ರಸಾದವಿತ್ತು, ಶ್ರೀ ಕುಮಾರೇಶ್ವರ ಸಂಗೀತ ಸಾಹಿತ್ಯ ಮಹಾ ವಿದ್ಯಾಲಯದ ಗುರುಕುಲದಲ್ಲಿ ಪ್ರಧ್ಯಾಪಕರಾಗಿ, ಅಂಗಹೀನರಾದಿಯಾಗಿ ಸಕಲರಿಗೂ ಶಿಕ್ಷಣ ಕೊಡುತ್ತಿರುವರು. ತಾವು ಜನ್ಮಾಂಧರಾಗಿದ್ದರೂ ಎಷ್ಟೋ ನಾಟಕ, ಪುರಾಣ, ಶತಕಗಳನ್ನು ಕನ್ನಡ, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ರಚಿಸಿ, ನಾಡಿಗೆ ಅರ್ಪಿಸಿರುವರು. ಅವರ ಗ್ರಂಥಗಳು ಭಕ್ತರಿಗೆ ಮುಮುಕ್ಷುಗಳಿಗೆ ದಾರಿ ದೀಪವಾಗಿವೆ.

ಶ್ರೀ ಪುಟ್ಟರಾಜರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಸಮಾಜವೇ ತಾನು, ತಾನೇ ಸಮಾಜವೆಂದು ತಿಳಿದು, ಆಹಾರ-ವಿಹಾರ-ನಡೆ-ನುಡಿ ಎಲ್ಲವುಗಳಲ್ಲಿ ಶುಚಿತ್ವವನ್ನು ಕಾಯ್ದುಕೊಂಡು, ವಿಶ್ವಾತ್ಮ ಭಾವನೆಯುಳ್ಳವರಾಗಿ, ಶಿವಾರ್ಪಣ ಬುದ್ಧಿಯಿಂದ, ಫಲ ತ್ಯಾಗಪೂರ್ವಕ ಕಾಯಕ ಮಾಡುತ್ತಿರುವ ಅವರ ಜೀವನವೇ ಕಾಯಕಮಯವಾಗಿರುವದು. ಈ ಗಾನಯೋಗಿಯ ಬಾಳು ಅಗಾಧವಾಗಿದೆ. **"ಮಾಡುವವನು ನೀನೇ, ಮಾಡಿಸಿಕೊಳ್ಳುವವನೂ ನೀನೇ; ನಾನು ಕೇವಲ ನಿಮಿತ್ತ ಮಾತ್ರ" ಎಂದು ಭಾವಿಸಿ, ತಮ್ಮ ಕಾಯಕರೂಪೀ ಲಿಂಗದಲ್ಲಿ ಸಮರಸಗೊಂಡಿರುವ ಅವರ ಜೀವನವು ದಿವ್ಯ ಜೀವನ! ಭವ್ಯ ಬಾಳು!!**

ವೀರಶೈವ ಸಮಾಜದಲ್ಲಿ ಜನಿಸಿದ್ದರೂ ಪುಟ್ಟರಾಜರ ಕಾಯಕದ ವ್ಯಾಪ್ತಿ ಆ ಜನಾಂಗಕ್ಕೆ ಮಾತ್ರ ಸೀಮಿತವಾದುದಲ್ಲ. ಮಾನವ ಜನಾಂಗಕ್ಕೆ ವ್ಯಾಪಕವಾದುದು. ಆದುದರಿಂದ ಅವರು ನಮ್ಮವರು! ನಿಮ್ಮವರು!! ಎಲ್ಲರವರು!!! ಅಂತೆಯೇ ಅವರಿಗೆ ಸಂಗೀತ ಸಾಹಿತ್ಯ ಸಮ್ಮೇಳನಗಳೂ ವಿದ್ವತ್ ಪರಿಷತ್ತುಗಳೂ ಮೈಸೂರು, ಬೆಂಗಳೂರು, ತ್ರಿಚಿನಾಪಳ್ಳಿ, ಮದ್ರಾಸ, ದಿಲ್ಲಿಗಳಂತಹ ನಗರವಾಸಿಗಳೂ ಪ್ರಶಸ್ತಿ ಪತ್ರಿಕೆ, ಸುವರ್ಣ ಪದಕ ಕಾಣಿಕೆಗಳನ್ನು ಅರ್ಪಿಸಿ ಪುನೀತರಾಗಿರುವರು. ಇಷ್ಟೇ ಅಲ್ಲ, ಅವರು ರಾಷ್ಟ್ರಪತಿಗಳಿಂದ ಸಹ ಸನ್ಮಾನಿತರು. ಧನ್ಯ ಧನ್ಯ! ಇಂತಹ ಸತ್ಪುತ್ರನನ್ನು ಹಡೆದ ವೀರಶೈವ ಸಮಾಜವೂ ಕರ್ನಾಟಕ ಮಾತೆಯೂ ಭಾರತಾಂಬೆಯೂ ಧನ್ಯರು!

ಒಟ್ಟಾರೆಯಾಗಿ ಕಾರ್ಯನಿರತ ಪುಟ್ಟರಾಜರ ಇರುವನ್ನು ಪುರಾತನರ ವಚನವನ್ನೇ ತುಸು ಮಾರ್ಪಡಿಸಿ ಹೇಳುವದಾದಲ್ಲಿ— **"ಶ್ರೀ ಗುರುದೇವ ಪಂಚಾಕ್ಷರ ಗಾನಯೋಗಿಯೆ ದೇಹ, ಕುಮಾರೇಶನೆ ಪ್ರಾಣ, (ಹಾವೇರಿ) ಶಿವಬಸವೇಶನೆ ಕಳೆ, ಸದ್ಭಕ್ತವೃಂದವೆ ಬಾಹು, ಶರಣ ಸಂತತಿಯೆ ನುಡಿವ ನಾಲಗೆ, ಭಕ್ತಿ-ಕ್ರಿಯಾ-ಜ್ಞಾನಗಳೆ ಕಣ್ಗಳು, ಸಹಸ್ರಾವಧಿ ಶಿಷ್ಯರೆಲ್ಲರೂ ಕೂಡಿದೊಂದೊಡಲಾಗಿ"** ಇರುವ ಆ ಅನಾಸಕ್ತಯೋಗಿಯ ತಿಳಿಬಾಳಿನ ಸುವರ್ಣ ಮಹೋತ್ಸವದಲ್ಲಿ, ಈ ಲೇಖನರೂಪಿ ಕುಸುಮವನ್ನು ಆತನ ದಿವ್ಯ ಪಾದಗಳಲ್ಲಿ ಮುಡಿಸಿ ಧನ್ಯನಾಗುತ್ತೇನೆ.

## ಸರ್ವವಿದ್ಯಾ ವಿಶಾರದ

# ಶ್ರೀ ಪುಟ್ಟರಾಜ ಗವಾಯಿ

### ( ಧರ್ಮಜ್ಞ ತ್ರಿಪದಿಗಳು )

### ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ.

ಸರ್ವ ವಿದ್ಯಾ ವಿಶಾರದನೆನೆ ಪುಟ್ಟರಾಜನ್
ಸರ್ವೇಶನೊಲುಮೆಯಾಂತು ಬೆಳಗುವನು
ಉರ್ವಿಯೊಳು ಕಂಗೊಳಿಸಿ ! ಧರ್ಮಜ್ಞ ||೧||

ಸಂಗೀತ ಸಾಹಿತ್ಯ ನಾಟಕ ಗೀತ ಕಾವ್ಯ
ಕಂಗಳಿಲ್ಲದೆ ಕೊಡಲು ದಿವ್ಯಕೃತಿ ರತ್ನಗಳ್
ಲಿಂಗದೃಷ್ಟಿ ಬಲಿಸಿ ! ಧರ್ಮಜ್ಞ ||೨||

ಅಂಧನಾದಡೇನು " ಹಿಂದಿ ಬಸವ ಪುರಾಣ " ವನು
ಚೆಂದದಿಂ ರಚಿಸಿ ಬಸವತತ್ವ ಪರಿಮಳದ
ಗಂಧವನು ಸುರಿಸಿಹನು ! ಧರ್ಮಜ್ಞ ||೩||

ಭಾನು ತೇಜವದು ಲೋಕ ಬೆಳಕನು ನೀಡೆ ! ಕಾಮು-
ಧೇನು ಕಲ್ಪವೃಕ್ಷ ಚಿಂತಾಮಣಿಗಳೆಲ್ಲ
ಮಾನವಗಿಷ್ಟ ಫಲವೀಗೆ ! ಧರ್ಮಜ್ಞ ||೪||

ಫಲವೀವ ಕಾಮಧೇನು ಮೇಣ್ ಭಾಸ್ಕರಗೆ ನಿತ್ಯ
ಬೆಳಗುವೋಲ್ ಮೂಲ ತೇಜವನಿತ್ತು ಪೊರೆವ
ಸಲೆ ಸ್ವಾಮಿ ಮಿಗಿಲಲ್ತೆ ? ಧರ್ಮಜ್ಞ ||೫||

ಇಂತಪ್ಪ ಮಹಾದೇವನನೆ ಕೊಡುತಿಹರು !
ಸಂತ ಶರಣರು ನಿಂತು ಧರೆಯ ಜನತತಿಗೆ
ಅಂತಕನ ಗೆಲಿದು ! ಧರ್ಮಜ್ಞ ||೬||

ಶಿವನಿಂದಧಿಕರಲ್ತೇ ? ಶರಣ ಸಂತ ಮಹಿಮರು
ಶಿವಶರಣ ಪಥದೊಳಿಂದು ಪುಟ್ಟರಾಜನ್
ತವೆ ರಾಜಿಪನಲ್ತೇ ? ಧರ್ಮಜ್ಞ ||೭||

ತಂತು ವಾದ್ಯಗಳ ನುಡಿಸುವಾ ಜಾಣ್ಮೆಯೆನಿತೋ !
ತುಂತುರ್ಪನಿಗಳಂತೆ ಬರ್ಪ ಗಾನ ತಾನಗ-
ಳೆಂತೋ ಗಾನಗಂಗೆ! ಧರ್ಮಜ್ಞ ||೮||

ಕಾವ್ಯಾಂಗನೆಯೆ ಕೈ ಪಿಡಿಯೆ ಕಮನೀಯ ಕಾವ್ಯ !
ದಿವ್ಯಕೃತಿ ರತ್ನಕಾಂತಿ! ಮೇಣ್ ನಾಟ್ಯಕಲಾ
ನವ್ಯ ಶಾಂತಿ ಶರಧಿ! ಧರ್ಮಜ್ಞ ||೯||

ಪಂಚಾಕ್ಷರ ಗವಾಯಿಗಳಾ ಪುಣ್ಯ ಕೃಪಾದೃಷ್ಟಿ
ಸಂಚಯಿಸಿ ನಿಂದ ಪ್ರತಿತೇಜ ಪುಟ್ಟರಾಜನೆನೆ
ಮುಂಚೆ ಗುರು ಕೃಪೆಯಲ್ತೇ? ಧರ್ಮಜ್ಞ ||೧೦||

ಮುಕ್ತ್ಯಂಗನೆಯು ತಾ ಬಂದು ಶರಣರಂಗಳದಿ
ಮೌಕ್ತಿಕದಾ ಸೇಸೆಯನಿಕ್ಕಿ ಕುಣಿಯೆ! ಶರಣರ್ಗೆ
ಮುಕ್ತಿಯಾಶೆಯಿಲ್ಲ! ಧರ್ಮಜ್ಞ ||೧೧||

ನಾಟ್ಯ ಸಂಸ್ಥೆಯನು ನಡೆಯಿಸುತೆ ಬರೆಯುವನು ಗ್ರಂಥ
ಸಾಟಿಯೆನಿಸುವರಿಲ್ಲ ಭಾರತದಿ! ಸಕಲ ಕಲೆಗೆ
ಮೇಟಿಯೆನೆ ಪುಟ್ಟರಾಜ! ಧರ್ಮಜ್ಞ ||೧೨||

ರಸಿಕರೊಳ್ ರಸಿಕನೆನೆ ಶರಣರೊಳ್ ಶರಣನೆನೆ
ಒಸೆದು ದೇವಸೃಷ್ಟಿಗೆ ಕಲಾ ಸೇವೆ ಸಲಿಸೆ!
ಶಶಿಕಲಾ ಬೆಳಕು! ಧರ್ಮಜ್ಞ ||೧೩||

ಕಂಗೊಳಿಸೆ ಗದುಗಿನೊಳ್ ಗಾನವಿದ್ಯಾನಿಲಯವೆನೆ
ತುಂಗ "ವೀರೇಶ್ವರ ಪುಣ್ಯಾಶ್ರಮ" ವು ಕುರುಡರಾ
ಸಂಗೀತ ಕಲಾ ತವರು! ಧರ್ಮಜ್ಞ ||೧೪||

ಮಹದ್ವ್ಯಕ್ತಿ ಜೀವಿತ ಕಾಲದೊಳವನ ನೋಡದೆ
ಬಹು ಬಣ್ಣಿಪುದವನು ಹೋದ ಮೇಲೆ ಜನತೆ!
ಬಹಳಂಥತನವಿದು! ಧರ್ಮಜ್ಞ ||೧೫||

ಸತ್ಯವನು ಕಾಂಬ ನಿಜ ದೃಷ್ಟಿ ಸಮಾಜಕ್ಕಿಲ್ಲ!
ಸತ್ಯ ವ್ಯಕ್ತಿಯಳಿದ ಮೇಲವಗೆ ಮಂದಿರಕಟ್ಟಿ
ನಿತ್ಯ ರೋದಿಪರು! ಧರ್ಮಜ್ಞ ||೧೬||

ಉಭಯ ಗಾಯನಾಚಾರ್ಯ, ಪಂಚಾಕ್ಷರಿಯ ಶಿಷ್ಯಂಗೆ!
ಅಭಯ ವಚನವೀಯೆ ಹಾನಗಲ್ಲು ಯತಿವರನು!
ಪ್ರಭಾ ಮೂರ್ತಿಯಾದ! ಧರ್ಮಜ್ಞ ॥೧೭॥

ಗುರುತರ ಹೊಣೆ ಹೊತ್ತು ಸಾಗಿಹನು ಪುಟ್ಟರಾಜ!
ಗುರು ಪಂಚಾಕ್ಷರಿಯ ಕೃಪಾ ಛತ್ರದಲ್ಲಿ!
ಪುರಹರನ ದೂತ! ಧರ್ಮಜ್ಞ ॥೧೮॥

ಸಹಜ ಸುಂದರವದನ ಗುರುಭಕ್ತಿ ಸಂಪನ್ನ
ಮಹಾ ತೇಜ ಶಿವಶಕ್ತಿಸಂಪದ ಕಳೆಯು!
ಮಹಿಮನಲ್ತೆಯಿವನು! ಧರ್ಮಜ್ಞ ॥೧೯॥

ಭಸಿತ ಭೂಷಣನು ರುದ್ರಾಕ್ಷಿಧಾರಣನು!
ಒಸೆದು ನಿತ್ಯ ಪೂಜಿಪನು ಲಿಂಗದೇವನನು!
ಯಶೋಭರಿತನಿವನು! ಧರ್ಮಜ್ಞ ॥೨೦॥

ಧನ್ಯೆ ಮೂಲೋಕಮಾನ್ಯೆ ಮಾತೆ ಭವ್ಯ ಭಾರತಿಯೆ!
ಧನ್ಯಕೀರ್ತಿ ಪುತ್ರರ್ಗೆ ಜನ್ಮವಿತ್ತೆ! ಕವಿ
ಧನ್ಯಗೀತ ಪೇಳ್ವ! ಧರ್ಮಜ್ಞ ॥೨೧॥

ಗಣ್ಯ ವ್ಯಕ್ತಿ ಚಿತ್ರ ಚೆನ್ನ ಕನ್ನಡದಿ ಬರೆವ!
ಪುಣ್ಯಕಾರ್ಯ ಮನೆ "ಕನ್ನಡ ಕವಿ ಕಾಳಿದಾಸ"
ಧನ್ಯವಲ್ತೇ ನಾಡು? ಧರ್ಮಜ್ಞ ॥೨೨॥

# ಪುಟ್ಟರಾಜ ಕವಿವರ ವಿಜಯ ಭೋ!

( ಕಂದ ಪದ್ಯಗಳು )

ಗೌರವ ಪುಣ್ಯ ಶರೀರಾ।
ಧೀರಾ ಪುಟ್ಟಳಿದ ಕುಮಾರೇಶ ಪದಚರಾ॥
ದಾರುಣ ರಾಜಸದೂರಾ।
ಮೀರಿದೆ ಜಗದೊಳ್ ಗಾನದೆ ಪುಟ್ಟ ಕವೀಂದ್ರಾ ॥೧॥

ತಾವಕ ಕವನಂ ತ್ರೈಭಾ।
ಷಾವರ್ಯಂ ವಿಷಯ ಸಾರ ಪದ ಗಾಂಭೀರ್ಯಂ॥
ಭಾವಿಸೆ ವರ್ಜಿತ ದೋಷಂ।
ಕೇವಲ ರಸಿಕೇಶ ಪೊಗಳಲಾರೆ ಘನತೆಯಂ ॥೨॥

ಮಲಿನ ವಿಷಯ ವಾಸನೆಯಂ।
ಸೆಳೆದು ಜಯಾಧಾರ ಗುರುಧ್ಯಾನವೆಸಗಿ ಮಲ॥
ಗಲಮಯ ಲಿಂಗಾರ್ಚನದಿಂ।
ದೊಲವೋ ಭೋಗಿಜನಮಾನ್ಯನೆನಿಸಿದೆ ಸುಗುಣೀ ॥೩॥

ಭಾಸುರ ವೀರೇಶಾಶ್ರಮ।
ವಾಸನೆ ಜಯ ಗುರು ಪಂಚಾಕ್ಷರ ಗಾಯನ ಯೋ॥
ಗೀಶಪ್ರಿಯ ಶಿಷ್ಯನೆ ಜಯ।
ಶ್ರೀ ಶಮಿಪುರ ಸುರವರಕವಿ ನುತನೆ ಜಯ ಜಯಾ ॥೪॥

—ಪಂಡಿತ ಅಮರನಾಥ ಶಾಸ್ತ್ರಿಗಳು
ಹಿರೇಮಠ, ಬನ್ನಿಕೊಪ್ಪ.

# ಶ್ರೀ ಪುಟ್ಟರಾಜ ಪ್ರಶಸ್ತಿ

[ ಉಭಯಗಾನ ವಿಶಾರದರೂ ತ್ರಿಭಾಷಾ ಪಂಡಿತರೂ ಆದ ಶ್ರೀ ಪುಟ್ಟರಾಜರು ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೂ ಮದ್ರಾಸದಿಂದ ಮುಂಬಯಿಯ ವರೆಗೂ ಸಮಸ್ತ ಭಾರತವನ್ನೇ ಸುತ್ತಿ ದಿಗ್ವಿಜಯವನ್ನು ಪಡೆದಿದ್ದಾರೆ. ಅವರು ತಮ್ಮ ಮಂಡಳಿಯೊಡನೆ ಹೋದ ಹೋದಲ್ಲಿ ಅನೇಕ ಕಲಾಪ್ರೇಮಿಗಳು ಸಂಘ ಸಂಸ್ಥೆಗಳು ಅವರ ಧಾರ್ಮಿಕ ನಿಷ್ಠೆಗೆ. ವಿದ್ವತ್ತಿಗೆ, ಕಲೆಗೆ ಮೆಚ್ಚಿ ಅನೇಕ ಬಗೆಯಾಗಿ ಸತ್ಕಾರ ಸನ್ಮಾನ ಗಳನ್ನು ಮಾಡಿರುವರು. ಆ ಪ್ರಶಸ್ತಿ ಸನ್ಮಾನ ಪತ್ರಗಳನ್ನಿಲ್ಲಿ ಕ್ರಮಪಡಿಸಲಾಗಿದೆ.]

೧

ಉಭಯ ಗಾಯನಾಚಾರ್ಯ ಗುರುವರ್ಯ ವೇ|| ಪಂ|| ಶ್ರೀ ಪಂಚಾಕ್ಷರಿ

ಗವಾಯಿಗಳವರ ಕೃಪಾಪೋಷಿತ

## ಶ್ರೀ ಅರವಿಂದ ಸಂಗೀತ ವಿದ್ಯಾಲಯ, ಬೆಂಗಳೂರು

( ಸ್ಥಾಪನೆ: 1944; ಮೈಸೂರು ಸರ್ಕಾರದ ಮನ್ನಣೆ ಪಡೆದಿದೆ )

ಇವರು 19-9-1962ನೇ ಬುಧವಾರದಂದು ಕರ್ನಾಟಕದ ಸುಪ್ರಸಿದ್ಧ ಸಾಹಿತಿಗಳೂ ಕರ್ನಾಟಕ ಸಂಯುಕ್ತ ರಂಗದ ನಾಯಕರೂ ಆದ ಶ್ರೀ ಅ. ನ. ಕೃಷ್ಣರಾಯರವರ ದಿವ್ಯ ಅಧ್ಯಕ್ಷತೆಯಲ್ಲಿ ಉಭಯ ಗಾಯನಾಚಾರ್ಯ, ತ್ರಿಭಾಷಾ ಕವಿ ವೇ|| ಪಂ|| ಶ್ರೀ ಗಾಯನಾಚಾರ್ಯ ಪುಟ್ಟರಾಜ ಗವಾಯಿಗಳಿಗೆ ಬೆಂಗಳೂರು ಕಶ್ಯಪ ವಿದ್ಯಾಪೀಠದ ಆವರಣದಲ್ಲಿ ಭಕ್ತಿಯಿಂದ ಅರ್ಪಿಸಿದ

## ಅಭಿನಂದನ ಪತ್ರಿಕೆ

ಗುರುವರ್ಯರೆ,

ತಮ್ಮನ್ನು ವಿದ್ಯಾಲಯಕ್ಕೆ ಬರಮಾಡಿಕೊಂಡು ತಮ್ಮನ್ನು ಸತ್ಕರಿಸುವ ಅಲಭ್ಯ ಸುಸಂಧಿಯು ನಮಗೆ ಪ್ರಾಪ್ತವಾದುದಕ್ಕಾಗಿ ನಮಗೆಲ್ಲಾ ತುಂಬಾ ಆನಂದವಾಗಿದೆ. ಈ ಸುವರ್ಣ ಸಂಧಿಯನ್ನು ನಮಗೆ ಒದಗಿಸಿ, ತಮಗೆ ಮೈಸೂರ ರಾಜ್ಯ ಸಂಗೀತ ನಾಟಕ

ಅಕಾಡೆಮಿಯವರು ಪ್ರಶಸ್ತಿಯನ್ನು ನೀಡುವುದಕ್ಕೆ ತಮ್ಮನ್ನು ಬೆಂಗಳೂರಿಗೆ ಬರಮಾಡಿದ ಅಕಾಡೆಮಿಯವರಿಗೆ ನಾವು ನಮ್ಮ ಹೃತ್ಪೂರ್ವಕ ವಂದನೆಗಳನ್ನು ಸಮರ್ಪಿಸುವದಲ್ಲದೇ ತಮಗೆ ಅಕಾಡೆಮಿ ನೀಡಿದ ಪ್ರಸಸ್ತಿಗಾಗಿ ನಮಗೆಲ್ಲಾ ತುಂಬಾ ಆನಂದವಾಗಿದೆ.

ಪೂಜ್ಯ ಗವಾಯಿಗಳೇ,

ತಾವು ಉತ್ತರ ದಕ್ಷಿಣ ಸಂಗೀತ ಗಳೆರಡರಲ್ಲೂ ಅದ್ವಿತೀಯ ಪಾಂಡಿತ್ಯ ಪಡೆದಿದ್ದೀರಿ. ಮೈಸೂರು,ಬೆಂಗಳೂರು ಮತ್ತು ಉತ್ತರ ಕರ್ನಾಟಕದಲ್ಲಿ ತಾವು ಹಿಂದೆ ಪ್ರವಾಸಗೈದಾಗ ತಮಗೆ ಸಿಕ್ಕಿರುವ ಅಭೂತಪೂರ್ವ ಸ್ವಾಗತ ಗೌರವಗಳೂ ಹಾಗೂ ಇಂದು ರಾಜ್ಯದ ಅಕಾಡೆಮಿಯವರು ತಮ್ಮನ್ನು ಸನ್ಮಾನಿಸಿ ಪ್ರಶಸ್ತಿನೀಡಿರುವ ವಿಷಯವೇ ಇದಕ್ಕೆ ನಿದರ್ಶನವಾಗಿದೆ.

ಕವಿಗಳೇ,

ತಮಗೆ ಸಂಗೀತದಲ್ಲಿ ಮಾತ್ರವೇ ಪ್ರವೇಶವಿರದೆ ಸಾಹಿತ್ಯಕ್ಕೂ ತಾವು ಮಾಡಿದ ಸೇವೆ ಅಮೋಘವಾಗಿದೆ. ತಾವು ಕನ್ನಡದಲ್ಲಿ "ಅಕ್ಕಮಹಾದೇವಿ ಪುರಾಣ" ಮತ್ತು ಅನೇಕ ನಾಟಕಗಳನ್ನೂ ಸಂಸ್ಕೃತದಲ್ಲಿ "ಗುರುಗೀತೆ" ಯನ್ನೂ ಬರದಿರುವುದಲ್ಲದೆ ಹಿಂದಿಯಲ್ಲಿ ಬಸವಪುರಾಣವನ್ನು ಬರೆದು ಅದನ್ನು ರಾಷ್ಟ್ರಪತಿಗಳಿಗೆ ಅರ್ಪಿಸಿ ಪ್ರಶಂಸೆ ಪಡೆದಿದ್ದೀರಿ.

ದಾನಿಗಳೇ,

ತಾವು ಕೈ॥ ಪೂಜ್ಯ ಶ್ರೀ ಪಂಚಾಕ್ಷರ ಗವಾಯಿಗಳ ಪಟ್ಟದ ಶಿಷ್ಯರಾಗಿ ಅವರ ನಂತರ ಅವರು ಸ್ಥಾಪಿಸಿದ ಸಂಗೀತ ವಿದ್ಯಾಲಯವನ್ನು ನಡೆಸುತ್ತಾ ಜಾತಿ ಕುಲಗಳನ್ನೆಣಿಸದೆ ಬಡಬಗ್ಗರಿಗೆ ಅನ್ನ, ವಸ್ತ್ರಗಳನ್ನು ಕೊಟ್ಟು ಸಂಗೀತ ವಿದ್ಯಾದಾನ ಮಾಡುತ್ತಿರುವ ವೀರ ಬ್ರಹ್ಮಚಾರಿಗಳಾದ ತಮಗೆ ಕಣ್ಣಿಲ್ಲದವರೆಂದು ಹೇಗೆ ಹೇಳಬೇಕೋ ತಿಳಿಯದಾಗಿದೆ.

ಯೋಗಿಗಳೇ,

ಒಟ್ಟಿನಲ್ಲಿ ತಮ್ಮನ್ನು ಹಾಗೂ ತಮ್ಮ ನೆರಳಿನಂತೆ ತಮ್ಮ ಸಂಸ್ಥೆಯ ಸರ್ವಭಾರವನ್ನೂ ಹೊತ್ತು ಐವತ್ತು ವರ್ಷಗಳಿಂದ ಕಾರ್ಯದರ್ಶಿಗಳಾಗಿ ಸೇವೆಮಾಡುತ್ತಿರುವ ಶ್ರೀ ಎ. ಬಿ. ಹಿರೇಮಠರವರನ್ನು ಸಂತೋಷದಿಂದ ಸ್ವಾಗತಿಸಿ ಈ ಸಮಾರಂಭದಲ್ಲಿ ಈ ಅಭಿನಂದನ ಪತ್ರಿಕೆಯನ್ನು ಅರ್ಪಿಸುತ್ತಿದ್ದೇವೆ. ಸ್ವೀಕರಿಸಿ ಆಶೀರ್ವದಿಸಬೇಕಾಗಿ ಪ್ರಾರ್ಥನೆ.

ಇಂತಿ ವಂದನೆ,

ಶ್ರೀ ಅರವಿಂದ ಸಂಗೀತ ವಿದ್ಯಾಲಯ

ಸಂಗೀತ, ಸಾಹಿತ್ಯ, ವಿಶಾರದ ಇತ್ಯಾದಿ ಬಿರುದಾಂಕಿತರಾದ

## ವಿದ್ವಾನ್ ಶ್ರೀ ಶಿವಮೂರ್ತಿ ಪುಟ್ಟಯ್ಯ ಸ್ವಾಮಿಗಳಿಗೆ

ಸಮರ್ಪಿಸಿದ

# ಸನ್ಮಾನ ಪತ್ರಿಕೆ

ಉಭಯ ಗಾನ ವಿಶಾರದರೇ,

ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಲಿಂಗೈಕ್ಯ ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳ ಕೃಪಾಪೋಷಿತರಾಗಿ, ಉಭಯ ಗಾನ ಪ್ರವೀಣರೆನಿಸಿಕೊಂಡು, ತಮ್ಮ ಸಂಗೀತ ವಿದ್ಯಾದಾನದಿಂದಾದ ಶಿಷ್ಯ ಪ್ರಶಿಷ್ಯ ಸಮೂಹದೊಡನೆ ಸಂಚರಿಸುತ್ತಾ ಸರ್ವರನ್ನು ಗಾನಾನಂದದಲ್ಲಿ ಮುಳುಗಿಸಿ ಕೀರ್ತಿಕಾಯರಾದ ಶ್ರೀ ಪಂಚಾಕ್ಷರ ಗವಾಯಿಗಳು ಲೋಕಮಾನ್ಯರಿದ್ದುದು ಸರ್ವವಿದಿತವಾಗಿರುವುದು.

ಆ ಮಹನೀಯರ ಪಟ್ಟದ ಶಿಷ್ಯರಾದ ನೀವು "ಶಿಷ್ಯಾದಿಚ್ಛೇತ್ಪರಾಜಯಂ" (ಗುರುವು ಶಿಷ್ಯನಿಂದ ಸೋಲನ್ನಪೇಕ್ಷಿಸಬೇಕು.) ಎಂಬ ಸೂಕ್ತಿಯನ್ನು ಸಾರ್ಥಕಪಡಿಸಿರುವಿರಿ. ನಿಮ್ಮ ಗುರುಗಳು ಕೇವಲ ಸಂಗೀತ ವಿಶಾರದರಾಗಿದ್ದರೆ ನೀವು ಅವರ ಆಶೀರ್ವಾದ ಮಹಿಮೆಯಿಂದ ಸಂಗೀತದಲ್ಲಿಯೂ ಸಂಸ್ಕೃತ, ಕನ್ನಡ ಸಾಹಿತ್ಯದಲ್ಲಿಯೂ ವಿಶಾರದರಾಗಿರುವಿರಲ್ಲದೆ, ಕವಿತಾ ನಿಪುಣರೂ ಆಗಿ ಗುರುಗಳನ್ನು ಮೀರಿರುವಿರಿ. ಹೀಗೆ ಮೀರುವುದೇ ಶಿಷ್ಯಧರ್ಮವು. ಇದೇ ಮೇಲಿನುಕ್ತಿಯ ತಾತ್ಪರ್ಯವೆಂದೂ ತಮಗೆ ತಿಳಿದಿರುವುದಲ್ಲವೇ ?

ಶಿವಮೂರ್ತಿಗಳೇ,

ತಮ್ಮ ಗುರುಗಳಿಂದ ೧೯ಗಿಳ ರಲ್ಲಿ ಸ್ಥಾಪಿತವಾದ ಸಂಗೀತ ಪಾಠಶಾಲೆಯೂ ಸರ್ವತೋಮುಖವಾಗಿ ಅಭಿವೃದ್ಧಿಯಾಗಿ, ಸದ್ಯದಲ್ಲಿ ಸರ್ವಮತದ ೧೧೦ ವಿದ್ಯಾರ್ಥಿಗಳಿಂದ ತುಂಬಿ ಶೋಭಿಸುತ್ತಿರುವುದು. ಇವರಿಗೆ ಅನ್ನ-ವಸ್ತ್ರಾದಿಗಳನ್ನು ಕೊಟ್ಟು ಸಂಗೀತ ಸಾಹಿತ್ಯ ವಿದ್ಯಾದಾನವನ್ನು ಮಾಡುವ ತಮ್ಮ ಸೇವೆಯು ಚಿರಸ್ಮರಣೀಯವಾದುದು. ಈ ೧೧೦ ವಿದ್ಯಾರ್ಥಿಗಳಲ್ಲಿ ೩೫ ವಿದ್ಯಾರ್ಥಿಗಳು ಅಂಧಕರಿದ್ದರೂ ಅವರನ್ನು ಗದುಗಿನ ನಿಮ್ಮ ವೀರೇಶ್ವರ ಪುಣ್ಯಾಶ್ರಮದಲ್ಲಿರಿಸಿ ಅಧ್ಯಯನಾದಿ ವ್ಯವಸ್ಥೆಯನ್ನು ಮಾಡಿರುವುದು ಅಚ್ಚರಿಯ ವಿಷಯವಾಗಿದೆ.

ಸೇವಾ ಧರ್ಮಜ್ಞರೇ,

ನೀವು ಕೈಕೊಂಡ ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಚಾರಕ ಸಂಗೀತ ಸಾಹಿತ್ಯ ಮಹಾ ವಿದ್ಯಾಲಯವೆಂಬ ದಾಸೋಹಂಭಾವದ ಪುಣ್ಯ ಕಾರ್ಯಕ್ಕೆ ಮೂಲ, ಧನವಿಲ್ಲದಿದ್ದರೂ, ದೇಶ ಪರ್ಯಟನದಲ್ಲಿ ನೀವು ಹೃದಯಂಗಮ ಗಾನ ಮತ್ತು ಶಿವ ಕಥಾಬೋಧನ ಮೊದಲಾದ ಕಾಯಕದಿಂದ ಭಕ್ತರನ್ನು ಸಂತೋಷಗೊಳಿಸಿ, ಅವರು ಭಕ್ತಿಯಿಂದ ಕೊಟ್ಟ ಧನದಿಂದಲೇ ಈ ಪುಣ್ಯ ಕಾರ್ಯವನ್ನು ನಡೆಸುವುದನ್ನು ನೋಡಿದರೆ, ಕಾಯಕವೇ ಕೈಲಾಸವೆಂದು ನಂಬಿದ ಶಿವಶರಣರಲ್ಲಿದ್ದ ಭಕ್ತಿ ಸಂಪತ್ತು ನಿಮ್ಮಲ್ಲಿ ಅಧಿಕವಾಗಿರುವುದೆಂದು ವಿದಿತವಾಗುವುದು

ವಿದ್ಯಾನಿಧಿಗಳೇ,

ನಿಮ್ಮ ಸಂಗೀತ ಸಾಹಿತ್ಯ ವಿದ್ಯಾದಾನದಿಂದ ಅನೇಕ ವಿದ್ಯಾರ್ಥಿಗಳು ಕನ್ನಡ ನಾಡಿನಲ್ಲಿ ವಿದ್ಯಾವಂತರಾಗಿ, ನಿಮ್ಮಂತೆ ಲೋಕ ಸೇವಾ ನಿರತರಾಗಲು ನೀವು ಮಾರ್ಗ ದರ್ಶಕರಾಗಿರುವಿರಿ. ಈ ಮಹಾ ಕಾರ್ಯಕ್ಕೆ ನಮ್ಮ ಅಲ್ಪ ಸೇವೆಯ ಕಿರಿಯ ಕಾಣಿಕೆಯನ್ನು ( ) ಉದಾರ ಹೃದಯರಾದ ತಾವು ಸ್ವೀಕರಿಸಬೇಕೆಂದು ವಿನಂತಿ ಮಾಡಿಕೊಳ್ಳುವೆವು.

ಈ ಧರ್ಮಾರ್ಥ ವಿದ್ಯಾ ಸಂಸ್ಥೆಯು ಅವಿಚ್ಛಿನ್ನವಾಗಿ ನಡೆದು ಇತೋಪ್ಯತಿಶಯವಾದ ಧವಳ ಕೀರ್ತಿಯನ್ನು ಪಡೆಯುವಂತೆ ನಡೆಸಿಕೊಂಡು ಹೋಗಲು ಆಚಾರಶೀಲರಾದ ತಮಗೆ ದೀರ್ಘಾಯುರಾರೋಗ್ಯಭಾಗ್ಯಾದಿಗಳನ್ನು ದಯಾಘನನಾದ ಪರಮಾತ್ಮನು ಅನುಗ್ರಹಿಸಲೆಂದು ಆತನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುವೆವು.

ಬಳ್ಳಾರಿ,
ದಿ. ೧೨—೧೧—೧೯೫೦

ತಮ್ಮ ಯಶೋಭಿಲಾಷಿಗಳು,
ಬಳ್ಳಾರಿಯ ಪುರಜನರು

३

संगीत–साहित्य कलानिधि

**श्री पुट्टय्यस्वामीजी के कर–कमलों में सादर समर्पित**

# ❀ अभिनंदन पत्र ❀

**संगीत-साहित्य कलानिधे !**

विभिन्न कलाओं का केंद्र, इस मद्रपुरी (मद्रास) शहर में संगीत साहित्य के मर्मज्ञ आप श्री का स्वागत तथा अभिनंदन करते हुए हम अपना अहोभाग्य मानते हैं।

पनुष्य जीवन को संजीविनी शक्ति प्रदान करनेवाले संगीत और साहित्य रूपी, माता शारदा के स्तन्यामृत-पान से आपने अपने जीवन को आलोकमय बनाया ही, साथ-साथ कितने पामर जनों को इस सुधा स्त्रवंती में अवगाहन करने का परम सौभाग्य प्रदान किया! हम आप की इस महान सुकृति पर आपका हार्दिक अभिनंदन करते हैं। हिन्दुस्तानी, तथा कर्नाटक संगीत की दोनों रीतियों के मर्मज्ञ होते हुए आपने अपनी विदग्ध प्रतिभा का जो परिचय दिया है, वह किसीसे छिपा नहीं है। संस्कृत, कन्नड़ तथा हिंदी भाषाओं में अतुल पांडित्य रखते हुए आपने लोकहितार्थ जो साहित्य-रचना की है, वह प्रशंसनीय है। कन्नड़ भाषा में आपसे विरचित "अक्कमहादेवी" पुराण तथा "नेल्लूर नंबेक्का" नाटक आपकी साहित्य-प्रतिभा तथा कविता-शक्ति के ज्वलंत उदाहरण हैं। यह जानकर हमें अत्यंत हर्ष हुआ है कि आपने हिंदी में "वसवेश्वर पुराण" की रचना शुरू की है और हमें विश्वास है कि आपकी यह कृति पाकर हिन्दी भाषा-भाषी भक्त-जन अपने को. कृतार्थ मानेंगे।

**निस्पृह कर्मयोगिन् !**

'परोपकारार्थमिदम् शरीरम्' वाली आर्योक्ति के अनुसार लोक हितार्थ आपने अपनी असमान प्रतिभा एवं कला का वितरण करते हुए अपनी त्यागवृत्ति तथा कर्मयोगी-जीवन का परिचय दिया है। निस्पृह तथा निराडंबर जीवन व्यतीत करते हुए, अपने पूज्य गुरु श्री द्वारा स्थापित 'वीरेश्वर पुण्याश्रम' का संचालन करना ही इस बात का प्रणाम है कि आपके विचार कितने उदार और महान हैं। जाति-पाँति, तथा धनी-निर्धनी का भेद-भाव छोड़कर अपने आश्रम में सब लोगों को शरण देते हुए संगीत और साहित्य की निःशुल्क शिक्षा प्रदान करने का जो गुरुतर भार आपने अपने कंधों पर उठाया है, यह आपकी गुरु-भक्ति तथा लोक-संग्रह-वृत्ति का प्रचुर प्रमाण है।

**प्रतिभा संपन्न !**

संगीत और साहित्य में आपकी ईश्वरदत्त प्रतिभा का हम हार्दिक अभिनंदन करते हैं। आपकी सेवा, त्याग एवं सदाचार से अभिभूत होकर हम बड़ी श्रद्धा तथा विनय से आपको '**संगीत साहित्य रत्न**' पद से विभूषित करते हैं।

हम मंगलकर्ता भगवान से प्रार्थना करते हैं कि वे आपको चिरकाल तक स्वस्थ, प्रसन्न एवं समृद्ध रखें और जग--मंगल का कार्य आपके द्वारा संपन्न करावें।

इति शुभम्

आपके विनीत

**गुजराती युवक मंडल के सदस्य**

**मद्रास** **गुजराती एंग मेन्स एसोसियेशन के सदस्य**

२८-१-'५२ **मराठी समाज के सदस्य**

'ಸಂಗೀತ-ಸಾಹಿತ್ಯ' ವಿಶಾರದ ಶ್ರೀ ಪಂಡಿತ ಪುಟ್ಟರಾಜಸ್ವಾಮಿ ಇವರಿಗೆ

## ಮದ್ರಾಸು ನಗರದ ವೀರಶೈವ ಸಂಘದವರು ಅರ್ಪಿಸಿದ

# ಸನ್ಮಾನ ಪತ್ರ

**ಸಂಗೀತಸಾಹಿತ್ಯ ವಿಶಾರದರೇ !**

ತಾವು ಮದ್ರಾಸಿಗೆ ಆಗಮಿಸಿ, ತಮ್ಮ ಅಪೂರ್ವವಾಣಿಯಿಂದ ಸಂಗೀತ ಸಾಹಿತ್ಯವನ್ನು ಪ್ರದರ್ಶನ ಮಾಡಿ ಮಹಾಕೀರ್ತಿಯನ್ನು ಕನ್ನಡ ನಾಡಿಗೆ ತಂದಿರುವಿರಿ. ತಾವು ಸಂಗೀತ ಕರ್ಮಯೋಗಿಯಾಗಿ ಸಮಾಜ ಸೇವೆಯನ್ನು ಸಲ್ಲಿಸುತ್ತ ಇರುವುದಕ್ಕೆ ತಮ್ಮ ಅದ್ವಿತೀಯವಾದ ವೀರೇಶ್ವರ ಪುಣ್ಯಾಶ್ರಮವೇ ಸಾಕ್ಷಿ. ಇಲ್ಲಿ ತಮ್ಮಾಶೀರ್ವಾದೋಪದೇಶದಿಂದ ಅನಾಥ, ಅಂಧಬಾಲಕರು ಸಂಗೀತ ಸಾಹಿತ್ಯವನ್ನು ಕಲಿತು, ಜನರನ್ನು ತಮ್ಮ ಗಾಯನ, ನೃತ್ಯ ಮತ್ತು ನಾಟಕ ಕಲೆಗಳಿಂದ ಆನಂದಗೊಳಿಸುತ್ತ ಜ್ಞಾನಬೋಧೆಯನ್ನು ಮಾಡುತ್ತಿರುವುದು ಪ್ರಶಂಸನೀಯವಾದುದೆಂದು ಹೇಳಬೇಕಾದುದಿಲ್ಲ.

ತಾವು ಹುಟ್ಟುಗುರುಡರಾದರೂ, ಲಿಂಗೈಕ್ಯರಾದ ಶ್ರೀ ಪಂಡಿತ ಪಂಚಾಕ್ಷರೀ ಸ್ವಾಮಿಯವರ ಕೃಪಾಕಟಾಕ್ಷದಿಂದ ಸಂಗೀತ ಸಾಹಿತ್ಯವನ್ನೂ, ಆಧ್ಯಾತ್ಮಿಕ ಶಾಸ್ತ್ರವನ್ನೂ ಪರಿಶೋಧನೆ ಮಾಡಿ ಅಕ್ಕಮಹಾದೇವಿಯ ಪುರಾಣವನ್ನೂ, ಹಿಂದೀ ಭಾಷೆಯಲ್ಲಿ ಬಸವೇಶ್ವರ ಪುರಾಣವನ್ನೂ ಬರೆಯುತ್ತಿರುವಿರೆಂದು ಕೇಳಿ ಬಹಳ ಆನಂದವಾದುದಲ್ಲದೆ, ಕನ್ನಡಿಗರೂ ಹೆಮ್ಮೆಪಡತಕ್ಕದ್ದಾಗಿದೆ. ಈ ಗ್ರಂಥವು ಶ್ರೀಘ್ರದಲ್ಲಿಯೇ ಪ್ರಕಟವಾಗಲೆಂದು ಹಾರೈಸುವೆವು.

ತಮ್ಮ ಸಂಗೀತ ಸಾಹಿತ್ಯ,ಆಧ್ಯಾತ್ಮಿಕ ನಿಷ್ಠಾ ವಿಶೇಷಗಳನ್ನು ಕಂಡು ಆಶ್ಚರ್ಯಾನಂದದಲ್ಲಿ ಮಗ್ನರಾಗಿರುವ ನಾವು ತಮ್ಮನ್ನು "ಸಂಗೀತ-ಸಾಹಿತ್ಯ ಕಳಾಪ್ರಪೂರ್ಣ" ರೆಂಬ ಬಿರುದಿನಿಂದ ಸತ್ಕರಿಸುವೆವು. ಶ್ರೀ ಪರಮೇಶ್ವರನು ತಮಗೂ, ತಮ್ಮ ವೀರೇಶ್ವರ ಪುಣ್ಯಾಶ್ರಮಕ್ಕೂ ಅನಂತ ಶುಭಯೋಗಗಳನ್ನು ಕರುಣಿಸಲಿ.

ತಾ|| 6—2—1952,
289, ತಂಬುಚೆಟ್ಟಿ ಬೀದಿ,
ಮದ್ರಾಸು–1.

ಇತಿ ತಮ್ಮ
ಮದ್ರಾಸು ನಗರದ ವೀರಶೈವ ಸಂಘದವರು

೫.

ಉಭಯ ಗಾಯನಾಚಾರ್ಯ ಕೈ. ವೇ. ಪಂ. ಗುರುವರ್ಯ
ಪಂಚಾಕ್ಷರ ಗವಾಯಿಗಳವರ ಕೃಪಾಪೋಷಿತ

## ಶ್ರೀ ಅರವಿಂದ ಸಂಗೀತ ವಿದ್ಯಾಲಯ, ಬೆಂಗಳೂರು

(ಸ್ಥಾಪನೆ: ೧೯೪೪; ಮೈಸೂರು ಘನ ಸರಕಾರದಿಂದ ಮನ್ನಣೆ ಪಡೆದಿದೆ)

ಇವರು

ಸಂಗೀತ ಸಾಹಿತ್ಯ ಕಲಾವಿಶಾರದ ಉಭಯ ಗಾಯನಾಚಾರ್ಯ ಶ್ರೀ. ಪಂ. ಗುರುವರ್ಯ

## ಶ್ರೀ ಪುಟ್ಟರಾಜ ಗವಾಯಿಗಳವರಿಗೆ

೧೨-೧-೧೯೫೫ ರಂದು ಮಾನ್ಯ ವಿದ್ಯಾ ಸಚಿವರಾದ

## ಶ್ರೀ ಅಣ್ಣಾರಾವ ಗಣಮುಖಿಯವರ

ಘನ ಅಧ್ಯಕ್ಷತೆಯಲ್ಲಿ ಸಮರ್ಪಿಸಿದ

# ಅಭಿನಂದನ ಪತ್ರಿಕೆ

ಪೂಜ್ಯ ಗುರುವರ್ಯರೇ,

ತಮ್ಮನ್ನು ನಮ್ಮ ವೇಲ್ಸಂಡ ವಿದ್ಯಾಲಯಕ್ಕೆ ಆಹ್ವಾನಿಸಿ, ಗೌರವಿಸುವ ಸುಸಂದರ್ಭವನ್ನು ನಮಗೆ ಒದಗಿಸಿದ್ದಕ್ಕಾಗಿ ಭಗವಂತನಲ್ಲಿ ನಾವು ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇವೆ. ತಾವು ನಮ್ಮ ಪೂಜ್ಯ ಗುರುಗಳಲ್ಲದೆ, ಕೈಲಾಸವಾಸಿ ಪರಮಪೂಜ್ಯ ಗುರುವರ್ಯ ವೇ|| ಪಂ|| ಶ್ರೀ ಪಂಚಾಕ್ಷರಿ ಗವಾಯಿಗಳವರ ಪಟ್ಟ ಶಿಷ್ಯರೂ ಆಗಿರುತ್ತೀರಿ. ಅವರಿಂದ ಸ್ಥಾಪಿತವಾದ ಶ್ರೀ ಕುಮಾರೇಶ್ವರ ಕೃಪಾಪೋಷಿತ ಧರ್ಮಾರ್ಥ ಸಂಚಾರಿ ಸಂಗೀತ ವಿದ್ಯಾಲಯದ ಒಡೆಯರಾಗಿ ಅದನ್ನು ಅವರು ಹಾಕಿಕೊಟ್ಟ ಮಾರ್ಗದಲ್ಲಿ ನಿಷ್ಠೆಯಿದ ನಡೆಸಿಕೊಂಡು ಬರುತ್ತಿರುವುದಲ್ಲದೆ, ವಿದ್ಯಾಲಯದ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣರಾಗಿದ್ದೀರಿ.

ತಮ್ಮ ಆಶ್ರಯದಲ್ಲಿ ನೂರಾರು ಜನ ಬಡವರೂ, ಕುರುಟರೂ, ಕುಂಟರೂ ಅನ್ನ ವಸ್ತ್ರಗಳನ್ನು ಪಡೆದು ವಿದ್ಯಾಧ್ಯಯನ ಮಾಡುತ್ತಿರುವುದನ್ನು ವರ್ಣಿಸುವುದು ವಾಙ್ಮನಗಳಿಗೆ ಅತೀತವಾದ ವಿಷಯ.

ಸಂಗೀತ ವಿದ್ಯಾಲಯ ಸಂಚಾಲಕರೇ,

ತಾವು ನಡೆಸುತ್ತಿರುವ ಸಂಗೀತ ವಿದ್ಯಾಲಯವು ಸನ್ 1914ನೇ ಇಸವಿಯಲ್ಲಿ ಪೂಜ್ಯ ಶ್ರೀ ಪಂಚಾಕ್ಷರಿ ಗವಾಯಿಗಳವರಿಂದ ಸ್ಥಾಪಿತವಾಯಿತು. ಗವಾಯಿಗಳವರು ಸುಮಾರು ಮೂವತ್ತು ವರ್ಷಗಳ ಕಾಲ ವಿದ್ಯಾಲಯವನ್ನು ನಡೆಸಿ ಹದಿನೈದು ವರ್ಷಗಳ ಹಿಂದೆ ತಮ್ಮ ವಶಕ್ಕೆ ಒಪ್ಪಿಸಿ ಸನ್ 1944ನೇ ಇಸವಿಯಲ್ಲಿ ಶಿವಾಧೀನ ರಾದರು. ವಿದ್ಯಾಲಯದ ಉನ್ನತಿಗೆ, ಹಿರಿಯ ಗುರುಗಳ ಕಾಲದಿಂದಲೂ ಸರ್ವ ಶ್ರೇಯಸ್ಸನ್ನು ಕೋರುತ್ತಾ ಅವರಿಗಿತ್ತ ಸಹಕಾರವನ್ನೇ ತಮಗೂ ನೀಡುತ್ತಿರುವ ಶ್ರೀ ಅನ್ನದಾನಿ ಬಸವಯ್ಯ ಹಿರೇಮಠರವರು ಈ ಸಂದರ್ಭದಲ್ಲಿ ಸ್ತೋತ್ರಾರ್ಹರು.

ಗವಾಯಿಗಳೇ,

ತಾವು ತ್ರಿಭಾಷಾ ಕವಿಗಳಾಗಿ ಕನ್ನಡದಲ್ಲಿ ಅಕ್ಕ ಮಹಾದೇವಿ, ಹಿಂದಿಯಲ್ಲಿ ಬಸವ ಪುರಾಣ, ಸಂಸ್ಕೃತದಲ್ಲಿ ಗುರುಗೀತೆ ಮುಂತಾದುವನ್ನು ಬರೆದು ಕನ್ನಡದಲ್ಲಿ ಹಲವಾರು ನಾಟಕಗಳನ್ನು ರಚಿಸಿ ಕನ್ನಡ ನಾಡಿಗೆ ಹಿರಿಯ ಸೇವೆ ಸಲ್ಲಿಸಿದ್ದೀರಿ. ತಾವು ಉಭಯಗಾಯನ, ವಾದನಗಳಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಹೊಂದಿದ್ದೀರಿ. ಅದಕ್ಕೆ ನಿದರ್ಶನವಾಗಿ ಮೊನ್ನೆ ಮೈಸೂರಿನಲ್ಲಿ ನೂರಾರು ಘನ ವಿದ್ವಾಂಸರಿಂದ ತಾವು ಸನ್ಮಾನಿತರಾಗಿರುವುದು ಸರ್ವವೇದ್ಯವಾಗಿದೆ. ತಮ್ಮ ಪಾದಧೂಳಿಯಿಂದ ನಮ್ಮ ವಿದ್ಯಾಲಯವನ್ನು ಪವಿತ್ರ ಮಾಡಿದ್ದಕ್ಕಾಗಿ ತಮಗೂ, ನಮ್ಮ ಆಹ್ವಾನವನ್ನು ಮನ್ನಿಸಿ ಈ ದಿನದ ಅಧ್ಯಕ್ಷತೆಯನ್ನು ವಹಿಸಿ ನಮಗೆ ಉಪಕರಿಸಿದ ಸಂಸ್ಥಾನದ ಮಾನ್ಯ ವಿದ್ಯಾ ಸಚಿವರಾದ ಶ್ರೀ ಅಣ್ಣಾರಾವ್ ಗಣಮುಖಿಯವರಿಗೂ ನಾವು ಚಿರ ಋಣಿಗಳಾಗಿರುತ್ತೇವೆ.

ಇಂತಿ

ಶ್ರೀ ಅರವಿಂದ ಸಂಗೀತ ವಿದ್ಯಾಲಯ

೧೦೦, ೩ ನೇ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೨

ಶ್ರೀಗುರು ಶಿವರಾತ್ರೀಶ್ವರಃ ಪ್ರಸೀದತು

ಜೀಯಾತ್ ಶ್ರೀ ಶಿವರಾತ್ರೀಂದ್ರಃ ಶಿವಾಚಾರ್ಯಶಿರೋಮಣಿಃ ।
ಯೋ ವೀರಶೈವ ಸಿದ್ಧಾಂತಂ ಖ್ಯಾಪಯಾಮಾಸ ಭೂತಲೇ ॥

# :: ಪ್ರಶಸ್ತಿ ಪತ್ರಿಕೆ ::

ಶ್ರೀಮತ್ ಸುತ್ತೂರು ವೀರಸಿಂಹಾಸನಾಧೀಶ್ವರ
ಶ್ರೀ ಶ್ರೀ ಜಗದ್ಗುರು ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರ
ದಿವ್ಯ ಸನ್ನಿಧಿಯಲ್ಲಿ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್‌ನೃಪ ಶಾಲಿವಾಹನ ಶಕೆ ೧೮೭೧ ನೆಯ ವಿಳಂಬಿನಾಮ ಸಂವತ್ಸರ ಮಾರ್ಗಶಿರ ಶುದ್ಧ ೧೪ ತಿಥಿ ಶುಕ್ರವಾರ ದಿ. ೨೩-೧-೧೯೫೯ ರಲ್ಲಿ ನೆರೆದ ಮಹಾಸಭೆಯಲ್ಲಿ

ಗದುಗಿನ ಶ್ರೀ ವೀರೇಶ್ವರಾಶ್ರಮದ ಅಧ್ಯಕ್ಷ

**ಶ್ರೀ ಪುಟ್ಟಯ್ಯ ಗವಾಯಿಗಳು ಅವರು**

ಸಂಗೀತ ಸಾಹಿತ್ಯ ಕಲೆಗಳಲ್ಲಿ
ಪ್ರಾವೀಣ್ಯ ಪಡೆದಿರುವುದನ್ನು ಪರಾಂಬರಿಸಿ ಸಂತುಷ್ಟಾಂತರಂಗರಾಗಿ
ಇವರಿಗೆ

**"ಸಾಹಿತ್ಯ ಸಂಗೀತ ಕಲಾ ಪ್ರವೀಣ"**

ಎಂಬ ಪ್ರಶಸ್ತಿಯನ್ನು ಅರ್ಹವಾದ ಖಿಲ್ಲತ್ತುಗಳೊಂದಿಗೆ
ಅನುಗ್ರಹಿಸಿರುತ್ತದೆ.

ಪರಮಾತ್ಮನು ಇತೋಪ್ಯತಿಶಯವಾದ ಅಭ್ಯುದಯ ಪರಂಪರೆಯನ್ನು
ದಯಪಾಲಿಸಲೆಂದು ಆಶೀರ್ವದಿಸೋಣವಾಗಿದೆ.
ಶಿ ವ ಂ ಭೂ ಯಾ ತ್.

ತಾ. ೨೩—೧—೧೯೫೯
ಮುಕ್ಕಾಂ : ಮೈಸೂರು

ಇತ್ಯಾಶಿಷಃ
(ಜಗದ್ಗುರುಗಳವರ ಹಸ್ತಾಕ್ಷರ)

೭

# ಶ್ರೀ ವೀರಶೈವ ಸಮಾಜ ಸೇವಾ ಸಂಘ

(ರಜಿಸ್ಟರ್ಡ್)

ಬೆಂಗಳೂರು ನಗರ

ತಾ. ೧೩—೨—೧೯೫೨ ನೆಯ ಬುಧವಾರ ಸಂಜೆ ೬ ಗಂಟೆಯಲ್ಲಿ

ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧೀಶ್ವರ

ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಮಹಾದೇವ ಸ್ವಾಮಿಗಳವರ

——— ಅಧ್ಯಕ್ಷತೆಯಲ್ಲಿ ———

"ಸಂಗೀತ ಸಾಹಿತ್ಯ ಕಲಾಪ್ರಪೂರ್ಣ" ಇತ್ಯಾದಿ ಬಿರುದಾಂಕಿತರಾದ

## ವೇ. ಪುಟ್ಟಯ್ಯಸ್ವಾಮಿ ಗವಾಯಿಗಳವರಿಗೆ ಒಪ್ಪಿಸಿದ

# ಅಭಿನಂದನ ಪತ್ರಿಕೆ

ಮಹಾಶಯರೇ, ಶ್ರೀ ಶಿವಯೋಗ ಮಂದಿರದಂತಹ ಪವಿತ್ರ ಸಂಸ್ಥೆಯ ಆಶ್ರಯದಲ್ಲಿ ಬೆಳೆದು ಕೀರ್ತಿ ಶಿಖರವನ್ನೇರಿ ನಾಡಿಗೇ ಭೂಷಣಪ್ರಾಯರಾಗಿ ಚಿರ ಸ್ಮರಣೀಯರಾದ ಲಿಂಗೈಕ್ಯ ಶ್ರೀ ಪಂಚಾಕ್ಷರಿ ಗವಾಯಿಗಳವರ ಪಟ್ಟಶಿಷ್ಯರಾದ ತಾವು ಗುರುಗಳಂತೆಯೇ ಸಂಗೀತ ವಿದ್ಯಾಭೂಷಿತರಾಗಿ ಗುರುಗಳ ಮತ್ತು ಶಿವಯೋಗ ಮಂದಿರ ಸಂಸ್ಥೆಯ ಕೀರ್ತಿಯನ್ನು ಹೆಚ್ಚಿಸುತ್ತಾ ಸಮಾಜಕ್ಕೂ ನಾಡಿಗೂ ಭೂಷಣ ಪ್ರಾಯರಾಗಿರುವುದು ನಮ್ಮ ಸಂಘಕ್ಕೆ ಅತ್ಯಂತ ಸಂತೋಷವನ್ನುಂಟು ಮಾಡಿದೆ.

ದಕ್ಷಿಣಾದಿ ಅಥವಾ ಉತ್ತರಾದಿ ಇವೆರಡರಲ್ಲಿ ಯಾವುದಾದರೂ ಒಂದು ಸಂಗೀತ ಪದ್ಧತಿಯಲ್ಲಿ ಪಾಂಡಿತ್ಯವನ್ನು ಪಡೆಯುವುದೇ ಕಷ್ಟವಾಗಿರುವಾಗ ತಾವು ನೇತ್ರೇಂದ್ರಿಯ ರಹಿತರಾಗಿಯೂ ಸಹ ಈ ದಕ್ಷಿಣಾದಿ ಉತ್ತರಾದಿ ಎಂಬ ಉಭಯಗಾಯನ ವಿಶಾರದ ರಾಗಿ ವಾದ್ಯವಾದನಗಳಲ್ಲಿಯೂ ನಿಪುಣರಾಗಿ ಪರಿಶೋಭಿಸುತ್ತಿರುವುದು ತಮ್ಮ ನಿಷ್ಠೆ ಮತ್ತು ಸಾಹಸವನ್ನು ವ್ಯಕ್ತಗೊಳಿಸುತ್ತದೆ. ಅಷ್ಟುಮಾತ್ರವಲ್ಲದೆ ತಾವು ಒಂದು ಸಂಗೀತ ಶಿಕ್ಷಣ ಸಂಸ್ಥೆಯ ನಿರ್ವಹಣ ಭಾರವನ್ನೇ ಹೊತ್ತು ಯಶಸ್ವಿಯಾಗಿ ನಿರ್ವ

ಹಿಸುತ್ತಿರುವುದನ್ನು ನೋಡಿದರೆ "ಬಳ್ಳಿಗುರುಡರು ಕೂಡಿ ಹಳ್ಳವನು ಬಿದ್ದಂತೆ" ಎಂಬ ನುಡಿಯನ್ನು "ಬಳ್ಳಿಗುರುಡರು ಕೂಡಿ ಬಾಳ ಭವ ಗೆದ್ದಂತೆ" ಎಂದು ತಿದ್ದಬೋಕೋ ಎನಿಸುತ್ತದೆ.

ಹೀಗೆ ಕೇವಲ ಸಂಗೀತ ಪ್ರಪಂಚದಲ್ಲಿ ತೃಪ್ತರಾಗದೆ ತಾವು ಸಾಹಿತ್ಯ ಪ್ರಪಂಚಕ್ಕೂ ಪ್ರವೇಶಿಸಿ "ಅಕ್ಕಮಹಾದೇವಿ ಪುರಾಣ" ವನ್ನು ರಚಿಸಿ ಪ್ರಕಟಿಸಿರುವುದಲ್ಲದೆ ಈಗ ರಾಷ್ಟ್ರಭಾಷೆಯಾದ ಹಿಂದಿಯಲ್ಲಿ ಶ್ರೀ ಬಸವೇಶ್ವರ ಪುರಾಣವನ್ನು ರಚಿಸುತ್ತಿರುವಿರೆಂದು ಕೇಳಿ ಸಂತೋಷಚಿತ್ತರಾಗಿದ್ದೇವೆ. ಈ ತಮ್ಮ ಸಾಹಸವು ಕಣ್ಣುಳ್ಳ ವಿದ್ವಾಂಸರನ್ನೂ, ಕಾಶೀ ಪಾಂಡಿತ್ಯವನ್ನು ಪಡೆಯುವುದರಲ್ಲಿಯೇ ವೃದ್ಧಾಪ್ಯವನ್ನು ಹೊಂದಿ ಕಾಲಹರಣಮಾಡುವಂತಹ ಪಂಡಿತ ಪ್ರಕಾಂಡರುಗಳನ್ನೂ ಎಚ್ಚರಿಸಲೆಂದು ಹಾರೈಸುತ್ತೇವೆ.

ಬಹುಶಃ ಭರತಖಂಡದ ಯಾವ ಪ್ರಾಂತದಲ್ಲಿಯೂ ನೇತ್ರಗಳಿಲ್ಲದ ಸಾಹಿತ್ಯ ಸಂಗೀತಗಳೆರಡರಲ್ಲೂ ಕೋವಿದನಿರಲಾರ. ಆದರೆ ಕರ್ನಾಟಕದ ಭಾಗ್ಯವಶದಿಂದ ಕವಿ ಗಮಕಿ ವಾದನ ನಿಪುಣರಾಗಿ ತಾವು ದೇಶಭೂಷಣರಾಗಿ ವಿರಾಜಿಸುತ್ತಿರುವಿರಿ.

ತಾವು ದೇಹಶ್ರಮವನ್ನು ಲಕ್ಷಿಸದೆ ದೇಶಾಟನೆಗೆ ಹೊರಟು ದಕ್ಷಿಣ ಭಾರತದ ಪುಣ್ಯ ಕ್ಷೇತ್ರಗಳನ್ನೂ ಪ್ರಮುಖ ಪಟ್ಟಣಗಳನ್ನೂ ಪರ್ಯಟನ ಮಾಡಿ ಅಲ್ಲಲ್ಲಿಯ ವಿದ್ವಜ್ಜನಗಳಿಂದ ಸನ್ಮಾನಿತರಾಗಿ ಈ ಬೆಂಗಳೂರು ನಗರಕ್ಕೂ ಶಿಷ್ಯ ಮಂಡಳಿ ಸಮೇತರಾಗಿ ದಯಮಾಡಿಸಿ ತಮ್ಮ ಕರ್ಣ ಮಧುರವಾದ ಮತ್ತು ಜ್ಞಾನದಾಯಕವಾದ ಗಾಯನ ವಾದನಗಳಿಂದ ಈ ನಗರವಾಸಿಗಳನ್ನು ಹರ್ಷಗೊಳಿಸಿದುದಕ್ಕಾಗಿ ತುಂಬಾ ಕೃತಜ್ಞರಾಗಿದ್ದೇವೆ.

ಆಚಾರನಿಷ್ಠರೂ ದೈವಭಕ್ತರೂ ಆದ ತಮ್ಮ ವಿದ್ಯೆವಿನಯಗಳು ಮುಂದೆ ಮುಂದೆ ಇನ್ನೂ ಅಭಿವೃದ್ಧಿ ಹೊಂದಲೆಂದೂ ಶ್ರೀಮದ್ ಬಸವಾದಿ ಪ್ರಮಥರು ತಮಗೂ ತಮ್ಮ ಶಿಷ್ಯಮಂಡಳಿಗೂ ಇತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನು ಅನುಗ್ರಹಿಸಿ ತಮ್ಮ ಸಂಸ್ಥೆಯು ಉಪಯುಕ್ತವಾಗಿ ಚಿರಕಾಲ ಬಾಳುವಂತೆ ಕರುಣಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಬೆಂಗಳೂರು ನಗರ
ತಾ. ೧೩—೨—೧೯೫೨

ಇಂತು ತಮ್ಮ,
ಶ್ರೀ ವೀರಶೈವ ಸಮಾಜ ಸೇವಾ ಸಂಘ



*We the Music Vidwans and Members of the Shri Hanuman Jayanthi Celebrations Mysore, do hereby confer the Title* ***Ubhaya Gayana Vadana Kanteerava*** *on* ***Gadag Pandita Puttaraja Gavai*** *for his profound and extensive knowledge of Music* ***Vocal and Instrumental*** *as expounded at the Celebrations of Shri Hanuma Jayanthi conducted by* ***Asthana Sangeeta Vidvan Gana Visharada B. Devendrappa*** *at Mysore during December 1958.*

*Given under the signature*
**B. Devendrappa**

**R. S. Keshava murthy**
Asthan, Vainika Vidwan

**T. Venkata Rao**
Veena Vidwan

Mysore
Dated 2-1-1959

೯

ಉಭಯ ಗಾಯನಾಚಾರ್ಯ ಪರಮಪೂಜ್ಯ

ಲಿಂಗೈಕ್ಯ ಶ್ರೀ ಶ್ರೀ ಪಂಚಾಕ್ಷರ ಗವಾಯಿಗಳವರ ಮುಖ್ಯಶಿಷ್ಯರಾದ

ಸಾಹಿತ್ಯ ಸಂಗೀತ ಕಲಾಪ್ರವೀಣ, ಉಭಯ ಗಾಯನಾಚಾರ್ಯ

## ಶ್ರೀ ಪುಟ್ಟರಾಜ ಗವಾಯಿಗಳವರಿಗೆ

ಮೈಸೂರು ಪೌರರು ವಿಶ್ವಾಸಪೂರ್ವಕವಾಗಿ ಸಮರ್ಪಿಸಿದ

# ಸನ್ಮಾನ ಪತ್ರ

ಮಾನ್ಯ ಗವಾಯಿಗಳವರೆ,

ಸುಪ್ರಸಿದ್ಧ ಸಂಗೀತ ಸಾಹಿತ್ಯಕಲಾವಿಶಾರದರೆನಿಸಿ ನಾಡು ನುಡಿಗಳಿಗೆ ಅಮಿತ ಸೇವೆಯನ್ನು ಸಲ್ಲಿಸುತ್ತಿರುವ ನಿಮ್ಮನ್ನು ಗೌರವಿಸುವ ಸುಯೋಗವು ನಮಗೆ ಇಂದು ಲಭಿಸಿರುವುದಕ್ಕಾಗಿ ನಾವು ತುಂಬಾ ಸಂತೋಷಿಸುತ್ತೇವೆ.

ತಾವು ಹಾವೇರಿ ಪ್ರಾಂತದ ದೇವಗಿರಿಯಲ್ಲಿ ಇಂದಿಗೆ ಸುಮಾರು ನಲವತ್ತೈದು (೪೫ಗಳ) ವರ್ಷಗಳ ಹಿಂದೆ ಜನ್ಮಧಾರಣ ಮಾಡಿದಿರಿ. ಕೇವಲ ಆರು ತಿಂಗಳ ಶೈಶವದಲ್ಲಿಯೇ ತಾವು ದೈವವಶದಿಂದ ಅಂಧತ್ವವನ್ನು ಪಡೆದ ವಿಷಯವು ಹೃದಯ ವಿದ್ರಾವಕವಾದುದು. ಪೂರ್ವ ಪುಣ್ಯದಿಂದ ಪ್ರೇರಿತರಾದ ತಾವು ಹತ್ತನೇ ವಯಸ್ಸಿನಲ್ಲಿಯೇ ಜಾತ್ಯಂಧರೂ ಉಭಯಗಾಯನಾಚಾರ್ಯರೂ ಆಗಿದ್ದ ಪೂಜ್ಯ ಲಿಂ॥ ಪಂಚಾಕ್ಷರ ಗವಾಯಿಗಳವರ ಶಿಷ್ಯವೃತ್ತಿಯನ್ನು ಅಲಂಬಿಸಿದುದು ಭಗವಂತನ ಕೃಪೆಯೆಂದು ಭಾವಿಸಬೇಕಾಗಿದೆ.

ಪ್ರಜ್ಞಾ ಚಕ್ಷುಗಳೆ,

ಕ್ರಮ ಕ್ರಮವಾಗಿ ತಾವು ಸಂಗೀತ, ಸಾಹಿತ್ಯಾದಿ ಕಲೆಗಳಲ್ಲಿ ಸಾಧಿಸುತ್ತಿದ್ದ ಅಪೂರ್ವಪ್ರಗತಿ ತಮಗೆ ಪೂಜ್ಯಗವಾಯಿಗಳವರ ಹಾರ್ದಿಕ ಪ್ರೇಮವನ್ನು ಗಳಿಸಿ

ಕೊಡಲು ಸಾಧಕವಾಯಿತು. ಪಂಡಿತರಿಂದ ಪ್ರೌಢಕಾವ್ಯಗಳನ್ನು ಓದಿಸಿ ಕೇಳಿ ಸುಲಭವಾದ ಕುರುಡರ ಲಿಪಿಯಲ್ಲಿ ಪ್ರತಿಮಾಡಿಕೊಂಡು ಅಭ್ಯಾಸವನ್ನು ಆರಂಭಿಸಿದ ತಾವು ಕೇವಲ ಹತ್ತಾರು ವರ್ಷಗಳಲ್ಲಿ ಕನ್ನಡ, ಸಂಸ್ಕೃತ, ಮತ್ತು ಹಿಂದೀ ಭಾಷೆಗಳಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿದ ರೀತಿ ಅನ್ಯಾದೃಶ.

ಇದರ ಫಲವಾಗಿ ತಾವು ಕನ್ನಡದಲ್ಲಿ "ಅಕ್ಕಮಹಾದೇವಿ" [ಭಾಮಿನೀ ಷಟ್ಪದಿ], ಸಂಸ್ಕೃತದಲ್ಲಿ "ಗುರುಗೀತೆ" (೧೮ ಅಧ್ಯಾಯಗಳು) ಹಿಂದಿಯಲ್ಲಿ "ಬಸವಪುರಾಣ"ಗಳನ್ನು ಬರೆದು ವಿಖ್ಯಾತರಾಗಿದ್ದೀರಿ. ತಾವು ರಚಿಸಿರುವ ರಸಭರಿತವೂ ವಿಚಾರಪರಿಪ್ಲುತವೂ, ಸಂಸ್ಕೃತಿ ಪ್ರಚೋದಕವೂ ಆಗಿರುವ ಜಗಜ್ಯೋತಿ ಬಸವೇಶ್ವರ, ನಲ್ಲೂರ ನಂಬೆಕ್ಕ ಮುಂತಾದ ಸುಮಾರು ಹದಿನಾಲ್ಕು ನಾಟಕಗಳು ತಮ್ಮ ಆಶ್ರಯದಲ್ಲಿ ಸ್ಥಾಪಿತವಾಗಿರುವ ನಾಟಕ ಸಭೆಯಿಂದ ಪ್ರದರ್ಶಿತವಾಗಿ ಜನಾದರ ಪಡೆಯುತ್ತಿರುವ ಅಂಶ ಪ್ರಶಂಸನೀಯವಾಗಿದೆ. ಮೇಲಾಗಿ ತಾವು "ರಾಜಶೇಖರ ವಿಲಾಸ"ದಂತಹ ಪ್ರೌಢಕಾವ್ಯಗಳನ್ನು ನಾಟಕ ರೂಪಕ್ಕೆ ಪರಿವರ್ತಿಸಿ ಅವುಗಳನ್ನು ಕಥಾರೂಪದಲ್ಲಿ ರಸವತ್ತಾಗಿ ಅನುವಾದ ಮಾಡುತ್ತಿರುವ ಅಪೂರ್ವ ಸೌಭಾಗ್ಯವನ್ನು ಪಡೆದಿರುತ್ತೀರಿ.

ಸಂಸ್ಕಾರ ಜೀವಿಗಳೆ,

ಭಾಷಾಕವಿಗಳು ಮಾತ್ರವಲ್ಲದೆ ತಾವು ಹಿಂದೂಸ್ಥಾನಿ ಮತ್ತು ಕರ್ನಾಟಕ ಗಾಯನಮಾರ್ಗಗಳೆರಡರಲ್ಲಿಯೂ ಅಮೋಘ ಪಾಂಡಿತ್ಯವನ್ನು ಗಳಿಸಿ ಉಭಯ ವಿಧವಾದ್ಯವಾದನ ಪ್ರವೀಣರಾಗಿರುವುದು ಅಪೂರ್ವ ಯೋಗಾಯೋಗವಾಗಿರುವುದಲ್ಲದೆ ತಮಗೆ ಈ ಕಲೆಯಲ್ಲಿ ಇಡಿಯ ಕರ್ನಾಟಕದಲ್ಲಿಯೇ ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟಿದೆ.

ತಮ್ಮ ಬಹುಮುಖವಾದ ಪಾಂಡಿತ್ಯವನ್ನು ಪರಾಂಬರಿಸಿ ಕನ್ನಡನಾಡಿನ ಗುರುಪೀಠಗಳವರು ಹಾಗೂ ಮಹಾಜನರು ತಮಗೆ ನೀಡಿರುವ "ತ್ರಿಭಾಷಾಕವಿ" "ಉಭಯ ಗಾಯನಾಚಾರ್ಯ" "ಉಭಯಗಾಯನವಾದನ ಕಂಠೀರವ" "ಸಾಹಿತ್ಯ ಸಂಗೀತ ಕಲಾಪ್ರವೀಣ" ಮುಂತಾದ ಪ್ರಶಸ್ತಿಗಳು ಅನ್ವರ್ಥಕವಾಗಿವೆ.

ಆದರ್ಶ ಶಿಕ್ಷಣಪಟುಗಳೆ,

ತಾವು ಕಲಿತ ವಿದ್ಯೆಯನ್ನು ಸತ್ಪಾತ್ರದಲ್ಲಿ ಧಾರೆಯೆರೆಯುವುದರಲ್ಲಿ ಆಸಕ್ತರಾದ ತಮಗೆ ಪೂಜ್ಯ ಪಂಚಾಕ್ಷರಗವಾಯಿಗಳವರು ಗದುಗಿನಲ್ಲಿ ಸ್ಥಾಪಿಸಿದ್ದ "ಶ್ರೀ ಕುಮಾರಸ್ವಾಮಿ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ" ಮತ್ತು "ಶ್ರೀವೀರೇಶ್ವರಾಶ್ರಮ"ಗಳ ಒಡೆತನವನ್ನು ವಹಿಸಿದುದು ಸೂಕ್ತವೇ ಆಗಿದೆ. ಕೇವಲ ಮಹಾಜನರ ಕೃಪಾಶ್ರಯದಲ್ಲಿ ನಡೆಯುತ್ತಿರುವ ಈ ಎರಡು ಸಂಸ್ಥೆಗಳಲ್ಲಿ

ಎಲ್ಲ ಜಾತಿಮತಗಳಿಗೆ ಸೇರಿದ ನೂರಾರು ಮಂದಿ ವಿದ್ಯಾರ್ಥಿಗಳು,ಹೆಚ್ಚಾಗಿ ಕುರುಡರು ಆಶ್ರಯವನ್ನು ಪಡೆದು ಶಿಕ್ಷಣ ಪಡೆಯುತ್ತಿರುವುದು ತಮ್ಮ ಉದಾತ್ತ ಗೊತ್ತುಗುರಿಗಳನ್ನು ಸಾರುವ ಜೀವಂತ ನಿದರ್ಶನವಾಗಿದೆ.

ಹೀಗೆ ತ್ರಿಭಾಷಾ ಕವಿಗಳಾಗಿ, ಗ್ರಂಥಕಾರರಾಗಿ, ಕೀರ್ತನ ಕೋವಿದರಾಗಿ, ಉಭಯಮಾರ್ಗ ವಿವಿಧವಾದ್ಯವಾದನಗಾಯನ ಪ್ರವೀಣರಾಗಿ, ವಿದ್ಯಾಶಿಕ್ಷಕರಾಗಿ ವಿದ್ಯಾರ್ಥಿನಿಲಯ ಮತ್ತು ವಿದ್ಯಾಲಯ ಸಂಚಾಲಕರಾಗಿ, ಅಖಂಡ ಬ್ರಹ್ಮಚಾರಿಗಳಾಗಿ, ಸದಾಚಾರ ನಿಷ್ಠರಾಗಿ, ಶಿವಪೂಜಾ ಪರಾಯಣರಾಗಿ ನಾಡುನುಡಿ ಹಾಗೂ ಕಲಾಕ್ಷೇತ್ರಗಳಿಗೆ ಅಪಾರ ಸೇವೆ ಸಲ್ಲಿಸುತ್ತಿರುವ ವಿನಯಭೂಷಿತರಾದ ತಮಗೆ ದಯಾಮಯನಾದ ಭಗವಂತನು ಇತೋಪ್ಯತಿಶಯವಾದ ಆಯುರಾರೋಗ್ಯ ಭಾಗಗಳನ್ನು ಕರುಣಿಸಿ ಅನೇಕಕಾಲ ತಮ್ಮ ಸೇವೆಯು ಜನತೆಗೆ ದೊರೆಯುವಂತೆ ಅನುಗ್ರಹಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ತಾ ೨೫-೧-೫೯
ಮೈಸೂರು.

ಇಂತು
ತಮ್ಮ ವಿಶ್ವಾಸಿಗಳಾದ
ಮೈಸೂರು ಪೌರರು.



ಭಾರತವಿಖ್ಯಾತ ಶಹನಾಯಿವಾದನಪಟು ಜನಾಬ ಬಿಸ್ಮಿಲ್ಲಾಖಾನ ಅವರು ...
ಪಂಡಿತ ಪುಟ್ಟರಾಜರ ಗದುಗಿನ ಸಂಗೀತ ವಿದ್ಯಾಲಯಕ್ಕೆ ಸಂದರ್ಶನ ಕೊಟ್ಟ ದೃಶ್ಯ.



ಪಂ. ಪುಟ್ಟರಾಜ ಗವಾಯಿಗಳವರನ್ನು ದಿಲ್ಲಿಯ ರಾಷ್ಟ್ರಪತಿ ಭವನದಲ್ಲಿ ದಿ. ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದರವರು ಸ್ವಾಗತಿಸುತ್ತಿರುವದು.

No. 1379-G/61

President's Secretariat,
Rashtrapati Bhavan,
New Delhi-4

February 4, 1961
Magh 15, 1882 (Saka)

*Dear Sir,*

The President desires me to thank you for your letter dated 8th November, 1960 and a copy of "Shri Basaveshwar Puran". He appreciates your devotion to Indian music and the service you have rendered to it despite your physical handicap. The President also desires me to send you his good wishes for your Hindi composition, BasaveshwarPuran.

*Yours faithfully,*

**R. L. Handa**
Press Secretary to the
President of India.

**Shri Puttaraja Gavai,**
Shree Kumareshwar Krupaposhita Sangeet
Sahitya Mahavidyalaya,
Vidwan Sangeet Sahitya Visharada
Puttaraja Kavi,
Veereshwar Punyashram,
GADAG.

## ೧೧

[ಮೈಸೂರು ರಾಜ್ಯದ ಸಂಗೀತ ನಾಟಕ ಅಕಾಡೆಮಿಯವರು ೧೯೬೧ರಲ್ಲಿ ಪಂ.ಪುಟ್ಟರಾಜರಿಗೆ, ಪ್ರಶಸ್ತಿಯನ್ನು ದಯಪಾಲಿಸಿ ಗೌರವಿಸಿದ ಸಂದರ್ಭದಲ್ಲಿ ಬರೆದ ಪರಿಚಯ. ಈ ಪರಿಚಯಾತ್ಮಕ ನಿರೂಪದ ಲೇಖಕರು ಶ್ರೀ ಶೇಷಾದ್ರಿ ಗವಾಯಿ]

### 'ಸಂಗೀತ ರತ್ನ'

# ಪಂ. ಪುಟ್ಟರಾಜ ಗವಾಯಿಗಳು

ಕೈ. ಪಂಚಾಕ್ಷರ ಗವಾಯಿಗಳವರ ಪಟ್ಟಶಿಷ್ಯರೂ, ಉತ್ತರಾಧಿಕಾರಿಗಳೂ ಶ್ರೀ ವೀರೇಶ್ವರ ಪುಣ್ಯಾಶ್ರಮದ ಸಂಚಾಲಕರೂ ಆದ ಪಂ. ಪುಟ್ಟರಾಜ ಗವಾಯಿಗಳವರು ೧೯೧೪ನೇ ಇಸ್ವಿಯ ಮಾರ್ಚ ೩ ರಂದು ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ದೇವಗಿರಿ ಎಂಬಲ್ಲಿ ಶ್ರೀ ರೇವಯ್ಯ-ಸಿದ್ದಮ್ಮ ಎಂಬ ದಂಪತಿಗಳ ಗರ್ಭದಲ್ಲಿ ಜನಿಸಿದರು. ಇವರು ಕುರುಡರಾಗಿ ಹುಟ್ಟಿದುದು ತಂದೆ-ತಾಯಿಗಳಿಗೆ ದುಃಖದಾಯಕವಾಯಿತು.

ಇದರು ಚಿಕ್ಕವರಿರುವಾಗಲೇ ಮನೆಯಲ್ಲಿ ಪಂ. ಪಂಚಾಕ್ಷರ ಗವಾಯಿಗಳವರ ಶಿಷ್ಯರೂ, ಸೋದರಮಾವಂದಿರೂ ಆದ ಶ್ರೀ ಚಂದ್ರಶೇಖರಯ್ಯ ವೆಂಕಟಾಪುರ ಹಿರೇಮಠ ಅವರಿಂದ ಸಂಗೀತದ ಪ್ರಾಥಮಿಕ ಶಿಕ್ಷಣ ಪಡೆದರು. ಅನಂತರ ಶ್ರೀ ಚಂದ್ರಶೇಖರಯ್ಯನವರೇ ಇವರನ್ನು ತಮ್ಮ ಗುರುಗಳ ಹತ್ತಿರ ವಿದ್ಯೆಯನು ಮುಂದುವರಿಸಲು ಬಿಟ್ಟರು. ಆಗ ಪಂ. ಪಂಚಾಕ್ಷರ ಗವಾಯಿಗಳವರು ಶಿವಯೋಗ ಮಂದಿರದಲ್ಲಿ ಸಂಗೀತ ಶಾಲೆ ನಡೆಸಿಕೊಂಡಿದ್ದರು. ಶಾಲೆ ಪ್ರವೇಶಿಸಿದಾಗ ಪುಟ್ಟರಾಜರಿಗೆ ಕೇವಲ ೯ ವರ್ಷ. ಇವರ ಬುದ್ಧಿ ಬಲು ಚುರುಕು. ಬೆರಳು ತೋರಿಸಿದರೆ ಹಸ್ತ ನುಂಗುವ ಸ್ವಭಾವ. ಹೀಗಾಗಿ ಕೆಲವರ್ಷಗಳಲ್ಲಿ ಗುರುಗಳ ವಿದ್ಯೆಯನ್ನೆಲ್ಲ ಚೆನ್ನಾಗಿ ಅರಗಿಸಿಕೊಂಡು ಪ್ರಸಿದ್ಧ ಸಂಗೀತಜ್ಞರಾದರು. ಇದಿಷ್ಟೇ ಸಾಲದೇ ಎಲ್ಲ ವಾದ್ಯಗಳನ್ನೂ ಬೇರೆ ಬೇರೆಯವರಿಂದ ಕಲಿತು ಎಲ್ಲ ವಿಷಯವಲ್ಲಿಯೂ ನೈಪುಣ್ಯ ಗಳಿಸಿದರು.

ಪಂ. ಪುಟ್ಟರಾಜರು ಗುರುಗಳಂತೆ ಕೇವಲ ಸಂಗೀತಾಚಾರ್ಯರಾಗಿ ಪ್ರಸಿದ್ಧಿಗೆ ಬಂದಿರುವುದಲ್ಲದೇ ಸಾಹಿತ್ಯರಂಗದಲ್ಲಿಯೂ ನಾಟಕ ರಂಗದಲ್ಲಿಯೂ ಸೇವೆಸಲ್ಲಿಸಿದ್ದಾರೆ.

ಇವರು ಕನ್ನಡದಲ್ಲಿ ಅನೇಕ ನಾಟಕಗಳನ್ನೂ, ವಾರ್ಧಿಕ ಷಟ್ಪದಿಯಲ್ಲಿ "ಅಕ್ಕಮಹಾದೇವಿ ಪುರಾಣ" ವನ್ನೂ, ಸಂಸ್ಕೃತದಲ್ಲಿ "ಗುರುಗೀತೆ"ಯನ್ನೂ, ಹಿಂದಿಯಲ್ಲಿ "ಬಸವೇಶ್ವರ ಪುರಾಣ"ವನ್ನೂ ಬರೆದು ರಾಷ್ಟ್ರಪತಿಗಳಿಂದ ಪ್ರಶಂಸೆ ಪಡೆದಿದ್ದಾರೆ.

ಪಂ. ಪಂಚಾಕ್ಷರ ಗವಾಯಿಗಳವರ ಶಿಷ್ಯರಲ್ಲಿ ಪಂ. ಪುಟ್ಟರಾಜರು ಅಗ್ರಗಣ್ಯರು. ಇವರಲ್ಲಿರುವ ಯೋಗ್ಯತೆ, ಪ್ರಾವೀಣ್ಯತೆ, ನಿಸ್ವಾರ್ಥತೆ, ತ್ಯಾಗ, ಸೇವೆಗಳಿಗೆ ಮಾರು ಹೋದ ಪಂ. ಪಂಚಾಕ್ಷರ ಗವಾಯಿಗಳವರು ೧೯೪೪ ರಲ್ಲಿ ತಾವು ಕಟ್ಟಿ ಬೆಳೆಸಬೇಕೆಂದಿದ್ದ ಆಶ್ರಮವನ್ನು ಇವರ ವಶಕ್ಕೊಪ್ಪಿಸಿ ಕಾಲವಾದರು. ಅಂದಿನಿಂದ ಇಂದಿನವರೆಗೂ ಅವರ ಇಚ್ಛೆಯಂತೆ ಆಶ್ರಮವನ್ನು ಬೆಳೆಸಿ ಅದರ ಕೀರ್ತಿ ದೇಶದ. ತುಂಬೆಲ್ಲ ಹರಡುವಂತೆ ಮಾಡಿದ್ದಾರೆ.

೧೨

## ಸಾಹಿತ್ಯ ಸಂಗೀತ ಕಲಾಪ್ರವೀಣ ಉಭಯಗಾಯನ ವಾದನ ಕಂಠೀರವ, ಉಭಯ ಗಾಯನಾಚಾರ್ಯ, ತ್ರಿಭಾಷಾಕವಿ ಇತ್ಯಾದಿ

ಬಿರುದಾಲಂಕೃತರಾದ

# ಶ್ರೀ ಪುಟ್ಟರಾಜ ಗವಾಯಿಗಳ

## ಸನ್ನಿಧಿಯಲ್ಲಿ

ಪೂಜ್ಯರೇ

ಕ್ರತುಪುರ ಪುಣ್ಯಕ್ಷೇತ್ರದಲ್ಲಿ, ಶ್ರೀ ವೀರನಾರಾಯಣ ಗದುಗಿನಲ್ಲಿ ಸೇರುತ್ತಲಿರುವ, ನಾಲವತ್ತುಮೂರನೆಯ ಕನ್ನಡಸಾಹಿತ್ಯಸಮ್ಮೇಳನದ ಶುಭಪ್ರಸಂಗದಲ್ಲಿ, ಕನ್ನಡಸಾಹಿತ್ಯಪರಿಷತ್ತಿನ ಪರವಾಗಿ ಸಾಹಿತ್ಯ ಸಂಗೀತ ಕಲಾಪ್ರೇಮಿಗಳ ಪರವಾಗಿ ಮತ್ತು ಗದಗ ಬೆಟಗೇರಿಯ ನಾಗರಿಕರ ಪರವಾಗಿ ಸಮ್ಮೇಳನದ ನಾಂದಿಸ್ವರೂಪದ ಈ ಸನ್ಮಾನ ಪತ್ರದಿಂದ ತಮ್ಮನ್ನು ಸತ್ಕರಿಸಲು ನಮಗೆ ಅತಿಶಯವಾದ ಆನಂದವಾಗುತ್ತದೆ. ಬೆಂಗಳೂರ ಮೈಸೂರುಗಳ ರಸಿಕ ಕಲೋಪಾಸಕರು ತಮ್ಮ ಅಗಾಧ ಕಲಾಸಂಪತ್ತಿಯನ್ನು ಮನವಾರೆ ಮೆಚ್ಚಿ ತಮ್ಮನ್ನು ಈಗಾಗಲೇ ಗೌರವಿಸಿದ್ದುಂಟು. ಆದರೆ ಕನ್ನಡಸಾಹಿತ್ಯ ಪರಿಷತ್ತಿಗೆ ಮತ್ತು ಕನ್ನಡ ನುಡಿಭಕ್ತರಿಗೆ ಇಂದಿನ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಈ ಸನ್ಮಾನ ಪತ್ರದಿಂದ ತಮ್ಮನ್ನು ಗೌರವಿಸುವ ಸದವಕಾಶ ದೊರೆತದ್ದು ನಮ್ಮ ಸೌಭಾಗ್ಯವೆಂದೇ ಭಾವಿಸುತ್ತೇವೆ.

ಉದ್ದಾಮ ಸಾಹಿತಿಗಳು ಸಿಗಬಹುದು, ಸಂಗೀತವಿಶಾರದರೂ ಸಿಗಬಹುದು. ವಾದ್ಯವಾದನ ಪಟುಗಳೂ ಸಿಗಬಹುದು. ಆದರೆ ಸಾಹಿತ್ಯ ಸಂಗೀತ ವಾದ್ಯವಾದನ ಕಲೆಗಳ ತ್ರಿವೇಣೀ ಸಂಗಮವಿದ್ದ ಕಲಾಭಿಜ್ಞರು ಸಿಕ್ಕುವದು ವಿರಳ. ತಮ್ಮ ಪೂಜ್ಯ ಗುರುಗಳಾದ ಲಿಂಗೈಕ್ಯ ಪಂಚಾಕ್ಷರಿ ಗವಾಯಿಗಳ ಪೂರ್ಣಕೃಪೆಯಿಂದಲೇ ತಾವು ಮುಕ್ಕಣ್ಣರಾಗಿ ಅಲೌಕಿಕಲಾಸಂಪತ್-ಸಮೃದ್ಧಿಯ ಸಾರ್ವಭೌಮರಾಗಿದ್ದೀರಿ ಎಂದರೆ ತಪ್ಪಾಗಲಾರದು. ಅಕ್ಕಮಹಾದೇವಿ ಪುರಾಣವನ್ನು ಕನ್ನಡಭಾಮಿನಿ ಪಟ್ಪದಿಯಲ್ಲಿ ಗುರುಗೀತೆಯನ್ನು ಸಂಸ್ಕೃತದಲ್ಲಿ ಮತ್ತು ಹಿಂದಿಯಲ್ಲಿ ಬಸವ ಪುರಾಣವನ್ನು ಬರೆದು ತಮ್ಮ ಅಮೋಘವಾದ ತ್ರಿಭಾಷಾಪಾಂಡಿತ್ಯವನ್ನು ಪ್ರದರ್ಶಿಸಿದ್ದೀರಿ. ಜಗಜ್ಯೋತಿ ಬಸವೇಶ್ವರ, ನಲ್ಲೂರ ನಂಬೆಕ್ಕ ಮೊದಲಾದ ಶಿವಶರಣ-ಶರಣೆಯರ

ನಾಟಕಗಳನ್ನು ಬರೆದು ತಮ್ಮ ಆಶ್ರಯದಲ್ಲಿ ಸ್ಥಾಪಿತವಾಗಿರುವ ನಾಟಕ ಸಭೆಯಿಂದ ರಂಗಭೂಮಿಗೆ ತಂದಿದ್ದೀರಿ. ಹೇಮರಡ್ಡಿ ಮಲ್ಲಮ್ಮ ನಾಟಕವನ್ನು ೩೦೫ ದಿವಸಗಳ ವರೆಗೆ ಸತತವಾಗಿ ಪ್ರತಿದಿನ ಅಭಿನಯಿಸಿ ಪ್ರೇಕ್ಷಕರನ್ನು ತಣಿಸಿ ರಂಗಭೂಮಿಯಲ್ಲಿ ಹೊಸ ವಿಕ್ರಮವನ್ನು ಸಾಧಿಸಿದ್ದೀರಿ.

ಶ್ರೀ ಕುಮಾರಸ್ವಾಮಿ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ ಮತ್ತು ಶ್ರೀ ವೀರೇಶ್ವರ ಪುಣ್ಯಾಶ್ರಮಗಳಲ್ಲಿ ಪಾಠ ಪ್ರವಚನ ಕೀರ್ತನಗಳಿಂದ ತಮಗೆ ದೈವದತ್ತವಾಗಿ ಬಂದ ಸಾಹಿತ್ಯಸಂಗೀತ ಅಧ್ಯಾತ್ಮ ವಿದ್ಯೆಗಳ ಪ್ರಸಾರ ಕಾರ್ಯವನ್ನು ಮಾಡುತ್ತಿರುವಿರಿ. ಅದರಲ್ಲಿಯೂ ವಿಶೇಷತಃ ಕುರುಡು ಸಂತಾನಕ್ಕೆ ತಮ್ಮ ಅಗಾಧ ತಪಸ್ಸನ್ನು ಸಂತತವಾಗಿ ಧಾರೆ ಎರೆಯುತ್ತಿರುವದು ನಿಜವಾಗಿಯೂ ಶ್ಲಾಘನೀಯ ವಾಗಿದೆ. ಅನೇಕ ಭಾಷಾ ಮಧುರ ಬಾಂಧ್ಯವನ್ನೂ ಹಾಗೂ ಪಾಂಡಿತ್ಯವನ್ನೂ ಏಕದೇಶೀಯವಾಗಿ ಸಾಧಿಸಿದ ತಮ್ಮನ್ನು ಎಷ್ಟು ಗೌರವಿಸಿದರೂ ಕಡಿಮೆಯೇ ಆಗಿದೆ. ಕವಿಯ ಕಣ್ಣು ಭಕ್ತನ ಹೃದಯಗಳಿಂದ ಕೂಡಿದ ತಮ್ಮ ಪ್ರತಿಭೆಯು ಲೋಕದ ಕಣ್ಣು ಕುಕ್ಕಿಸುವಂತಹದು ಇರುತ್ತದೆಂಬದನ್ನು ಕಣ್ಣಿದ್ದವರು ಕಂಡಿದ್ದಾರೆ; ಕಿವಿ ಇದ್ದವರು ಕೇಳಿ ನಲಿದಿದ್ದಾರೆ.

ಪರಮೇಶ್ವರನು ತಮಗೆ ದೀರ್ಘಾಯುರಾರೋಗ್ಯ ಭಾಗ್ಯವನ್ನು ದಯಪಾಲಿಸ ಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

| | |
|---|---|
| ಕೆ. ಎಚ್. ಪಾಟೀಲ | ಬಿ. ಶಿವಮೂರ್ತಿ ಶಾಸ್ತ್ರಿ |
| ಸ್ವಾಗತಾಧ್ಯಕ್ಷ | ಅಧ್ಯಕ್ಷ |
| ಕನ್ನಡ ಸಾಹಿತ್ಯ ಸಮ್ಮೇಳನ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |

ಗದಗ

೨೭—೧೨—೧೯೬೧

ಚಿತ್ರದುರ್ಗ ಜಿಲ್ಲಾ ಖಾದಿ-ಗ್ರಾಮೋದ್ಯೋಗ ವಸ್ತು ಪ್ರದರ್ಶನ
ಮತ್ತು
ಅಖಿಲ ಭಾರತ ಪನೆಬೆಲ್ಲ ವಸ್ತು ಪ್ರದರ್ಶನ
ಡಾವಣಗೆರೆ, ೧೯೬೨.

## :: ಪ್ರಶಸ್ತಿ ಪತ್ರ ::

ಶ್ರೀ ಪಂಚಾಕ್ಷರ ಗವಾಯಿ ಮತ್ತು ಪಾರ್ಟಿ
ಸಂಗೀತ ಗೋಷ್ಠಿ ಇವರಿಗೆ—

ವಸ್ತು ಪ್ರದರ್ಶನದಲ್ಲಿ ಭಾಗವಹಿಸಿದ್ದಕ್ಕಾಗಿ ಈ ಪ್ರಶಸ್ತಿ ಪತ್ರವನ್ನು ನೀಡಲಾಗಿದೆ.

ಹೆಚ್. ಸಿದ್ದವೀರಪ್ಪ
ಅಧ್ಯಕ್ಷರು
ಮೈಸೂರು ರಾಜ್ಯ ಖಾದಿ-ಗ್ರಾಮೋದ್ಯೋಗ
ಮಂಡಲ, ಬೆಂಗಳೂರು-೪.

ಶ್ರೀ. ಹೆಚ್. ವೀರಪ್ಪ
ಅಧ್ಯಕ್ಷರು :
ನವಭಾರತ ಖಾದಿ-ಗ್ರಾಮೋದ್ಯೋಗ ಸಹಕಾರಿ ಸಂಘ ಲಿ.
ಖಾದಿ-ಗಾಮೋದ್ಯೋಗ ವಸ್ತು ಪ್ರದರ್ಶನ ಸಮಿತಿ,
ಡಾವಣಗೆರೆ.

ಕಾರ್ಯದರ್ಶಿಗಳು :
ಕೆ. ಎಸ್. ಸಿದ್ದಪ್ಪ
ಎನ್. ಆರ್. ಮಠದ,

॥ ಶ್ರೀ ಕುಮಾರೇಶ್ವರ ಪ್ರಸನ್ನ ॥

ದಿನಾಂಕ ೧೧—೬—೧೯೬೨ ರಂದು ಸೋಮವಾರ

ಗದುಗಿನ ಶ್ರೀ ಕುಮಾರೇಶ್ವರ ಕೃಪಾಪೋಷಿತ ಪಂ॥ ಗಾನಯೋಗಿ ಪಂಚಾಕ್ಷರ ಗವಾಯಿಗಳ

ಸಂಗೀತ ಪಾಠಶಾಲಾಧ್ಯಕ್ಷರಾದ ಸಂಗೀತ ಸಾಹಿತ್ಯ ವಿದ್ವಾನ ಉಭಯಗಾನ ವಿಶಾರದ ಪಂ॥ ಪುಟ್ಟರಾಜ ಕವಿಗಳಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದ

# ಪಂಚರತ್ನ ಮಾಲಿಕೆ



## ಷಟ್ಪದಿ

ಪುಟ್ಟಿರುವಿ ಭೂಲೋಕದಲಿ ನೀ
ಕಟ್ಟಿರುವಿ ಶಾರದೆಯ ಮನೆಯನು
ತೊಟ್ಟಿರುವಿ ಸಂಗೀತ ಸಾಹಿತ್ಯಗಳ ಕವಚವನೂ
ದೃಷ್ಟಿರಹಿತನು ಸೃಷ್ಟಿಸಹಿತನು
ಪುಟ್ಟರಾಜನೆ ಸಲಹು ನಿನ್ನಂಗುಷ್ಠ
ಪಾದದ ಪುಷ್ಪದಂದದಿ ಸೃಷ್ಟಿಲಯಸುತನಾ ॥ ೧ ॥

ಪಡೆದು ಪಂಚಾಕ್ಷರಿಯ ಕರುಣವ
ಬಿಡದೆ ಗುರಿಯನು ಸಾಧಿಸುತೆ
ಧೃಡಮನದಿ ನಡೆಸುತಲಿರ್ಪೆಯೋ ಸಂಗೀತಶಾಲೆಯನೂ
ಕಡುಭರದಿ ಕುಲಚಲಗಳೆನ್ನದೆ
ಒಡನೆ ಕರುಣಿಸಿ ಶಿಷ್ಯಕೋಟಿಯ
ನುಡಿವನಾಮದಲಿರ್ದು ಸಲಹೈ ನಿನ್ನ ಮೃಡಸುತನಾ ॥ ೨ ॥

ಉತ್ತರಾದಿಯು ದಕ್ಷಿಣಾದಿಯೊ
ಳುತ್ತುಮದ ಸಂಗೀತವಿದ್ಯಗ
ಳಿತ್ತು ಸಲಹಿದಿ ಕರ್ತ್ರುರ್ನೀ ವಿದ್ಯಾರ್ಥಿಗಳ ಮೂರ್ತಿ
ಸತ್ಯದಿಂದಾಚಾರವನು ನೀ
ನಿತ್ಯ ನಡೆಸುತೆ ಸತ್‌ಸುಕೀರ್ತನ
ಮತ್ತೆ ಸಾಹಿತ್ಯಗಳ ಖಣಿ ನೀ ಸಲಹು ಶಿವಸುತನಾ ॥೪॥

ಬುಧರು ಮೆಚ್ಚುವ ತೆರದಿ ನಿನ್ನಯ
ಹೃದಯ ಕಮಲದಿ ಉದಯಿಸಿದಮಹ
ಪದಗಳೇ ಮಹದೇವಿಯಕ್ಕನ ಮೌಕ್ತಿಕ ಪುರಾಣಾ
ಇದುವೆ ಪಠಿಸಲು ಮುದದಿ ರಕ್ಷಿಸಿ
ಸದಮಲದ ಸುಜ್ಞಾನ ಪದಗಳ
ವಿಧ ವಿಧದಿ ನೀಡುತಲಿ ಪೊರೆಯೈ ಮದನಹರ ಸುತನಾ ॥೪॥

ನಿನ್ನ ದಿವ್ಯಜ್ಞಾನ ಜ್ಯೋತಿಯ
ಲಿನ್ನು ಬೆಳಗುತಲಿಹುದು ಗದುಗಿನ
ಪುಣ್ಯ ವೀರೇಶ್ವರನ ಆಶ್ರಮ ಸೊನ್ನಲಿಯ ತೆರದೀ
ಮುನ್ನ ಸಂಚಾರವನು ಕೈಕೊಂ
ಡಿನ್ನು ಗಾನದಿ ಜನರನೊಲಿಸಿದ
ಚಿನ್ಮಯನೆ ಗುರು ಪೊರೆಯೋ ದೇವಾಬ್ಧೀಶನಾ ಸುತನಾ ॥೫॥

— ಭದ್ರಂ ಶಿವಂ ಮಂಗಳಂ —

ಪ್ರಕಾಶಕರು :
ಜಿ. ಅಮರಗೌಡ್ರು
ತಾ. ಬೋರ್ಡು ಮೆಂಬರ್ (ದೇವಸಮುದ್ರ)

ಲೇಖಕ :
H. M. ಶಿವಕುಮಾರಸ್ವಾಮಿ
ದೇವಸಮುದ್ರ ವ್ಹಯಾ ಕಂಪ್ಲಿ

॥ ಸಿರಿಗನ್ನಡಂಗೆಲ್ಗೆ-ಬಾಳ್ಗೆ ॥

ಗದಗ ವೀರೇಶ್ವರ ಪುಣ್ಯಾಶ್ರಮ ಸಂಗೀತ ಶಾಲೆಯ ಅಧ್ಯಕ್ಷರೂ
ಉಭಯ ಗಾಯನಾಚಾರ್ಯರೂ ಕನ್ನಡ, ಸಂಸ್ಕೃತ, ಹಿಂದಿ
ಕವಿಪುಂಗವರೂ ಆದ

## ವೇ. ಶ್ರೀ ಪುಟ್ಟರಾಜ ಗವಾಯಿಗಳವರಿಗೆ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು
ಪ್ರೀತಿ ವಿಶ್ವಾಸಗಳಿಂದ ಅರ್ಪಿಸಿದ

## :: ಸನ್ಮಾನ ಪತ್ರಿಕೆ ::



ಸಂಗೀತ ಸಾಹಿತ್ಯ ವಿಶಾರದರೆ,

ಗದಗದ ವೀರೇಶ್ವರ ಪುಣ್ಯಾಶ್ರಮ ಸಂಗೀತ ಶಾಲೆಯ ಅಧ್ಯಕ್ಷರೂ, ಕನ್ನಡದಲ್ಲಿ ಮಹಾದೇವಿಯಕ್ಕನ ಪುರಾಣ, ಹಾವೇರಿ ಸ್ವಾಮಿಗಳ ಪುರಾಣ, ನಂಬಿಯಕ್ಕನ ನಾಟಕ, ಹೇಮರಡ್ಡಿ ಮಲ್ಲಮ್ಮ ನಾಟಕ ಮೊದಲಾದ ಗ್ರಂಥಗಳನ್ನು ರಚಿಸಿರುವವರೂ, ಹಿಂದಿ ಭಾಷೆಯಲ್ಲಿ ಭೀಮಕವಿಯ ಬಸವ ಪುರಾಣವನ್ನು ಉತ್ತಮ ರೀತಿಯಲ್ಲಿ ಭಾಷಾಂತರಿಸಿ ನಿವೃತ್ತ ರಾಷ್ಟ್ರಾಧ್ಯಕ್ಷ ಡಾ॥ ರಾಜೇಂದ್ರ ಪ್ರಸಾದರಿಗೆ ಸಮರ್ಪಿಸಿ ಅವರ ಮೆಚ್ಚುಗೆಯನ್ನು ಪಡೆದಿರತಕ್ಕವರೂ, ಸಂಸ್ಕೃತದಲ್ಲಿ ಗುರುಭಕ್ತಿ ಗೀತಾ ಮೊದಲಾದ ಕೃತಿಗಳನ್ನು ರಚಿಸಿರತಕ್ಕವರೂ ಅದು ಕಾರಣವೇ ತ್ರಿಭಾಷಾ ಕವಿವರ್ಯರೂ ಕರ್ನಾಟಕ ಮತ್ತು ಹಿಂದುಸ್ಥಾನಿ ಸಂಗೀತದಲ್ಲಿ ಆಚಾರ್ಯ ಪುರುಷರೂ, ಹಾರ್ಮೋನಿಯಂ, ಪಿಟೀಲು, ಸಿತಾರ್, ತಬಲ, ಶಹನಾಯ್ ಸಂಗೀತ ವಾದ್ಯಗಳನ್ನು ನುಡಿಸುವುದರಲ್ಲಿ ವಿಖ್ಯಾತರೂ, ನೂರಾರುಮಂದಿ ಬಡವಿದ್ಯಾರ್ಥಿ

ಉತ್ತರಾದಿಯು ದಕ್ಷಿಣಾದಿಯೊ
ಳುತ್ತುಮದ ಸಂಗೀತವಿದ್ಯೆಗ
ಳಿತ್ತು ಸಲಹಿದಿ ಕರ್ತೃರ್ೃ ನೀ ವಿದ್ಯಾರ್ಥಿಗಳ ಮೂರ್ತಿ
ಸತ್ಯದಿಂದಾಚಾರವನು ನೀ
ನಿತ್ಯ ನಡೆಸುತೆ ಸತ್ ಸುಕೀರ್ತನ
ಮತ್ತೆ ಸಾಹಿತ್ಯಗಳ ಖಣಿ ನೀ ಸಲಹು ಶಿವಸುತನಾ ॥೪॥

ಬುಧರು ಮೆಚ್ಚುವ ತೆರದಿ ನಿನ್ನಯ
ಹೃದಯ ಕಮಲದಿ ಉದಯಿಸಿದಮಹ
ಪದಗಳೇ ಮಹದೇವಿಯಕ್ಕನ ಮೌಕ್ತಿಕ ಪುರಾಣಾ
ಇದುವೆ ಪಠಿಸಲು ಮುದದಿ ರಕ್ಷಿಸಿ
ಸದಮಲದ ಸುಜ್ಞಾನ ಪದಗಳ
ವಿಥ ವಿಧದಿ ನೀಡುತಲಿ ಪೊರೆಯ್ಯೆ ಮದನಹರ ಸುತನಾ ॥೪॥

ನಿನ್ನ ದಿವ್ಯಜ್ಞಾನ ಜ್ಯೋತಿಯ
ಲಿನ್ನು ಬೆಳಗುತಲಿಹುದು ಗದುಗಿನ
ಪುಣ್ಯ ವೀರೇಶ್ವರನ ಆಶ್ರಮ ಸೊನ್ನಲಿಯ ತೆರದೀ
ಮುನ್ನ ಸಂಚಾರವನು ಕೈಕೊಂ
ಡಿನ್ನು ಗಾನದಿ ಜನರನೊಲಿಸಿದ
ಚಿನ್ ಮಯನೆ ಗುರು ಪೊರೆಯೋ ದೇವಾಬ್ಧೀಶನಾ ಸುತನಾ ॥೫॥

— ಭದ್ರಂ ಶಿವಂ ಮಂಗಳಂ —

ಪ್ರಕಾಶಕರು :
ಜಿ. ಅಮರಗೌಡ್ರು
ತಾ. ಬೋರ್ಡು ಮೆಂಬರ್ (ದೇವಸಮುದ್ರ)

ಲೇಖಕ :
H. M. ಶಿವಕುಮಾರಸ್ವಾಮಿ
ದೇವಸಮುದ್ರ ವ್ಹಯಾ ಕಂಪ್ಲಿ

೧೫

॥ ಸಿರಿಗನ್ನಡಂಗೆಲ್ಗೆ-ಬಾಳ್ಗೆ ॥

ಗದಗ ವೀರೇಶ್ವರ ಪುಣ್ಯಾಶ್ರಮ ಸಂಗೀತ ಶಾಲೆಯ ಅಧ್ಯಕ್ಷರೂ

ಉಭಯ ಗಾಯನಾಚಾರ್ಯರೂ ಕನ್ನಡ, ಸಂಸ್ಕೃತ, ಹಿಂದಿ

ಕವಿಪುಂಗವರೂ ಆದ

## ವೇ. ಶ್ರೀ ಪುಟ್ಟರಾಜ ಗವಾಯಿಗಳವರಿಗೆ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು

ಪ್ರೀತಿ ವಿಶ್ವಾಸಗಳಿಂದ ಅರ್ಪಿಸಿದ

## :: ಸನ್ಮಾನ ಪತ್ರಿಕೆ ::

ಸಂಗೀತ ಸಾಹಿತ್ಯ ವಿಶಾರದರೆ,

ಗದಗದ ವೀರೇಶ್ವರ ಪುಣ್ಯಾಶ್ರಮ ಸಂಗೀತ ಶಾಲೆಯ ಅಧ್ಯಕ್ಷರೂ, ಕನ್ನಡದಲ್ಲಿ ಮಹಾದೇವಿಯಕ್ಕನ ಪುರಾಣ, ಹಾವೇರಿ ಸ್ವಾಮಿಗಳ ಪುರಾಣ, ನಂಬಿಯಕ್ಕನ ನಾಟಕ, ಹೇಮರಡ್ಡಿ ಮಲ್ಲಮ್ಮ ನಾಟಕ ಮೊದಲಾದ ಗ್ರಂಥಗಳನ್ನು ರಚಿಸಿರುವವರೂ, ಹಿಂದಿ ಭಾಷೆಯಲ್ಲಿ ಭೀಮಕವಿಯ ಬಸವ ಪುರಾಣವನ್ನು ಉತ್ತಮ ರೀತಿಯಲ್ಲಿ ಭಾಷಾಂತರಿಸಿ ನಿವೃತ್ತ ರಾಷ್ಟ್ರಾಧ್ಯಕ್ಷ ಡಾ॥ ರಾಜೇಂದ್ರ ಪ್ರಸಾದರಿಗೆ ಸಮರ್ಪಿಸಿ ಅವರ ಮೆಚ್ಚುಗೆಯನ್ನು ಪಡೆದಿರತಕ್ಕವರೂ, ಸಂಸ್ಕೃತದಲ್ಲಿ ಗುರುಭಕ್ತಿ ಗೀತಾ ಮೊದಲಾದ ಕೃತಿಗಳನ್ನು ರಚಿಸಿರತಕ್ಕವರೂ ಆದು ಕಾರಣವೇ ತ್ರಿಭಾಷಾ ಕವಿವರ್ಯರೂ ಕರ್ಣಾಟಕ ಮತ್ತು ಹಿಂದುಸ್ಥಾನಿ ಸಂಗೀತದಲ್ಲಿ ಆಚಾರ್ಯ ಪುರುಷರೂ, ಹಾರ್ಮೋನಿಯಂ, ಪಿಟೀಲು, ಸಿತಾರ್, ತಬಲ, ಶಹನಾಯ್ ಸಂಗೀತ ವಾದ್ಯಗಳನ್ನು ನುಡಿಸುವುದರಲ್ಲಿ ವಿಖ್ಯಾತರೂ, ನೂರಾರುಮಂದಿ ಬಡವಿದ್ಯಾರ್ಥಿ

ಗಳಿಗೆ ತಮ್ಮ ಪುಣ್ಯಾಶ್ರಮದಲ್ಲಿ ಆಶ್ರಯವಿತ್ತು ಅಶನ, ವಸನಗಳನ್ನು ಕೊಟ್ಟು ವಿದ್ಯಾದಾನ ಮಾಡಿ ದೇಶೋನ್ನತಿಗೆ ನೆರವಾಗಿರತಕ್ಕವರೂ, ನಿಮ್ಮಿಂದಲೇ ರಚಿತವಾಗಿರುವ ಪೌರಾಣಿಕ ನಾಟಕಗಳನ್ನು ರಂಗಭೂಮಿಯ ಮೇಲೆ ಪ್ರದರ್ಶಿಸುವಂತೆ ಮಾಡಿ ಕನ್ನಡ ನಾಡಿಗೂ, ನಾಟಕ ಕಲೆಗೂ ಮಹೋಪಕಾರವನ್ನು ಮಾಡಿರತಕ್ಕವರೂ, ಪರಿಶುದ್ಧವಾದ ಆಚಾರ-ವಿಚಾರಗಳಿಂದ ಶರಣ ಸದೃಶ ಜೀವನವನ್ನು ನಡೆಸತಕ್ಕವರೂ, ಕನ್ನಡ ನಾಡು-ನುಡಿಗಳ ಉಜ್ವಲಾಭಿಮಾನಿಗಳೂ, ಮೈಸೂರಿನ ಶ್ರೀಮನ್ಮಹಾರಾಜರು, ಗದುಗಿನ ಸಾಹಿತ್ಯ ಸಮ್ಮೇಳನ, ಕರ್ನಾಟಕದ ಸಂಗೀತ ನಾಟಕ ಅಕಾಡೆಮಿ ಮೊದಲಾದ ಕಡೆಗಳಿಂದ ಸನ್ಮಾನಿತರೂ ಆದ ತಮ್ಮನ್ನು ಇಂದು ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸ್ವಾಗತಿಸಿ, ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾದ ಮಾನ್ಯ ತಮ್ಮಣ್ಣಪ್ಪ ಕುಬೇರಪ್ಪ ತುಕ್ಕೋಳರ ಘನ ಸಮ್ಮುಖದಲ್ಲಿ ಸತ್ಕರಿಸುವ ಅವಕಾಶ ಪ್ರಾಪ್ತವಾದುದಕ್ಕಾಗಿ ನಮಗೆ ಪರಮಾನಂದವಾಗಿದೆ.

ಜ್ಞಾನವೃದ್ಧ, ತಪೋವೃದ್ಧರಾದ ತಾವು, ೧೮೯೧ನೇ ವರ್ಷದ ಮಾರ್ಚ ೩ರಂದು ಧಾರವಾಡ ಜಿಲ್ಲಾ ದೇವಗಿರಿ ಗ್ರಾಮದ ಶ್ರೀ ರೇವಯ್ಯ-ಸಿದ್ದಮ್ಮ ಎಂಬ ಪುಣ್ಯ ದಂಪತಿಗಳ ಗರ್ಭದಲ್ಲಿ ಜನಿಸಿದಿರಿ. ಜನ್ಮತಃ ಕುರುಡರಾಗಿ ಹುಟ್ಟಿದ ತಾವು ತಮ್ಮ ಹೆತ್ತ ತಂದೆ-ತಾಯಿಗಳಿಗೆ ಒಂದು ಸಮಸ್ಯೆಯಾಗಿ ಪರಿಣಮಿಸಿದಿರಿ. ನಿಮ್ಮ ಸೋದರಮಾವ ಶ್ರೀ ಚಂದ್ರಶೇಖರ ಹಿರೇಮಠ ಅವರಿಂದ ಪ್ರಾಥಮಿಕ ಸಂಗೀತ ಶಿಕ್ಷಣ ಪಡೆದಿರಿ. ಅನಂತರ ಬಿಜಾಪುರ ಜಿಲ್ಲಾ ಶಿವಯೋಗಮಂದಿರದಲ್ಲಿ ಸಂಗೀತ ಶಾಲೆಯನ್ನು ನಡೆಸುತ್ತಿದ್ದ ಗಾನಯೋಗಿ ಕೈ॥ ಪಂಡಿತ ಪಂಚಾಕ್ಷರ ಗವಾಯಿಗಳ ಕೃಪೆಗೆ ಪಾತ್ರರಾದಿರಿ. ಕೇವಲ ೯ ವರ್ಷದ ಬಾಲಕರಾದ ನಿಮ್ಮನ್ನು ಮಹಾನುಭಾವ ಪಂಚಾಕ್ಷರ ಗವಾಯಿಗಳು ಕರ್ನಾಟಕ, ಹಿಂದೂಸ್ಥಾನಿ ಸಂಗೀತದ ಆಚಾರ್ಯ ಪುರುಷರಾಗುವಂತೆ ಅನುಗ್ರಹಿಸಿದರು. ಅವರು ಶಿವಲೋಕವಾಸಿಗಳಾದ ಮೇಲೆ, ಅವರು ಸ್ಥಾಪಿಸಿದ ಸಂಗೀತಶಾಲೆಯನ್ನೂ, ಪುಣ್ಯಾಶ್ರಮವನ್ನೂ (ಸನ್ ೧೯೪೪ ರಿಂದ) ತಾವು ವಹಿಸಿಕೊಂಡು ಅದನ್ನು ಅತಿಶಯವಾಗಿ ಅಭಿವೃದ್ಧಿಪಡಿಸಿ ನಡೆಸಿಕೊಂಡುಬಂದಿರುತ್ತೀರಿ. ಈ ಮೂಲಕವಾಗಿ ತಾವು ಕರ್ನಾಟಕ ರಾಜ್ಯಕ್ಕೂ ಸಂಗೀತ ಸಾಹಿತ್ಯ ಪ್ರಪಂಚಕ್ಕೂ ಸಲ್ಲಿಸಿರುವ ಮತ್ತು ಸಲ್ಲಿಸುತ್ತಿರುವ ಸೇವೆಯು ನಿಜವಾಗಿಯೂ ಶ್ಲಾಘ್ಯವಾದುದು. ಹಾಗೂ ಸಹೃದಯರ ಮೆಚ್ಚುಗೆಗೆ ಪಾತ್ರವಾಗಲರ್ಹವಾದುದು.

ಕನ್ನಡ ಸಾಹಿತ್ಯ ಪರಿಷತ್ತು ೧೯೧೫ರಲ್ಲಿ ಸ್ಥಾಪನೆಯಾಗಿ ಸಮಗ್ರ ಕರ್ನಾಟಕದ ಹಿತಚಿಂತನೆಯನ್ನು ಗಮನಿಸಿ, ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸುತ್ತಿದೆಯೆಂಬುದು ತಮಗೆ ತಿಳಿದಿರಬೇಕು. ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಅಭಿವೃದ್ಧಿಗೊಳಿಸುವುದು, ಕರ್ನಾಟಕ ವಾಙ್ಮಯ, ಕನ್ನಡ ಲಲಿತ

ಕಲೆಗಳನ್ನು ಪ್ರೋತ್ಸಾಹಿಸುವುದು, ಕನ್ನಡ ವಿದ್ವಾಂಸರು, ಕವಿಗಳು, ಕಲಾವಿದರನ್ನು ಸನ್ಮಾನಿಸುವುದು, ಕರ್ಣಾಟಕದಲ್ಲಿ ಸಾಂಸ್ಕೃತಿಕ ಏಕೀಕರಣವನ್ನು ಅಭಿವೃದ್ಧಿ ಸುವುದು, ಕರ್ಣಾಟಕದಲ್ಲಿಯೂ ಭಾರತದ ಪ್ರಮುಖ ನಗರಗಳಲ್ಲಿಯೂ ಪ್ರತಿ ವರುಷ ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿ. ಕನ್ನಡ ಜನರ ಸರ್ವಾಂಗೀಣ ಪ್ರಗತಿಗೆ ಪ್ರಯತ್ನ ಗಳನ್ನು ನಡೆಸುವುದು, ಕನ್ನಡ ಭಾಷೆ, ಸಾಹಿತ್ಯ ಇತಿಹಾಸಗಳಲ್ಲಿ ಸಂಶೋಧನೆ ನಡೆಸುವುದು,ಕನ್ನಡ ಜನರಲ್ಲಿ ನಾಡು ನುಡಿಗಳ ಅಭಿಮಾನವನ್ನು ಕಳೆಗೊಳಿಸುವುದು- ಇವು ಪರಿಷತ್ತಿನ ಹೆಗ್ಗುರಿಗಳಾಗಿವೆ. ಇದಕ್ಕಾಗಿ ಪರಿಷತ್ತು ೪೭ ವರ್ಷಗಳಿಂದ ಸತತವಾಗಿ ಪ್ರಯತ್ನಿಸುತ್ತಿದೆ. ಮೈಸೂರಿನ ಶ್ರೀಮನ್ಮಹಾರಾಜರವರು, ಮೈಸೂರು ಸರ್ಕಾರದವರು, ಕೇಂದ್ರ ಸರ್ಕಾರದವರು, ನಾಡು ನುಡಿಗಳ ಅಭಿಮಾನಿಗಳಾದ ಮಹಾಜನರು, ಕನ್ನಡ ಕವಿ, ಪಂಡಿತ,ಕಲಾವಿದ, ಲೇಖಕ ಮೊದಲಾದ ಮಹಾಶಯರು, ಪರಿಷತ್ತಿಗೆ ನಾನಾ ರೀತಿಯಿಂದ ನೆರವಾಗಿ ಅದರ ಅಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ. ಪರಿಷತ್ತಿನ ಈ ಅಮೋಘವಾದ ಸೇವೆಯನ್ನು ನಮ್ಮ ನಾಡಿನ ಹಿರಿಯರು, ಪ್ರಭುತ್ವದ ಮಂತ್ರಿಗಳು, ಉನ್ನತ ಮಠಾಧಿಕಾರಿಗಳು, ಪೂಜ್ಯ ನಿವೃತ ರಾಷ್ಟ್ರಾಧ್ಯಕ್ಷ ಡಾ॥ ರಾಜೇಂದ್ರ ಪ್ರಸಾದರು, ಭಾರತದ ಹಲವಾರು ಮಂದಿ ಪ್ರಮುಖ ವಿದ್ವಾಂಸರು ಮೆಚ್ಚಿ ಗೌರವಿಸಿದ್ದಾರೆ ಎಂಬುದನ್ನು ಇಂದು ತಮ್ಮ ಗಮನಕ್ಕೆ ತರಲು ಸಂತೋಷವಾಗಿದೆ.

ಜ್ಞಾನ ಯೋಗಿಗಳೆ,

ಶಿವಶರಣರ ಧರ್ಮಗಳನ್ನು ಅಚ್ಚಳಿಯದಂತೆ ನಡೆಸುತ್ತಿರುವ ಜ್ಞಾನಾನಂದ ಮೂರ್ತಿಗಳೂ, ಕವಿಕುಲೋತ್ತಂಸರೂ, ಸಂಗೀತ ಶಾಸ್ತ್ರನಿಶಾರದರೂ ಆದ ತಾವು ಇಂದು ನಮ್ಮ ಕರೆಗೆ ಓಗೊಟ್ಟು ಕನ್ನಡ ಸಾಹಿತ್ಯ ಸರಸ್ವತಿಯ ಮಂದಿರವೆನಿಸಿರುವ, ಕರ್ಣಾಟಕ ಜನತಾ ವಿಶ್ವವಿದ್ಯಾನಿಲಯವೆನಿಸಿಕೊಂಡಿರುವ, ಕನ್ನಡ ಸಾಹಿತ್ಯ ಪರಿಷನ್ಮಂದಿರಕ್ಕೆ ಆಗಮಿಸಿ ನಮ್ಮ ಸನ್ಮಾನಪತ್ರಿಕೆಯನ್ನು ಸ್ವೀಕರಿದುದಕ್ಕಾಗಿ ಪರಿಷತ್ತಿನವರಿಗೆಲ್ಲ ಅಮಿತಾನಂದವಾಗಿದೆ.

ಕರುಣಾಳುವಾದ ಪರಮೇಶ್ವರನು ತಮಗೂ ತಮ್ಮ ಪುಣ್ಯಾಶ್ರಮದ ವಿದ್ಯಾರ್ಥಿ ವೃಂದಕ್ಕೂ ಇತೋಪ್ಯತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲೆಂದು ನಾವು ಪ್ರಾರ್ಥಿಸುತ್ತೇವೆ. ಕನ್ನಡ ಸಾಹಿತ್ಯ ಪರಿಷತ್ತನ್ನು ನಿಮ್ಮ ಪುಣ್ಯಾಶ್ರಮ ದಂತೆ ಆತ್ಮೀಯ ಭಾವನೆಯಿಂದ ನೋಡುವಿರೆಂದು ನಾವು ನಂಬಿರುತ್ತೇವೆ.

॥ ಸತ್ಯಂ-ಶಿವಂ-ಸುಂದರಂ ॥

ಇಂತು ತಮ್ಮ ಹಿತೈಷಿಗಳಾದ
ಕನ್ನಡ ಸಾಹಿತ್ಯ ಪರಿಷತ್ತಿನ
ಅಧ್ಯಕ್ಷರು ಮತ್ತು ಸದಸ್ಯರು

ದಿನಾಂಕ ೨೨-೯-೧೯೬೨
ಬೆಂಗಳೂರು-೧೮.

|| ಶ್ರೀಗುರು ಬಸವಲಿಂಗಾಯ ನಮಃ ||

ಬೆಂಗಳೂರು ಅನುಭವ ಮಂಟಪದ ಅಧ್ಯಕ್ಷರೂ ಮತ್ತು ಸದಸ್ಯರು

## ವೇ. ಪಂಡಿತ ಪುಟ್ಟರಾಜ ಗವಾಯಿಗಳು ಗದಗ ಇವರಿಗೆ

ಮೈಸೂರು ರಾಜ್ಯದ ಅರ್ಥಸಚಿವರಾದ

ಮಾನ್ಯ ಶ್ರೀ ಬಿ. ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ

ಪ್ರೀತಿ ವಿಶ್ವಾಸಗಳಿಂದ ಸಮರ್ಪಿಸಿದ

# ಸನ್ಮಾನ ಪತ್ರಿಕೆ



ಸಂಗೀತ ಸಾಹಿತ್ಯ ವಿಶಾರದರೆ,

ಗದಗ, ವೀರೇಶ್ವರ ಪುಣ್ಯಾಶ್ರಮ ಸಂಗೀತ ವಿದ್ಯಾಲಯದ ಅಧ್ಯಕ್ಷರೂ, ಕನ್ನಡ, ಸಂಸ್ಕೃತ, ಹಿಂದಿ, ಭಾಷೆಗಳಲ್ಲಿ ಕವಿವರ್ಯರೂ, ಕರ್ನಾಟಕ ಮತ್ತು ಹಿಂದುಸ್ಥಾನಿ ಸಂಗೀತಗಳ ಆಚಾರ್ಯ ಪುರುಷರೂ, ಕೈ|| ಗಾನಯೋಗಿ ಪಂ. ಪಂಚಾಕ್ಷರ ಗವಾಯಿಗಳ ಪಟ್ಟಶಿಷ್ಯರೂ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಜ್ಞಾನ ಪಾರಾಯಣರೂ, ಇಷ್ಟಲಿಂಗ, ಪ್ರಾಣಲಿಂಗ, ಭಾವ ಲಿಂಗಗಳ ಪೂಜಾನುಸಂಧಾನವುಳ್ಳವರೂ, ಮೈಸೂರ ಶ್ರೀಮನ್ ಮಹಾರಾಜರವರಿಂದಲೂ, ಕನ್ನಡ ಸಾಹಿತ್ಯ ಪರಿಷತ್ತಿನಿಂದಲೂ, ಸಂಗೀತ ನಾಟಕ ಅಕಾಡಮಿಯವರಿಂದಲೂ ಸನ್ಮಾನಿತರೂ ಆಗಿರುವ ತಮ್ಮನ್ನು, ಆಹ್ವಾನಿಸಿ ಇಂದು ಬೆಂಗಳೂರು ಅನುಭವ ಮಂಟಪದ ಪರವಾಗಿ ಸನ್ಮಾನ ಪತ್ರಿಕೆಯನ್ನು ಕೊಟ್ಟು ಗೌರವಿಸುವ ಅವಕಾಶ ಪ್ರಾಪ್ತವಾದುದಕ್ಕಾಗಿ ನಮಗೆ ಸಂತೋಷವಾಗಿದೆ.

ಮಿಗಿಲಾದ ವಿದ್ಯಾವಿನಯ ಸಂಪನ್ನರೂ, ವೀರಶೈವ ಸಮಾಜದ ಉಜ್ವಲಾಭಿಮಾನಿಗಳೂ ಆದ ತಾವು ಧಾರವಾಡ ಜಿಲ್ಲಾ ದೇವಗಿರಿ ಗ್ರಾಮದ ಶ್ರೀ ರೇವಯ್ಯ-

ಸಿದ್ದಮ್ಮ ಎಂಬ ಪುಣ್ಯ ದಂಪತಿಗಳ ಸುಪುತ್ರರಾಗಿ ತಾ. ೩—೩—೯೯ಗಳ ರಲ್ಲಿ ಜನಿಸಿದಿರಿ. ಅನಂತರ ತಮ್ಮ ಸೋದರ ಮಾವಂದಿರಾದ ಶ್ರೀ ಚಂದ್ರಶೇಖರಯ್ಯ ಹಿರೇಮಠ ವೆಂಕಟಾಪುರ ಅವರಲ್ಲಿ ನೀವು ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿ ಕೊಂಡು, ವಿಜಾಪುರ ಜಿಲ್ಲಾ ಶಿವಯೋಗ ಮಂದಿರದಲ್ಲಿ ಸಂಗೀತ ಶಾಲೆಯನ್ನು ನಡೆ ಸುತ್ತಿದ್ದ ಕೈ. ಉಭಯಗಾಯನಾಚಾರ್ಯ ಪಂಚಾಕ್ಷರ ಗವಾಯಿಗಳ ಕೃಪಾದೃಷ್ಟಿಗೆ ಪಾತ್ರರಾದಿರಿ. ಜನ್ಮಾಂಧರಾದ ತಾವು ಕಡೆಯವರೆಗೂ ಆ ಮಹನೀಯರಲ್ಲಿಯೇ ವಿದ್ಯಾಭ್ಯಾಸ ಮಾಡಿ ಗುರುವಿನಂತೆಯೇ ಕೀರ್ತಿಯನ್ನೂ, ಪಾಂಡಿತ್ಯವನ್ನೂ ಗಳಿಸಿದಿರಿ. ತಾವು ಗುರುವಿಗಿಂತಲೂ ಮುಂದೆ ಹೋಗಿ ಸಂಗೀತ-ಸಾಹಿತ್ಯ ವಿಶಾರದರಾದಿರಿ. "ಶಿಷ್ಯಾದಿಚ್ಛೇತ್ ಪರಾಜಯಂ" ಎಂಬ ವಾಕ್ಯವನ್ನು ಸಾರ್ಥಕಗೊಳಿಸಿದಿರಿ.

ನಿಮ್ಮ ಗುರುಗಳು ಕೈಲಾಸವಾಸಿಗಳಾದ ಮೇಲೆ ೯೪೪ ರಿಂದ ತಾವೇ ಸಂಪೂರ್ಣವಾಗಿ ತಮ್ಮ ಆಶ್ರಮದ ಮತ್ತು ಸಂಗೀತ ಶಾಲೆಯ ಯಜಮಾನ್ಯವನ್ನು ವಹಿಸಿಕೊಂಡು ಅತ್ಯಂತ ದಕ್ಷತೆಯಿಂದ ನಡೆಸಿಕೊಂಡು ಬರುತ್ತಿದ್ದೀರಿ. ಮಹಾನು ಭಾವರಾದ ನೀವು, ಕನ್ನಡ, ಸಂಸ್ಕೃತ ಮತ್ತು ಹಿಂದಿ ಭಾಷೆಗಳಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಗಳಿಸಿದ್ದೀರಿ. ಕರ್ನಾಟಕ ಮತ್ತು ಹಿಂದೂಸ್ಥಾನಿ ಸಂಗೀತಗಳಲ್ಲಿ ಆಚಾರ್ಯ ಪುರುಷರೆನಿಸಿದ್ದೀರಿ. ಕನ್ನಡದಲ್ಲಿ "ಅಕ್ಕಮಹಾದೇವಿ ಪುರಾಣ" "ಹಾವೇರಿ ಸ್ವಾಮಿಗಳ ಪುರಾಣ" ಹೇಮರಡ್ಡಿ ಮಲ್ಲಮ್ಮ ನಾಟಕ ಮೊದಲಾದವುಗಳನ್ನು ಬರೆ ದಿರುತ್ತೀರಿ. ಭೀಮ ಕವಿಯ ಕನ್ನಡ ಬಸವ ಪುರಾಣವನ್ನು ಹಿಂದಿಗೆ ಭಾಷಾಂತರ ಮಾಡಿ ನಿವೃತ್ತ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದರಿಗೆ ಒಪ್ಪಿಸಿ ಪೂಜ್ಯರಾದ ಅವರ ಮೆಚ್ಚುಗೆಯನ್ನು ಪಡೆದಿರುತ್ತೀರಿ. ಸಂಸ್ಕೃತದಲ್ಲಿ ಗುರುಗೀತೆಯನ್ನು ರಚಿಸಿ ದ್ದೀರಿ. ಹಲವಾರು ಭಕ್ತಿಯ ನಾಟಕಗಳನ್ನು ಕನ್ನಡದಲ್ಲಿ ರಚಿಸಿ, ಆ ನಾಟಕಗಳನ್ನು ನಿಮ್ಮದೇ ಆದ ರಂಗಭೂಮಿಯಲ್ಲಿ ಅಭಿನಯಿಸಿ ಕಲಾಸೇವೆಯನ್ನು ಮಾಡುತ್ತಿದ್ದೀರಿ. ಅರಮನೆ ಗುರುಮನೆಗಳಲ್ಲಿ ಮತ್ತು ವಿದ್ವತ್ ಸಭೆಗಳಲ್ಲಿ ನಡೆಸಿದ ತಮ್ಮ ಸಂಗೀತ ಕಚ್ಚೇರಿಗಳು ದೇಶಾಭಿಮಾನಿಗಳೆಲ್ಲರ ಮೆಚ್ಚುಗೆಯನ್ನೂ ಪಡೆದಿವೆ. ಈಗ ತಮ್ಮ ಶಿಷ್ಯರನೇಕರು ನಾಡಿನಲ್ಲಿ ಪ್ರಖ್ಯಾತ ವಿದ್ವಾಂಸರೆನಿಸಿದ್ದಾರೆ. ತಾವು ಹುಟ್ಟು ಕುರುಡ ರಾಗಿದ್ದು, ಕೇವಲ ತಮ್ಮ ಕ್ರಿಯಾಶಕ್ತಿಯ ಬಲದಿಂದಲೇ ಮಹತ್ ಕಾರ್ಯಗಳನ್ನು ಲೀಲಾಜಾಲವಾಗಿ ನಡೆಸುತ್ತಿದ್ದೀರಿ. ಸುಮಾರು ೧೫೦ ಜನ ವಿದ್ಯಾರ್ಥಿಗಳಿಗೆ ತಾವು ಉಚಿತವಾಗಿ ಅಶನ ವಸ್ತ್ರಗಳನ್ನು ಕೊಟ್ಟು ಸಂಗೀತ ಪಾಠವನ್ನು ಹೇಳುತ್ತಿದ್ದೀರಿ. ಪಿಟೀಲು. ಶಹನಾಯಿ, ತಬಲಾ, ಹಾರ್ಮೋನಿಯಂ ವಾದನಗಳಲ್ಲಿ ಶಿಕ್ಷಣ ಕೊಡುತ್ತಿ ದ್ದೀರಿ. ಇದು ನಿಮ್ಮ ಅಸಾಧಾರಣ ಮಾನವತೆಯ ಲಕ್ಷಣಕ್ಕೂ ಶಿವಶರಣರ ದಾಸೋಹ ಮಾರ್ಗಕ್ಕೂ ಉತ್ತಮ ನಿದರ್ಶನವಾಗಿದೆ. ಇಂಗ್ಲಂಡಿನ ಮಹಾಕವಿಯಾದ ಮಿಲ್ಟನ್ ಅಂಧನಾಗಿದ್ದನೆಂದೂ, ತನ್ನ ಅಂತಶ್ಚಕ್ಷುವಿನ ಬಲದಿಂದಲೇ "ಪ್ಯಾರಡೈಸ್ ಲಾಸ್ಟ"

ಎಂಬ ಮಹಾ ಕಾವ್ಯವನ್ನು ಬರೆದು ಪ್ರಖ್ಯಾತನಾದನೆಂದೂ ಕೇಳಿದ್ದೇವೆ. ಈಗ ನಮ್ಮ ಪ್ರತ್ಯಕ್ಷದಲ್ಲಿ ಹುಟ್ಟು ಕುರುಡರಾದ ತಾವು ತಮ್ಮ ಜೀವನದಲ್ಲಿ ಸಾಧಿಸಿರುವ ಅದ್ವಿತೀಯ ಕಾರ್ಯಗಳನ್ನು ಗಮನಿಸಿದರೆ, ಮಿಲ್ಟನ್ ಮಹಾಕವಿಗಿಂತಲೂ ತಾವು ಮುಂದೆ ಹೋಗಿರುವಿರಿ ಎಂದು ನಾವು ತಿಳಿಯಬೇಕಾಗಿದೆ.

ಕರ್ನಾಟಕದ ರಾಜಧಾನಿಯೂ ನೂತನ ಕಲ್ಯಾಣ ಪಟ್ಟಣವೂ ಎನಿಸಿರುವ ಬೆಂಗಳೂರಿನಲ್ಲಿ ವೀರಶೈವ ಸಿದ್ಧಾಂತವನ್ನೂ, ಶಿವಶರಣರ ಧರ್ಮವನ್ನು ಪ್ರಸಾರ ಮಾಡುವ ಸಲುವಾಗಿ ಅನುಭವ ಮಂಟಪವನ್ನು ಸ್ಥಾಪಿಸಲಾಗಿದೆ. ಚಿತ್ರದುರ್ಗ ಚಿನ್ಮೂಲಾದ್ರಿ ಶೂನ್ಯ ಸಿಂಹಾಸನಾಧೀಶ್ವರರೂ ಶಿವಯೋಗ ಸಂಪನ್ನರೂ ಆದ ಶ್ರೀಮನ್ ನಿರಂಜನ ಜಗದ್ಗುರು ಜಯವಿಭವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಈ ಅನುಭವ ಮಂಟಪದ ಮಹಾಪೋಷಕರಾಗಿರಲು ಕೃಪೆಮಾಡಿ ಒಪ್ಪಿರುತ್ತಾರೆ. ವಿದ್ವಾಂಸರ ಉಪನ್ಯಾಸ ಏರ್ಪಡಿಸುವುದು, ಪುರಾಣ ಪ್ರವಚನ ನಡೆಸುವುದು, ಶ್ರೀ ಬಸವ ಜಯಂತಿ, ಆಚಾರ್ಯ ಜಯಂತಿ, ಅಕ್ಕನ ಹುಣ್ಣಿಮೆ ಮೊದಲಾದವುಗಳನ್ನು ಆಚರಿಸುವುದು ಈ ಅನುಭವ ಮಂಟಪದ ಉದ್ದೇಶವಾಗಿದೆ.

ತಮ್ಮಂತಹ ಶರಣ ಜೀವಿಗಳು ಇಂದು ನಮ್ಮ ಸನ್ಮಾನ್ಯ ಅತಿಥಿಗಳಾಗಿ ಬಂದುದೂ ಸಾಹಿತ್ಯ ಸಂಸ್ಕೃತಿಗಳ ಅಭಿಮಾನಿಗಳಾದ ಮಾನ್ಯ ಶ್ರೀ ಬಿ. ಡಿ. ಜತ್ತಿಯವರು ಈ ಸಮಾರಂಭದ ಅಧ್ಯಕ್ಷರಾಗಿ ಆಗಮಿಸಿರುವುದೂ ನಮ್ಮ ಸುದೈವವೆಂದು ಬಗೆಯುತ್ತೇವೆ. ಮಹಾನುಭಾವರಾದ ಶಿವಶರಣರೂ, ತಪೋಧನರಾದ ಆಚಾರ್ಯವರ್ಯರೂ, ತಮಗೂ ತಮ್ಮ ಶಿಷ್ಯ ಮಂಡಲಿಗೂ ಆಯುರಾರೋಗ್ಯ ಭಾಗ್ಯಗಳನ್ನು ಇನ್ನೂ ಹೆಚ್ಚಾಗಿ ಕೊಟ್ಟು ಕಾಪಾಡಿ ತಮ್ಮಿಂದ ಇನ್ನೂ ಹೆಚ್ಚಿನ ಸೇವೆಯನ್ನು ಸಮಾಜಕ್ಕೂ ದೇಶಕ್ಕೂ ಸಲ್ಲುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

|| ಸತ್ಯಂ ಶಿವಂ ಸುಂದರಂ ||

ತಾ. ೨೩–೯–೧೯೬೨
ಬೆಂಗಳೂರು–೯

ಇಂತು ತಮ್ಮ ಹಿತೈಷಿಗಳಾದ
ಅನುಭವ ಮಂಟಪದ ಅಧ್ಯಕ್ಷರು ಮತ್ತು ಸದಸ್ಯರು

॥ ಶ್ರೀ ॥

ಶ್ರೀ ಕುಮಾರೇಶ್ವರ ಕೃಪಾಪೋಷಿತ ಪಂಡಿತ ಪಂಚಾಕ್ಷರ ಗವಾಯಿಗಳವರ
ನಾಟ್ಯ ಸಂಘದ ಒಡೆಯರೂ, ತ್ರಿಭಾಷಾವಿಶಾರದ, ಗಾನರತ್ನ ಇತ್ಯಾದಿ
ಬಿರುದಾಂಕಿತರಾದ

## ಶ್ರೀ ವೇ. ಪುಟ್ಟಯ್ಯಸ್ವಾಮಿ ಗವಾಯಿಗಳವರಿಗೆ

ಶ್ರೀಮದ್ ಮಹಾರಾಜ ನಿ. ಜಗದ್ಗುರು ಶ್ರೀಜಯವಿಭವ ಮುರುಘರಾಜೇಂದ್ರ
ಮಹಾಸ್ವಾಮಿಗಳವರ ದಿವ್ಯಸನ್ನಿಧಿಯ ನೇತೃತ್ವದಲ್ಲಿ

ದಾವಣಗೆರೆ ವೀರಶೈವ ಸಮಾಜದವರು ಅರ್ಪಿಸಿದ

# ಅಭಿನಂದನ ಪತ್ರ

ಪೂಜ್ಯ ಕಲಾವಿದರೇ,

ಕನ್ನಡ ನಾಡಿನ ಇತಿಹಾಸದಲ್ಲಿಯೇ ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹ ಕೀರ್ತಿಪತಾಕೆಯನ್ನು ತಮ್ಮ ನಾಟ್ಯಸಂಘದ ಮೂಲಕ ಹಾರಿಸಿ ಕಲಾಪ್ರೇಮಿಗಳ, ನಾಡಿನ ಜನರ ಪ್ರೇಮಕ್ಕೆ ಪಾತ್ರರಾಗಿದ್ದೀರಿ. ಭಕ್ತಿರಸ ಪ್ರಧಾನವಾದ ಚಾರಿತ್ರಿಕ ನಾಟಕಗಳನ್ನು ಪ್ರಸಾರಮಾಡಿ ಜನತೆಯನ್ನು ಎಚ್ಚರಗೊಳಿಸುತ್ತಿದ್ದೀರಿ. ನಿಮ್ಮಲ್ಲಿರುವ ನಿಷ್ಕಾಮ ಕರ್ಮವೇ ನಿಮ್ಮ ನಾಟ್ಯ ಸಂಘದ ಅಭಿವೃದ್ಧಿಗೆ ನಾಂದಿ ಎನ್ನಬಹುದು. ನಿಮ್ಮನ್ನನುಸರಿಸುತ್ತಿರುವ ತಮ್ಮ ಸಂಘದ ಅನುಯಾಯಿಗಳು ನಿಜಕ್ಕೂ ಸ್ತುತ್ಯಾರ್ಹರು.

ಗಾನರತ್ನರೇ,

ತಮ್ಮಲ್ಲಿ ಹುದುಗಿರುವ ಅಪ್ರತಿಮ ಕಲಾಪ್ರತಿಭೆಯನ್ನು ಕಂಡು ಯಾರೂ ಆಶ್ಚರ್ಯ ಚಕಿತರಾಗದೇ ಇರಲಾರರು. ತಾವು ಹಾರ್ಮೋನಿಯಂ ನುಡಿಸಲು ಉದ್ಯುಕ್ತರಾದರೆ ತಮ್ಮಲ್ಲಿರುವ ಕೈಚಮತ್ಕಾರ ತಮ್ಮ ಮೇಲೆ ನಮ್ಮ ಹೆಚ್ಚಿನ ವಿಶ್ವಾಸ ಪ್ರದರ್ಶನಕ್ಕೆ ಕಾರಣೀಭೂತವಾಗಿದೆ. ತಮ್ಮ ವಿದ್ವತ್ ಸೇವಾನಿಷ್ಠೆ ಮತ್ತು ಪೂಜಾಫಲಗಳ ದ್ಯೋತಕ ಎಂಬುವಂತೆ ರಾಷ್ಟ್ರಮನ್ನಣೆಯನ್ನು ಹೊಂದಿ, ತ್ರಿಭಾಷಾ

ವಿಶಾರದ, ಗಾನರತ್ನ ಎಂಬ ಬಿರುದುಗಳನ್ನು ಪಡೆದಿರಿ. ಹಿಂದಿ, ಸಂಸ್ಕೃತ, ಕನ್ನಡ ದಲ್ಲಿ ಪಾಂಡಿತ್ಯವನ್ನು ಗಳಿಸಿ ಹಿಂದಿ ಭಾಷೆಯಲ್ಲಿ ತಮ್ಮದೇ ಆದ ಶ್ರೀ ಬಸವಣ್ಣನವರ ಚರಿತ್ರೆಯನ್ನು ಬರೆದು ಹಿಂದೀ ಪ್ರೇಮಿಗಳ ವಿಶ್ವಾಸಕ್ಕೆ ಪಾತ್ರರಾಗಿದ್ದೀರಿ.

ನಿಷ್ಠಾವಂತರೇ,

ತಮ್ಮ ಸೇವಾ ಮನೋಭಿಲಾಷೆ ಅತಿ ದೊಡ್ಡದು. ತಾವು ತಮ್ಮ ನಾಟ್ಯ ಸಂಘವನ್ನು ಸ್ಥಾಪಿಸಿ, ಗದುಗಿನಲ್ಲಿ ವೀರೇಶ್ವರ ಪುಣ್ಯಾಶ್ರಮ ಎಂಬ ಪ್ರಸಾದ ನಿಲಯದ ಅಂಧ ವಿದ್ಯಾರ್ಥಿಗಳ ಜೀವನದ ಸದ್ವಿನಿಯೋಗಕ್ಕಾಗಿ ಸಂಘದಿಂದ ಬಂದ ಉತ್ಪತ್ತಿ ಯನ್ನು ಕೊಟ್ಟು ಪ್ರಸಾದ ನಿಲಯವನ್ನು ನಡೆಸುತ್ತಿದ್ದೀರಿ. ಇದನ್ನರಿತ ಮಹಾ ಜನತೆ ಸಂಘಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಮುಕ್ತ ಹಸ್ತದಿಂದ ನಿಮಗೆ ನೆರವೀಯು ತ್ತಿರುವುದು ಸರ್ವವಿದಿತವಿದೆ. ನಿಮ್ಮಲ್ಲಿರುವ ದಯೆ, ನೀವು ಅನುಸರಿಸುತ್ತಿರುವ ಧರ್ಮ ಮಾರ್ಗ ನಿಮ್ಮನ್ನು ಕೀರ್ತಿ ಪಾತ್ರರನ್ನಾಗಿ ಮಾಡಿವೆ.

ನಿಮ್ಮ ಕಲಾ ಪ್ರೌಢಿಮೆಗೆ ರಾಜ್ಯ ಸಂಗೀತ ನಾಟಕ ಅಕಾಡೆಮಿಯವರು ರಾಜ್ಯದ ಉನ್ನತ ಕಲಾ ಶ್ರೇಷ್ಠರಲ್ಲಿ ತಮ್ಮನ್ನು ಸೇರಿಸಿ ಗೌರವಿಸಿದುದಕ್ಕಾಗಿ ಸಮಾಜವು ನಿಮ್ಮನ್ನು ಅಭಿಮಾನದಿಂದ ಗೌರವಿಸುತ್ತದೆ.

ಶ್ರೇಷ್ಠ ಕಲಾವಿದರೇ,

ತಾವು ತಮ್ಮ ಪೂಜ್ಯ ಗುರುಗಳ ಮಾರ್ಗಾನುಸರಣೆಯಿಂದ ಕರ್ಣಾಟಕ ದೇಶಕ್ಕೂ, ವೀರಶೈವ ಸಮಾಜಕ್ಕೂ ಸಲ್ಲಿಸಿರುವ ಅಪ್ರತಿಮ ಸೇವೆಯು ಅಂಧರಲ್ಲಿ ಹುದುಗಿರುವ ಕಲಾಶಕ್ತಿಗಳನ್ನು ಪ್ರಚೋದಿಸಿರುವುದು ಹೆಮ್ಮೆಯ ವಿಷಯವಾಗಿದೆ. ಈ ತಮ್ಮ ಸೇವಾ ಕಾರ್ಯವು ಇತೋಪ್ಯತಿಶಯವಾಗಿ ಜರುಗಿ ಅದರ ಫಲ ಪ್ರಯೋಜನ ಗಳು ಜನತೆಗೆ ಲಭಿಸುವಂತೆ ಶ್ರೀ ಜಗದ್ಗುರು ಮುರುಘೇಶನು ತಮಗೆ ಆಯುರಾ ರೋಗ್ಯ ಐಶ್ವರ್ಯಾದಿ ಸಕಲ ಶುಭಗಳನ್ನು ದಯಪಾಲಿಸಲೆಂದು ನಾವು ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ದಾವಣಗೆರೆ

ತಾ. ೨೬–೯–೬೨

ಇತಿ ತಮ್ಮ

ದಾವಣಗೆರೆ ವೀರಶೈವ ಸಮಾಜದವರು.

ಶ್ರೀ ಕುಮಾರೇಶ್ವರ ಕೃಪಾಪೋಷಿತ
ಲಿಂ. ಪಂ. ಪಂಚಾಕ್ಷರ ಗವಾಯಿಗಳವರ ನಾಟ್ಯ ಸಂಘದ ಒಡೆಯರು
ಗದಗ ವೀರೇಶ್ವರ ಪುಣ್ಯಾಶ್ರಮ, ಸಂಗೀತ ಸಾಹಿತ್ಯ ಶಾಲೆಯ

ಅಧ್ಯಕ್ಷರು ಉಭಯಗಾನ ವಿಶಾರದರೂ ಆದ

## ವೇ. ಪುಟ್ಟರಾಜ ಗವಾಯಿಗಳವರಿಗೆ

ದಾವಣಗೆರೆ ನಗರದ ನ್ಯಾಯಾಧೀಶರಾದ

**ಶ್ರೀ. ಎಂ. ಕೆ. ಅಂಗಡಿ,** ಬಿ. ಎ. ಎಲ್ ಎಲ್. ಬಿ. ಇವರ

——— ಸಮ್ಮುಖದಲ್ಲಿ ———

ದಾವಣಗೆರೆ ಕಲಾಭಿಮಾನಿಗಳಾದ ನಾಗರಿಕರು ಭಕ್ತಿಪೂರ್ವಕ ಅರ್ಪಿಸಿದ

## ಸನ್ಮಾನ ಪತ್ರಿಕೆ

ತ್ರಿಭಾಷಾವಿಶಾರದರೇ,

ಕನ್ನಡ ನಾಡಿನ ಕಣ್ಣಂತಿರುವ ಶಾರದೆಯ ದಿವ್ಯ ಮಂದಿರವೆನಿಸಿದ ಶ್ರೀ ವೀರ ನಾರಾಯಣ ಮತ್ತು ತೋಂಟದಾರ್ಯ ಯೋಗಿಗಳು ವಾಸಿಸಿದ ಗದಗ ನಗರದಲ್ಲಿ ಶ್ರೀ ವೀರೇಶ್ವರ ಪುಣ್ಯಾಶ್ರಮವನ್ನು ಸ್ಥಾಪಿಸಿ ಜನ್ಮತಃ ಹುಟ್ಟು ಕುರುಡರಾಗಿ ಜನಿಸಿದ ತಾವು ಶ್ರೀ ಕುಮಾರೇಶ್ವರ ಕೃಪೆಯನ್ನು ಪಡೆದು ಲಿಂ|| ಪಂ|| ಪಂಚಾಕ್ಷರ ಗವಾಯಿಗಳವರ ಅನುಗ್ರಹಕ್ಕೆ ಪಾತ್ರರಾಗಿ ನೂರಾರು ಮಂದಿ ಅನಾಥರಿಗೆ, ಕುರುಡರಿಗೂ ತಮ್ಮ ಪುಣ್ಯಾಶ್ರಮದಲ್ಲಿ ಆಶ್ರಯವಿತ್ತು ಅಶನ, ವಸನಗಳನ್ನು ಕೊಟ್ಟು ಸಂಗೀತ, ಸಾಹಿತ್ಯ ಸಂಸ್ಕೃತ ವಿದ್ಯಾದಾನಗಳನ್ನು ಮಾಡಿ ದೇಶೋನ್ನತಿಗೆ ಆದರ್ಶ ಪ್ರಾಯರಾದಿರಿ. ಜ್ಞಾನವೃದ್ಧರಾದ, ತಪೋವೃದ್ಧರಾದ ತಾವು ಧಾರವಾಡ ಜಿಲ್ಲಾ ದೇವಗಿರಿ ಗ್ರಾಮದ ವೇ|| ರೇವಯ್ಯ, ಸಿದ್ದಮ್ಮ ಎಂಬ ಪುಣ್ಯ ದಂಪತಿಗಳ ಗರ್ಭದಲ್ಲಿ ಜನಿಸಿದಿರಿ. ನಿಮ್ಮ ಸೋದರ ಮಾವನವರಾದ ವೇ|| ಚಂದ್ರಶೇಖರ ಹಿರೇಮಠ ಅವರಿಂದ ಪ್ರಾಥಮಿಕ ಸಂಗೀತ ಶಿಕ್ಷಣ ಪಡೆದು, ಅನಂತರ ಶಿವಯೋಗ ಮಂದಿರದಲ್ಲಿ ಸಂಗೀತಶಾಲೆಯನ್ನು ನಡೆಸುತಿದ್ದ ಗಾನಯೋಗಿ ಲಿಂ|| ಪಂಡಿತ ಪಂಚಾಕ್ಷರ ಗವಾಯಿಗಳವರ ಕೃಪೆಗೆ ಪಾತ್ರರಾಗಿ ಕರ್ನಾಟಕ, ಮತ್ತು ಹಿಂದುಸ್ಥಾನಿ ಸಂಗೀತದ ಉಭಯಗಾನ ಆಚಾರ್ಯರಾದಿರಿ; ಗಾನಯೋಗಿಯಾದಿರಿ. ತಮ್ಮ ಗುರುಗಳು

ಸ್ಥಾಪಿಸಿದ ಪುಣ್ಯಾಶ್ರಮವನ್ನು ೧೯೪೪ರಲ್ಲಿ ತಾವು ವಹಿಸಿಕೊಂಡು ಅದನ್ನೇ ಅತಿಶಯವಾಗಿ ಅಭಿವೃದ್ಧಿಗೊಳಿಸಿದಿರಿ. ಅದರಂತೆ ನಾಟಕ ಸಂಘವನ್ನು ಸಹ.ನಡೆಸುತ್ತ ಗದುಗಿನಲ್ಲಿ ೩೭೫ ದಿವಸ 'ಸಂಪೂರ್ಣ ಹೇಮರೆಡ್ಡಿ ಮಲ್ಲಮ್ಮ' ಎಂಬ ನಾಟಕಗಳನ್ನಾಡಿ ವಿಜಯ ವಿಕ್ರಮವನ್ನು ಸಾಧಿಸಿ ಕರ್ನಾಟಕದ ಅನೇಕ ಭಾಗಗಳಲ್ಲಿ ಸಂಚರಿಸಿ, ನಮ್ಮ ದಾವಣಗೆರೆ ನಗರಕ್ಕೆ ಆಗಮಿಸಿ ೧೦೧ 'ಸಂಪೂರ್ಣ ಹೇಮರೆಡ್ಡಿ ಮಲ್ಲಮ್ಮ' ನಾಟಕವನ್ನಾಡಿ ವಿಜಯ ಉತ್ಸವಗೊಂಡು ಇತಿಹಾಸದಲ್ಲೇ ನೆನಪಿಡುವಂತೆ ಮಾಡಿದಿರಿ. ಇವೆಲ್ಲವೂ ತಮ್ಮ ಪೂಜಾ ಫಲದ ತಪಃಪ್ರಭಾವವೆಂದು ಹೇಳದೆ ಇರಲಾರೆವು. ನಮ್ಮ ನಗರದ ಕಲಾಭಿಮಾನಿಗಳ ಮನಸ್ಪೂರ್ತಿಮಾಡಿ ಐದು ತಿಂಗಳಲಾಗಾಯ್ತು ಅಕ್ಕಮಹಾದೇವಿ, ಸತ್ಯಸಂಕಲ್ಪ, ಶ್ರೀಕೃಷ್ಣಗಾರುಡಿ ನಾಟಕಗಳನ್ನಾಡಿ ಬಹುಜನಗಳ ಮೆಚ್ಚಿಗೆಗೆ ಪಾತ್ರರಾದಿರಿ. ಇವೆಲ್ಲಕ್ಕೂ ಮೂಲ ಭೂತರಾದ ವೇ॥ ಎ. ಬಿ. ಹಿರೇಮಠ ಮತ್ತು ಡೈರೆಕ್ಟರ್ ವೇ॥ ಶಿವಮೂರ್ತಿಸ್ವಾಮಿ, ಹಿರೇಮಠ ದೇವಗಿರಿ ಇವರ ಸಹಾಯವು ಕಲಶಪ್ರಾಯವಾಗಿದೆ. ತಮ್ಮ ಕೃಪೆಗೆ ಪಾತ್ರರಾದ ಶಿಷ್ಯ ನಟ ವರ್ಗದವರೆಲ್ಲಾ ತಮ್ಮ ಸೇವೆಯನ್ನು ಅಮೋಘವಾಗಿ ಸಲ್ಲಿಸಿ ನಮ್ಮ ನಗರದ ನಾಗರಿಕರಿಂದ ಬಹುಮಾನ ಪಡೆದಿರುವುದೇ ಸಾಕ್ಷಿಯಾಗಿದೆ.

ಜ್ಞಾನಯೋಗಿಗಳೇ,

ತಾವು ಬಸವಪುರಾಣವನ್ನು ಹಿಂದಿಯಲ್ಲಿ ರಚಿಸಿ ನಿವೃತ್ತ ರಾಷ್ಟ್ರಾಧ್ಯಕ್ಷರಾದ ಡಾ॥ ರಾಜೇಂದ್ರಪ್ರಸಾದರಿಗೆ ಸಮರ್ಪಿಸಿ, ಅವರಿಂದ ಮೆಚ್ಚಿಗೆಯನ್ನು ಪಡೆದು 'ತ್ರಿಭಾಷಾ ವಿಶಾರದ ಗಾನರತ್ನ' ಎಂಬ ಬಿರುದಾಂಕಿತವನ್ನು ಹೊಂದಿರುವಿರಿ. ತಾವು ನಾಟಕ ಕರ್ತರು, ಹಾರ್ಮೋನಿಯಂ, ಪಿಟೀಲ್, ಸಿತಾರ, ತಬಲ, ಶಹನಾಯ್, ಸಂಗೀತ ವಾದ್ಯಗಳನ್ನು ನುಡಿಸುವುದರಲ್ಲಿ ವಿಖ್ಯಾತರಾಗಿರುವ ತಮಗೆ ಮೈಸೂರು ಸರ್ಕಾರದವರು ದಯಪಾಲಿಸಿದ ಅಕ್ಯಾಡಮಿಯಿಂದ ಸನ್ಮಾನಿತರಾದ ತಮ್ಮನ್ನು ಅತ್ಯಂತ ಆನಂದದಿಂದ ಅಭಿನಂದಿಸುತ್ತೇವೆ. ತಮ್ಮ ಆಚಾರ, ವಿಚಾರಗಳನ್ನು ಅಚ್ಚಳಿಯದಂತೆ ನಡೆಸುತ್ತಿರುವ ಜ್ಞಾನಾಂಧ ಮೂರ್ತಿಗಳು, ಕವಿಕುಲೋತ್ತಂಸರು ಸಂಗೀತಶಾಸ್ತ್ರವಿಶಾರದರು ಆದ ತಮಗೆ ನಾವುಗಳು ಅರ್ಪಿಸುವ ಸನ್ಮಾನ ಪತ್ರಿಕೆ ಯನ್ನು ಸ್ವೀಕರಿಸಿದುದಕ್ಕಾಗಿ ಆನಂದಭರಿತರಾಗಿದ್ದೇವೆ. ಕರುಣಾಳುವಾದ ಶ್ರೀಕುಮಾರೇಶ್ವರನು ತಮಗೂ, ತಮ್ಮ ನಾಟಕ ಸಂಸ್ಥೆಯ ಶಿಷ್ಯವರ್ಗಕ್ಕೂ ಇತೋ ಽತಿಶಯವಾದ ಆಯುರಾರೋಗ್ಯ ಭಾಗ್ಯಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ತಾ. ೨೦-೧೦-೧೯೬೨ }
ದಾವಣಗೆರೆ ಸಿಟಿ }

ತಮ್ಮ ಹಿತೈಷಿಗಳಾದ
ಕಲಾಭಿಮಾನಿಗಳಾದ ನಾಗರಿಕರು

೧೯

॥ ಶ್ರೀ ಶಿವಬಸವ ಪ್ರಸೀದ ॥

ಸಾಹಿತ್ಯ ಸಂಗೀತ ಕಲಾಪ್ರವೀಣ, ಉಭಯ ಗಾಯನ ವಾದನ ಕಂಠೀರವ,

ಉಭಯ ಗಾಯನಾಚಾರ್ಯ, ತ್ರಿಭಾಷಾ ಕವಿ ಇತ್ಯಾದಿ

ಬಿರುದಾಲಂಕೃತರಾದ

## ಪಂ. ಪುಟ್ಟರಾಜ ಗವಾಯಿಗಳವರ

ಸನ್ನಿಧಿಯಲ್ಲಿ

ಪೂಜ್ಯರೇ,

ಲಿಂಗವೋಹಿಗಳಾಗಿ ಲಿಂಗೈಕ್ಯರಾದ ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶಿವಬಸವ ಮಹಾಸ್ವಾಮಿಗಳವರ ೧೭ ನೆಯ ವರ್ಷದ ಪುಣ್ಯದಿನಾಚರಣೆಯ ಈ ಶುಭ ಪ್ರಸಂಗದಲ್ಲಿ ಹಾವೇರಿ ಹುಕ್ಕೇರಿಮಠದ ಭಕ್ತ ಮಂಡಳಿಯವರು ನಮ್ಮ ಮಠದ ಪರವಾಗಿ ಸಾಹಿತ್ಯ ಸಂಗೀತ ಕಲಾಪ್ರೇಮಿಗಳ ಪರವಾಗಿ ಹಾಗೂ ಹಾವೇರಿಯ ನಾಗರಿಕರ ಪರವಾಗಿ ಈ ಸನ್ಮಾನ ಪತ್ರದಿಂದ ತಮ್ಮನ್ನು ಸತ್ಕರಿಸಲು ನಮಗೆ ಅತಿ ಶಯವಾದ ಆನಂದವಾಗುತ್ತದೆ. ಬೆಂಗಳೂರು, ಮೈಸೂರಗಳ ರಸಿಕ ಕಲೋಪಾಸಕರು ತಮ್ಮ ಅಗಾಧ ಕಲಾಸಂಪತ್ತಿಯನ್ನು ಮನವಾರೆ ಮೆಚ್ಚಿ ತಮ್ಮನ್ನು ಈಗಾಗಲೇ ಗೌರವಿಸಿದ್ದುಂಟು. ಆದರೆ ನಮಗೆ ಪೂಜ್ಯರ ಪುಣ್ಯತಿಥಿ ಸಮಾರಂಭದ ಅಂಗವಾಗಿ ಈ ಸನ್ಮಾನ ಪತ್ರದಿಂದ ತಮ್ಮನ್ನು ಗೌರವಿಸಲು ಸದವಕಾಶ ದೊರೆತದ್ದು ನಮ್ಮ ಸೌಭಾಗ್ಯವೆಂದೇ ಭಾವಿಸುತ್ತೇವೆ.

ಉದ್ದಾಮ ಸಾಹಿತಿಗಳು ಸಿಗಬಹುದು, ಸಂಗೀತ ವಿಶಾರದರೂ ಸಿಗಬಹುದು, ವಾದ್ಯ-ವಾದನ ಪಟುಗಳೂ ಸಿಗಬಹುದು, ಆದರೆ ಸಾಹಿತ್ಯ-ಸಂಗೀತ ವಿವಿಧ ವಾದ್ಯ-ವಾದನ ಕಲೆಗಳ ತ್ರಿವೇಣಿ ಸಂಗಮದಂತಿರುವ ಕಲಾಭಿಜ್ಞರು ಸಿಕ್ಕುವದು ವಿರಳ. ಅದರಲ್ಲಿಯೂ ತಾವು ಆಜನ್ಮ ಬ್ರಹ್ಮಚಾರಿಗಳಾಗಿದ್ದು, ಸದಾಚಾರ ಸಂಪನ್ನರೂ ಲಿಂಗಪೂಜಾ ನಿಷ್ಠರೂ ಆಗಿರುವದು ಸ್ತೋತ್ರಾರ್ಹವಾಗಿದೆ. ನಮ್ಮ ತಪೋಧನರಾದ ಲಿಂಗೈಕ್ಯ ಶ್ರೀ ಶಿವಬಸವ ಮಹಾಸ್ವಾಮಿಗಳವರ ಹಾಗೂ ಹಾನಗಲ್ಲ ಶ್ರೀ ಕುಮಾರ ಶಿವಯೋಗಿ

ಗಳವರ ಮತ್ತು ಈ ಪೂಜ್ಯದ್ವಯದ ಕೃಪಾಛತ್ರದಲ್ಲಿ ಪರಿಪೋಷಿತರಾದ ಲಿಂಗೈಕ್ಯ ಪಂ. ಪಂಚಾಕ್ಷರ ಗವಾಯಿಗಳ ಪೂರ್ಣ ಕೃಪೆಯಿಂದಲೇ ತಾವು ಮುಕ್ಕಣ್ಣರಾಗಿ, ಅಲೌಕಿಕ-ಕಲಾ ಸಂಪತ್-ಸಮೃದ್ಧಿಯ ಸಾರ್ವಭೌಮರಾಗಿದ್ದೀರಿ ಎಂದರೆ ತಪ್ಪಾಗಲಾರದು. ಅಕ್ಕಮಹಾದೇವಿ ಪುರಾಣವನ್ನು ಕನ್ನಡ ಭಾಮಿನಿ ಷಟ್ಪದಿಯಲ್ಲಿ, ಗುರು-ಗೀತೆಯನ್ನು ಸಂಸ್ಕೃತದಲ್ಲಿ ಮತ್ತು ಹಿಂದಿಯಲ್ಲಿ ಬಸವ ಪುರಾಣವನ್ನೂ ಬರೆದು ತಮ್ಮ ಅಮೋಘವಾದ ತ್ರಿಭಾಷಾ ಪಾಂಡಿತ್ಯವನ್ನು ಪ್ರದರ್ಶಿಸಿದ್ದೀರಿ. ಜಗಜ್ಜ್ಯೋತಿ ಬಸವೇಶ್ವರ, ನೆಲ್ಲೂರ ನಂಬೆಕ್ಕ ಮೊದಲಾದ ಶಿವಶರಣ-ಶರಣೆಯರ ನಾಟಕಗಳನ್ನು ಬರೆದು ತಮ್ಮ ಆಶ್ರಯದಲ್ಲಿ ಸ್ಥಾಪಿತವಾಗಿರುವ ನಾಟಕ ಸಭೆಯಿಂದ ರಂಗಭೂಮಿಗೆ ತಂದಿದ್ದೀರಿ. ಹೇಮರಡ್ಡಿ ಮಲ್ಲಮ್ಮನ ನಾಟಕವನ್ನು ೩೦೫ ದಿವಸಗಳವರೆಗೆ ಸತತವಾಗಿ ಪ್ರತಿದಿನ ಅಭಿನಯಿಸಿ, ಪ್ರೇಕ್ಷಕರನ್ನು ತಣಿಸಿ, ರಂಗಭೂಮಿಯಲ್ಲಿ ಹೊಸ ವಿಕ್ರಮವನ್ನು ಸಾಧಿಸಿದ್ದೀರಿ.

ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾ ವಿದ್ಯಾಲಯ ಮತ್ತು ಶ್ರೀ ವೀರೇಶ್ವರ ಪುಣ್ಯಾಶ್ರಮಗಳಲ್ಲಿ ಪಾಠ ಪ್ರವಚನ ಕೀರ್ತನಗಳಿಂದ ತಮಗೆ ದೈವದತ್ತವಾಗಿ ಬಂದ ಸಾಹಿತ್ಯ ಸಂಗೀತ ಆಧ್ಯಾತ್ಮ ವಿದ್ಯೆಗಳ ಪ್ರಸಾರ ಕಾರ್ಯವನ್ನು ಮಾಡುತ್ತಿರುವಿರಿ. ಅದರಲ್ಲಿಯೂ ವಿಶೇಷತಃ ಕುರುಡು ಸಂತಾನಕ್ಕೆ ತಮ್ಮ ಅಗಾಧ ತಪಸ್ಸನ್ನು ಸಂತತವಾಗಿ ಧಾರೆ ಎರೆಯುತ್ತಿರುವದು ನಿಜವಾಗಿಯೂ ಶ್ಲಾಘನೀಯವಾಗಿದೆ. ಅನೇಕ ಭಾಷಾ ಮಧುರ ಬಾಂಧವ್ಯವನ್ನೂ ಹಾಗೂ ಪಾಂಡಿತ್ಯವನ್ನೂ ಏಕದೇಶೀಯವಾಗಿ ಸಾಧಿಸಿದ ತಮ್ಮನ್ನು ಎಷ್ಟು ಗೌರವಿಸಿದರೂ ಕಡಿಮೆಯೇ ಆಗಿದೆ. ಕವಿಯ ಕಣ್ಣು, ಭಕ್ತನ ಹೃದಯಗಳಿಂದ ಕೂಡಿದ ತಮ್ಮ ಪ್ರತಿಭೆಯು ಲೋಕದ ಕಣ್ಣು ಕುಕ್ಕಿಸುವಂಥಹದು ಇರುತ್ತದೆಂಬುದನ್ನು ಕಣ್ಣಿದ್ದವರು ಕಂಡಿದ್ದಾರೆ. ಕಿವಿ ಇದ್ದವರು ಕೇಳಿ ನಲಿದಿದ್ದಾರೆ.

ಪರಮಪೂಜ್ಯ ಶ್ರೀ ಶಿವಬಸವ ಮಹಾ ಶಿವಯೋಗಿಯು ತಮಗೆ ದೀರ್ಘಾಯುರಾರೋಗ್ಯ ಭಾಗ್ಯವನ್ನು ದಯಪಾಲಿಸಲೆಂದು ಅನನ್ಯಭಾವದಿಂದ ಪ್ರಾರ್ಥಿಸುತ್ತೇವೆ.

ಹಾವೇರಿ,
ದಿ. ೬—೧—೧೯೬೩

ತಮ್ಮ,
ಶ್ರೀ ಹುಕ್ಕೇರಿಮಠದ ಭಕ್ತಮಂಡಳಿ

॥ सिद्धलिङ्गाय नमः ॥

# अ. भा. वीरशैव विद्वत् परिषदा

### पं. पुट्टराजकविभ्यः प्रदीयमाना

# ❁ प्रशस्ति पत्रिका ❁

धारावाडमंडलान्तर्गत-हानगल्ल-उपमंडले "होसपेटि" नामकमेकं ग्रामं विराजते। तस्मिन्श्चग्रामे बृहन्मठाध्यक्षौ श्रीमंतौ सिद्दम्मा रेवणय्यानामानौ दम्पती आस्ताम्। तयोर्गर्भाबुधौ जनुरापन्नं पुट्टराज-नामकमेकं रत्नम्। हावेरि—उपमंडले वर्तमान—देवगिरि—यल्लापुर-ग्रामस्थबृहन्मठे पोषितं परिवर्धितं चैतत् रत्नं स्वमातुलैश्चन्द्रशेखरार्यैः। तेऽपि चंद्रशेखरार्याः पूज्यानां लिङ्गैक्य वे. पं. पंचाक्षरगानयोगिनां शिष्या एव आसन्। अत एव यावती सङ्गीतविद्या तैरभ्यस्ता, तावती विद्या पुट्टराजेभ्यः पाठिता। अधिकविद्यार्जनार्थं स्वगुरूणां लिङ्गैक्य पंचाक्षरगानयोगिनां सविधे प्रेषिता एते पुट्टराजमहोदयाः।

गानयोगिनस्ते जन्मांधानामपि पुट्टराजानां बुद्धिवैभवमवगम्य पंडितैर्भाषात्रयमभ्यासितम्। अपि च गानयोगिनः स्वयं दक्षिणोत्तर-सङ्गीतविद्यां पाठितवंतः। श्री कुमारेश्वरकृपाविशेषेण कन्नड, संस्कृत, हिन्दीप्रिभृतिभाषासु कविताशक्तिः, सर्वविधवादनकला, उभयगानमाधुर्यं चैतेषु स्वाभाविकाः सन्ति।

सङ्गीतमहाविद्यालयं संस्थाप्य तद्वाराऽनेकेभ्योऽङ्गविकलेभ्यो विशेषतो जन्मांधेभ्यो गानवादनादिविद्या वितीर्यंते पुट्टराजैः। तेभ्यो विद्यार्थिभ्योऽशनवसतयोऽपि प्रदीयंते एतैरेव। कुमारेश्वरनाट्यसंघनामिकामन्यामेकां संस्थां निर्मीयानेकानि नाटकान्यभिनीयन्ते। एतेन नाटकाभिनयेन सामान्यजनेषु संस्कृति–जागृतिरनायासेन भवत्येव। एते पुट्टराजाः न केवलं कवयः, अपि च लिंगपूजानिष्ठाः सन्ति। एभिरनेके नाटकपुराणादिग्रंथाः भाषात्रये निर्मिताः सन्ति।

एतादृशेभ्यो वरकविभ्यः पुट्टराजेभ्यः कवितामाधुर्येण संतुष्टयानया वीरशैव-विद्वत्-परिषदाऽस्मिन् शिवयोगिनां यात्रासुप्रसंगे श्री म. नि. ज. चित्रदुर्ग जयविभवमहास्वामिनां दिव्यसन्निधौ "कविरत्नम्" इति च प्रशस्तिः प्रदीयते। शिवं भूयात्।

धारवाडपत्तने, मृत्युंजयनगरे, मुरघामठे, माघमासे षष्ठितिथौ दि. ३१–१–१९६३ गुरुवासरे।

स्वागताध्यक्षाः
**पं. नागभूषणशास्त्रिणः**

परिषदध्यक्षाः
**श्री नि. प्र. पं. मल्लिकार्जुनस्वामिनः**

गौरवकार्यदर्शिनः
**पं. शङ्करशास्त्रिणः**

೨೧

## ಕಲಬುರ್ಗಿಯ ಕಲಾಮಂಡಲದ ಸದಸ್ಯರು ಮತ್ತು ರಸಿಕ ನಾಗರಿಕರು

## ಪಂ. ಶ್ರೀ ಪುಟ್ಟರಾಜ ಗವಾಯಿಗಳಿಗೆ

।।।।। ಅರ್ಪಿಸಿದ ।।।।।

# ಸನ್ಮಾನ ಪತ್ರ

ಮಹನೀಯರೆ,

ಇತಿಹಾಸ ಪ್ರಸಿದ್ಧವೂ ಪವಿತ್ರ ಕ್ಷೇತ್ರವೂ ಆದ ಕಲಬುರ್ಗಿ ನಗರದಲ್ಲಿ ನಡೆಯುತ್ತಿರುವ ಕಲಾಮಂಡಲದ ವಾರ್ಷಿಕ ಸ್ನೇಹ ಸಮ್ಮೇಲನ ಸಮಾರಂಭದ ಸಂದರ್ಭದಲ್ಲಿ ಈ ಸನ್ಮಾನ ಪತ್ರದಿಂದ ತಮ್ಮನ್ನು ಗೌರವಿಸುವ ಸದವಕಾಶ ದೊರೆತದ್ದು ನಮ್ಮ ಸೌಭಾಗ್ಯವೆಂದೇ ಭಾವಿಸುತ್ತೇವೆ.

ಕನ್ನಡ ನಾಡು, ನುಡಿ, ಧರ್ಮ, ಕಲೆ, ಇವುಗಳ ಸರ್ವತೋಮುಖವಾದ ಏಳಿಗೆಗಾಗಿ ನೀವು ನಿಮ್ಮ ಪವಿತ್ರವಾದ ಜೀವನವನ್ನೇ ಮುಡಿಪಾಗಿ ಇಟ್ಟದ್ದೀರಿ. ಒಂದು ದೇಶದಲ್ಲಿ ಘನ ಸಾಹಿತಿಗಳು ಸಿಗಬಹುದು. ಉದ್ದಾಮ ಸಂಗೀತ ವಿಶಾರದರು ದೊರೆಯಬಹುದು, ವಾದ್ಯವಾದನ ಪಟುಗಳಿಗೂ ಕೊರತೆ ಇಲ್ಲದೆ ಇರಬಹುದು. ಆದರೆ ಸಾಹಿತ್ಯ ಸಂಗೀತ ವಾದ್ಯವಾದನ ಕಲೆಗಳ ತ್ರಿವೇಣಿ ಸಂಗಮವೆನಿಸಕೊಂಡ ಕಲಾನಿಪುಣರು ದೊರೆಯುವದು ವಿರಳ. ತಮ್ಮ ಪೂಜ್ಯ ಗುರುಗಳೂ ಪ್ರಾತಃಸ್ಮರಣೀಯರೂ ಆದ ಲಿಂಗೈಕ್ಯ ಶ್ರೀ ಪಂಚಾಕ್ಷರ ಗವಾಯಿಗಳ ಪೂರ್ಣ ಅನುಗ್ರಹದಿಂದಲೇ ತಾವು ಮೇಲೆ ವಿವರಿಸಿದ ಕಲಾತ್ರಯಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಗಳಿಸಿಕೊಂಡಿದ್ದೀರಿ. ಹಾಗೆಯೇ ಭಾಷಾತ್ರಯದಲ್ಲಿಯೂಅಮೋಘವಾದ ಕೈವಾಡವನ್ನು ತೋರಿ ಮೆರೆದಿದ್ದೀರಿ. ಕನ್ನಡ ಭಾಮಿನಿ ಷಟ್ಪದಿಯಲ್ಲಿ ರಚಿಸಿದ "ಅಕ್ಕಮಹಾದೇವಿ ಪುರಾಣ" ಸಂಸ್ಕೃತದಲ್ಲಿ ರಚಿಸಿದ "ಗುರುಗೀತೆ" ಹಿಂದಿಯಲ್ಲಿ ಬರೆದ "ಬಸವ ಪುರಾಣ" ಇವು ಈ ಮಾತಿಗೆ ನಿದರ್ಶನವಾಗಿವೆ.

ಕಲಾರಾಧಕರೆ,

ಭಿನ್ನ ಭಿನ್ನ ರುಚಿಯುಳ್ಳ ಜನತೆಗೆ ಏಕಮಾತ್ರ ಸಮಾರಾಧನವೆನಿಸಿಕೊಂಡ, ನಾಟಕ ಪ್ರಪಂಚಕ್ಕೂ ತಾವು ಸಲ್ಲಿಸಿದ ಸೇವೆ ಅಷ್ಟಿಷ್ಟಲ್ಲ. ಜಗಜ್ಯೋತಿ ಬಸವೇಶ್ವರ,

ನಲ್ಲೂರ ನಂಬೆಕ್ಕ, ಮೊದಲಾದ ಶಿವಶರಣ ಶರಣೆಯರ ನಾಟಕಗಳನ್ನು ಬರೆದು, ಅವು ಗಳ ಶಾಸ್ತ್ರೀಯವಾದ ಪ್ರದರ್ಶನಕ್ಕಾಗಿ ನಾಟಕ ಸಭೆಯನ್ನು ಸ್ಥಾಪಿಸಿ ನಿರಂತರವಾಗಿ ಲೋಕ ಶಿಕ್ಷಣ ಕಾರ್ಯವನ್ನು ನಡೆಸಿದ್ದೀರಿ. "ಹೇಮರಡ್ಡಿ ಮಲ್ಲಮ್ಮ" ನಾಟಕವು ಎಡೆಬಿಡದೆ ೩೦೫ ದಿವಸಗಳವರೆಗೆ ಅಭಿನಯಿಸಲ್ಪಟ್ಟಿತು, ಎಂಬುದನ್ನು ನೆನೆದು ಕೊಂಡಾಗ, ಅಗಾಧವಾದ ತಮ್ಮ ಸ್ಫೂರ್ತಿಯ ಮಹಿಮೆಯೂ ಗೋಚರವಾಗುತ್ತದೆ.

ನಾದೋಪಾಸಕರೆ ಮತ್ತು ಭಕ್ತಾಗ್ರಣಿಗಳೆ,

ಸಂಗೀತ ಸುಖವು ಬ್ರಹ್ಮಸಾಕ್ಷಾತ್ಕಾರದ ಸುಖಕ್ಕೆ ಸಮಾನವಾದದ್ದು. "ನಾಹಂ ವಸಾಮಿ ವೈಕುಂಠೆ। ಯೋಗಿನಾಂ ಹೃದಯೇ ನಚ॥ ಮದ್ಭಕ್ತಾ ಯತ್ರ ಗಾಯಂತಿ। ತತ್ರ ತಿಷ್ಠಾಮಿ ನಾರದ॥ ಎಂದು ನಾರದ ಸಂಹಿತೆಯಲ್ಲಿ ಗಾನಲೋಲನಾದ ಶ್ರೀ ಮುಕುಂದನೇ ನುಡಿದಂತೆ, ತಾವು ತಮ್ಮ ಅಚಲವಾದ ಭಕ್ತಿ-ತಪಸ್ಸುಗಳಿಂದ, ನಾದ ಬ್ರಹ್ಮನನ್ನು ಒಲಿಸಿಕೊಂಡಿದ್ದೀರಿ. ಚರ್ಮ ಚಕ್ಷುಸ್ಸಿಗಿಂತ ಮಿಗಲಾದದ್ದು ದಿವ್ಯ ಚಕ್ಷುಸ್ಸು. ಇದನ್ನು ಪಡೆದುಕೊಂಡು ಲೋಕಮಾನವ, ದೇವಮಾನವನಾಗಬಲ್ಲನು, ದಿವ್ಯ ಜ್ಯೋತಿಯಲ್ಲಿ ವಿಹರಿಸಬಲ್ಲನು, ಇಲ್ಲಿ ಸಲ್ಲುವದಲ್ಲದೆ ಅಲ್ಲಿಯೂ ಸಲ್ಲಬಲ್ಲನು, ಎಂಬುದನ್ನು ಸಾವಿರ ಸಾವಿರ ಕುರುಡು ಸಂತಾನಕ್ಕೆ, ತಮ್ಮ ಅಗಾಧವಾದ ಸಾಹಿತ್ಯ ಸಂಗೀತ ಆಧ್ಯಾತ್ಮ ವಿದ್ಯೆಗಳನ್ನು, ಗದುಗಿನ ಶ್ರೀ ಕುಮಾರಸ್ವಾಮಿ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ ಮತ್ತು ಶ್ರೀ ವೀರೇಶ್ವರ ಪುಣ್ಯಾಶ್ರಮಗಳ ನಿರ್ದೇಶಕರಾಗಿ ದಾನಮಾಡಿ ಅವರನ್ನು ಉದ್ಧಾರಮಾಡುತ್ತಿರುವಿರಿ. ತಮ್ಮಿಂದಲೂ ತಮ್ಮ ಸಂಸ್ಥೆಗಳಿಂದಲೂ ಶಿಕ್ಷಿತರಾದ ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮನ್ನು ಹಾಡಿ ಹರಿಸುತ್ತಿವೆ. ತಾವು ತೋರಿದ ದಾರಿಯಲ್ಲಿ ನಡೆದು ನಮ್ಮ ನಾಡಿನ ಸಾಂಸ್ಕೃತಿಕ ಪುನರುತ್ಥಾನ ಕಾರ್ಯದಲ್ಲಿ ಭಾಗಿಯಾಗಿವೆ. ಇದಕ್ಕಿಂತ ಹೆಚ್ಚಿನ ಜೀವನ ಸಾರ್ಥಕ್ಯ ಇನ್ನು ಬೇರೆ ಉಂಟೆ?

ಕವಿಯ ಕಣ್ಣನ್ನೂ ಭಕ್ತನ ಹೃದಯವನ್ನೂ ಪಡೆದ ತಮ್ಮ ಬಹುಮುಖ ವ್ಯಕ್ತಿತ್ವವು ತಾವು ಕೈಕೊಂಡ ಮಹಾ ಕಾರ್ಯದಲ್ಲಿ ಸ್ಪೃಹಣೀಯವಾದ ಯಶಸ್ಸನ್ನು ತಂದು ಕೊಡಲಿ, ಮತ್ತು ಪರಮೇಶ್ವರನು ತಮಗೆ ದೀರ್ಘಾಯುರಾರೋಗ್ಯ, ಯಶೋಭಾಗ್ಯ ಇತ್ಯಾದಿಗಳನ್ನು ದಯಪಾಲಿಸಲಿ ಎಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ಈ ಸನ್ಮಾನಪತ್ರವನ್ನು ಸಮರ್ಪಿಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

ಕಲಬುರ್ಗಿ,
ದಿ. ೧೨—೪—೧೯೬೩

ತಮ್ಮ ಕೃಪಾಭಿಲಾಷಿಗಳಾದ
ಕಲಾಮಂಡಲದ ಅಧ್ಯಕ್ಷ ಮತ್ತು ಸದಸ್ಯರು

೨೨

॥ ಶ್ರೀ ಮರುಳಸಿದ್ಧೇಶ್ವರಾಯ ನಮಃ

ಶ್ರೀ ಮ. ನಿ. ಪ್ರ. ಶಂಕರ ಸ್ವಾಮಿಗಳವರ ದಿವ್ಯ ಅಪ್ಪಣೆಯ ಮೇರೆಗೆ

## ಶ್ರೀ ಶೆಟ್ಟರ ಮಠದಲ್ಲಿ

ಶ್ರೀ ಪಂ. ವೇ. ತ್ರಿಭಾಷಾ ಪಂಡಿತರೂ, ಸಂಗೀತ ಸಮ್ರಾಟರೂ,
ನಾಟ್ಯ ಪ್ರೇಮಿಗಳೂ, ಅನಾಥ ಅಂಗಹೀನ ಸಕಲ ಜಾತಿಯ
ಬಾಲಕರ ಪೋಷಕರೂ ಆದ ಗದುಗಿನ

## ಶ್ರೀ ಪುಟ್ಟರಾಜ ಗವಾಯಿಗಳವರಿಗೆ

ಅಥಣಿ ಶ್ರೀ ಶೆಟ್ಟರ ಮಠದ ಸದ್ಭಕ್ತಾದಿಗಳೂ, ಹಾಗೂ ಸಂಚಾಲಕ ಸಮಿತಿಯವರೂ
ಆದರಪೂರ್ವಕವಾಗಿ ಅರ್ಪಿಸುವ

# ಮಾನ ಪತ್ರ

ಪೂಜ್ಯರೇ !

ತಾವು ತಮ್ಮದೇ ಆದ ಹರಿತವಾದ ಲೆಕ್ಕಣಿಕೆಯಿಂದಲೂ, ಸುಮಧುರವಾದ ಸಂಗೀತದಿಂದಲೂ, ತಾವು ಚಿಕ್ಕಂದಿನಿಂದಲೂ ತಾಯ್ನಾಡಿನ ನುಡಿಯ ಏಳ್ಗೆಗಾಗಿಯೂ, ತಾವು ತಮ್ಮ ಇಡೀ ಜೀವನವನ್ನೇ ಶ್ರೀಗಂಧದಂತೆ ಸವಿಸುತ್ತ ನಾಡಿನ ಸಾಹಿತ್ಯ ಹಾಗೂ ಸಂಗೀತ ಸೇವೆಯನ್ನು ಅತ್ಯಂತ ಭಕ್ತಿ ಪೂರ್ವಕವಾಗಿಯೂ, ಪ್ರಸಂಶಾರ್ಹ ವಾಗಿಯೂ ನಾಡಿನ ನಾಲ್ಕೂ ನಿಟ್ಟಿನ ಜನಾನುರಾಗವನ್ನು ಸಂಪಾದಿಸಿಕೊಂಡ ಅಜ್ಞಾನ–ಅಂಧಕಾರಗಳಲ್ಲಿ ಅಲೆದಾಡುವ ಜನತೆಯನ್ನು ಎಚ್ಚರಿಸಿ, "ಮಾನವೀಯತೆಯ" ಆದರ್ಶಪಥವನ್ನು ತೋರಿಸುತ್ತಿರುವದನ್ನು ಕಂಡು, ಕನ್ನಡಾಂಬೆಯು ತಮ್ಮಂಥ ಹುಟ್ಟು ಅಂಧರಾದ ಕುವರರನ್ನು ಹೆತ್ತದ್ದನ್ನು ನೋಡಿ, ಭಾರತೀಯ ನಾಗರಿಕರು ತಮ್ಮ ಅಗಾಧಮಯವಾದ ಬುದ್ಧಿಪಾಂಡಿತ್ಯಕ್ಕೆ ಎಂಥ ಅಮೌಲ್ಯವಾದ ಬಿರುದು ಗೌರವಗಳನ್ನು ಕೊಟ್ಟು ಸನ್ಮಾನಿಸಿದರೂ ಅಲ್ಪವೇ !

ಕವಿವರ್ಯರೇ !

ಕಣ್ಣಿದ್ದವರಿಗೆ ಒಂದೇ ಭಾಷೆಯಲ್ಲಿ ಅಧ್ಯಯನ ಮಾಡಲಾಗದ ಇಂದಿನ ಯುಗದಲ್ಲಿ ತಾವು ನಾಡ ಭಾಷೆಯಾದ ಕನ್ನಡ, ರಾಷ್ಟ್ರೀಯ ಭಾಷೆಯಾದ ಹಿಂದೀ, ದೇವ ಭಾಷೆಯಾದ ಸಂಸ್ಕೃತದಂಥ ತ್ರಿಭಾಷೆಗಳಲ್ಲಿ ಅಧ್ಯಯನ ಮಾಡಿ, ನಾಡ ನುಡಿಯಲ್ಲಿ ಹಲವಾರು ಪುರಾಣ, ನಾಟಕ, ಕಾವ್ಯಗಳನ್ನು ರಚಿಸಿ, ಕನ್ನಡ ಸಾಹಿತ್ಯದ

ಅಭಿವೃದ್ಧಿಗಾಗಿ ಸಲ್ಲಿಸಿದ ಸೇವೆಯು ಅತ್ಯಂತ ಪ್ರಶಂಶಾರ್ಹವಾಗಿರುವದು. ರಾಷ್ಟ್ರೀಯ ಭಾಷೆಯಾದ ಹಿಂದಿಯಲ್ಲಿ "ಬಸವ ಪುರಾಣ"ವನ್ನು ಬರೆದಿರುವಿರಿ. ದಿವಂಗತ ರಾಷ್ಟ್ರಪತಿ ಡಾ|| ಬಾಬು ರಾಜೇಂದ್ರಪ್ರಸಾದರು ತಮ್ಮ ಅತುಲವಾದ ಪಾಂಡಿತ್ಯಕ್ಕೆ ಬೆರಗಾಗಿ "ರಾಷ್ಟ್ರ ಪ್ರಶಸ್ತಿ" ಯನ್ನು ನೀಡಿ, ಈ ಹಿಂದೇ ಕೇಂದ್ರ ಸರಕಾರವು ಸನ್ಮಾನಿಸಿರುವದು.

**ಸಂಗೀತ ರತ್ನರೇ !**

ತಾವು ಸಾಹಿತ್ಯದಲ್ಲಿ ಇಟ್ಟುಕೊಂಡಿರುವ ರಸಿಕತೆಯನ್ನೇ ಸಂಗೀತದಲ್ಲಿಯೂ ಇಟ್ಟುಕೊಂಡಿರುವಿರೆಂದು ಹೇಳಿದರೆ,ಜನತೆಗೆ ಆಶ್ಚರ್ಯವಾಗದೇ ಇರಲಾರದು.ಅಂತೆಯೇ 'ಸಂಗೀತ ಸಮ್ರಾಟ' ಎಂದು ಬಿರುದು ಪಡೆದುಕೊಂಡ ತಮ್ಮ ಸಂಗೀತದ ಅಪಾರವಾದ ಪಾಂಡಿತ್ಯವನ್ನು ಕಂಡು ಕರ್ನಾಟಕ ಸರಕಾರವು ಕೆಲ ವರ್ಷಗಳ ಹಿಂದೆ 'ಸಂಗೀತ ಪ್ರಶಸ್ತಿ' ಯನ್ನು ತಮಗೆ ನೀಡಿ ಸನ್ಮಾನಿಸಿದೆ.

**ನಾಟ್ಯಪೋಷಕರೇ !**

ಗುರುವರ್ಯರಾದ ಲಿಂ|| ಪಂ|| ಪಂಚಾಕ್ಷರಿ ಗವಾಯಿಗಳವರ ಕೃಪಾಶೀರ್ವಾದ ಬಲದಿಂದ ಹಲವಾರು ನಾಟಕಗಳನ್ನು ರಚಿಸಿ, ರಂಗಭೂಮಿಯ ಸೇವೆಯನ್ನು ಮಾಡುತ್ತ ಬಂದಿರುವದು ಒಂದು ಅತ್ಯಂತ ಆನಂದವೇ ಸರಿ. ನಾಡಿನ ಕಲೆಯು ಬಾಳಬೇಕು ಬೆಳೆಯಬೇಕು ಎಂಬ ನಿಮ್ಮ ಉಚ್ಚ ಭಾವನೆಯು ಅಚ್ಚಳಿಯದೆ ಉಳಿಯಲಿ. ಸಾಹಿತ್ಯ ಹಾಗೂ ಸಂಗೀತ ಕಲೆಯು ತಮ್ಮ ನಾಟ್ಯಸಂಘದಲ್ಲಿ ಕೊನೆಯ ವರೆಗೂ ಬಾಳಲಿ ಎಂದು ಈ ಸುಪ್ರಸಂಗದಲ್ಲಿ ಕಲಾದೇವಿಯನ್ನು ನಾವೆಲ್ಲರೂ ನೆನೆಯದೆ ಇರಲಾರೆವು.

**ಕಲಾಪ್ರೇಮಿಗಳೇ !**

ಶ್ರೀ ಮದಥಣಿ ಲಿಂ|| ಪ|| ಪೂ|| ಶ್ರೀ ಮುರುಳಸಿದ್ಧ ಶಿವಯೋಗಿಗಳವರ ಹಾಗೂ ಶಿವಸ್ವರೂಪಿಗಳಾದ ಹಾನಗಲ್ಲಿನ ಕುಮಾರ ಮಹಾಸ್ವಾಮಿಗಳವರ ಕೃಪಾ ಶೀರ್ವಾದ ಬಲವು ತಮ್ಮ ಮೇಲೆ ಇರಲಿ. ನಾಡ ನುಡಿಯ ಸಂಗೀತ ಕಲೆಯ ಸೇವೆಗಾಗಿಯೂ, ಸಮಾಜದ ಭದ್ರತೆಗಾಗಿಯೂ ತಮಗೆ ದೇವರು ಆಯುರಾರೋಗ್ಯ ಭಾಗ್ಯವನ್ನೂ ದಯಪಾಲಿಸಲಿ ! ತಾವು ಮಾಡುವ ಸೇವೆಗಳು ಸೂರ್ಯ–ಚಂದ್ರರಿರುವ ವರೆಗೆ ಚಿರಕಾಲ ಉಳಿಯುವಂತೆ ಪರಮೇಶ್ವರನು ಅನುಗ್ರಹಿಸಲಿ ಎಂದು ನಾವೆಲ್ಲರೂ ಏಕನಿಷ್ಠೆಯಿಂದಲೂ, ಭಕ್ತಿಪೂರ್ವಕವಾಗಿಯೂ ಪ್ರಾರ್ಥಿಸುತ್ತೇವೆ.

ಅಥಣಿ
೩೦, ಸಪ್ಟೆಂಬರ ೧೯೬೩

ಇಂತಿ ತಮ್ಮವರೇ ಆದ
ಅಥಣಿ ಶ್ರೀ ಶೆಟ್ಟರ ಮಠದ ಸದ್ಭಕ್ತರು

## ೨೩

॥ ಸಿರಿಗನ್ನಡಂ ಗೆಲ್ಗೆ ॥

ಹಿರಾಳು ಚರಪಟ್ಟಾಧ್ಯಕ್ಷ ಶ್ರೀ ಷ. ಬ್ರ. ವಿರುಪಾಕ್ಷಸ್ವಾಮಿಗಳ ಸನ್ನಿಧಿಯಲ್ಲಿ

## ಕವಿಭೂಷಣ ಶ್ರೀ ವೇ. ಪಂ. ಪುಟ್ಟರಾಜ ಗವಾಯಿಗಳು

ಸಂಚಾಲಕರು, ಶ್ರೀ ವೀರೇಶ್ವರ ಪುಣ್ಯಾಶ್ರಮ, ಗದಗ ಇವರಿಗೆ–

ಹೊಳಲಗುಂದಿ ನಾಗರಿಕರು ಶ್ರೀ. ಕೆ. ವೀರಭದ್ರಪ್ಪ M. A., (Lit)
(ಕನ್ನಡ ಅಧ್ಯಾಪಕರು ಆರ್ಟ್ಸ ಆ್ಯಂಡ ಸಾಯಿನ್ಸ ಕಾಲೇಜ ಆದವಾನಿ)

ಇವರ ಅಧ್ಯಕ್ಷತೆಯಲ್ಲಿ ಸಮರ್ಪಿಸಿದ

# ಸನ್ಮಾನ ಪತ್ರ

ಗೌರವಯುತ ಗಾಯಕರೇ,

ಭವ್ಯ ಭಾರತದ ಘನ ಗಾಯಕರ ಶ್ರೇಣಿಯ ಶ್ರೇಷ್ಠರೂ, ಕನ್ನಡ ನಾಟಕ ಕರ್ತರೂ, ಪ್ರವಚನಕಾರರೂ ಕಲಾಮನೋಕಾಂಕ್ಷ ಪ್ರದಾತರೂ, ಉದಾರಿಗಳೂ, ಸರಳರೂ ತಾವು ಎನ್ನುವದಕ್ಕೆ ಮೈಸೂರು ಕರ್ನಾಟಕ ಸಂಗೀತ ನಾಟಕ ಅಕಾಡ ಮೆಯು ತಮ್ಮನ್ನು ಸನ್ಮಾನಿಸಿರುವುದು ನಿದರ್ಶನವಾಗಿದೆ. ಈ ಗ್ರಾಮದ ಸದ್ಭಕ್ತ ಮಂಡಳಿಯ ಆಹ್ವಾನದ ಮೇರೆಗೆ ದಯಮಾಡಿಸಿದ ತಮಗೆ ನಮ್ಮ ತ್ರಿಕರ್ಣಪೂರ್ವಕ ಸನ್ಮಾನ ಸತ್ಕಾರ.

ತ್ರಿಭಾಷಾ ಪಂಡಿತರೇ,

ತಾವು ಸತತವಾಗಿ ೨೦ ವರ್ಷಗಳಿಂದಲೂ ಶ್ರಮವಹಿಸಿ ನಡೆಸುತ್ತಾ ಬಂದಿರುವ ಶ್ರೀ ವೀರೇಶ್ವರ ಪುಣ್ಯಾಶ್ರಮವು ಕರ್ನಾಟಕದ ಏಕೈಕ ಸಂಗೀತ ವಿದ್ಯಾಪೀಠವೆಂದರೆ ತಪ್ಪಾಗಲಾರದು. ಈ ಪೀಠವು ಇಂದು ಸುಮಾರು ೪೦೦೦ ಸರ್ವ ಜಾತಿಯ ನಿರಾ ಶ್ರಿತ ದೀನದಲಿತ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಿಸಿರುವುದು ಲೋಕಮಾನ್ಯವೇ

ಸಮಾಜವನ್ನು ನೈತಿಕದತ್ತ ತಿರುಗಿಸಿ ಸರ್ವರ ಸುಖಶಾಂತಿಗಳಿಗೆ ಕಾರಣವಾಗಬೇಕಾದರೆ ನಮ್ಮ ಶ್ರೀ ಪುಟ್ಟರಾಜ ಗವಾಯಿಗಳು ರಂಗ ಭೂಮಿಯ ಮೇಲೆ ಆಡುವ "ಹೇಮರಡ್ಡಿ ಮಲ್ಲಮ್ಮ, ಅಕ್ಕಮಹಾದೇವಿ, ನೆಲ್ಲೂರ ನಂಬಿಯಕ್ಕ" ಮೊದಲಾದ ಕಥೆಗಳೇ ಸಾಕ್ಷಿ. ಇಂಥ ಕಲೆಯು ನಾಡಿನ ಮೂಲೆಯಲ್ಲಿ ಬಿದ್ದದ್ದನ್ನು ನಮ್ಮ ಶ್ರೀ ಪುಟ್ಟರಾಜ ಗವಾಯಿಗಳು ಎತ್ತಿ ಹಿಡಿದು ಅದರ ಬಗ್ಗೆ ಸೇವೆಮಾಡಿ ರಂಗ ಭೂಮಿಯ ಮೇಲೆ ನಾಟಕಗಳನ್ನು ಆಡುತ್ತಾ ಸಮಾಜದಲ್ಲಿದ್ದ ಕುಂದು ಕೊರತೆಗಳನ್ನು ಕಳೆಯುತ್ತಲಿದ್ದಾರೆ. ಹುಟ್ಟು ಕುರುಡರಾದ ಶ್ರೀಪುಟ್ಟರಾಜರು ಕನ್ನಡದಲ್ಲಿ ಸುಮಾರು ೨೫ ನಾಟಕಗಳನ್ನು ಹಾಗೂ ಸಂಸ್ಕೃತದಲ್ಲಿ "ಕುಮಾರ ಗೀತೆಯನ್ನು" ಬರೆದಿದ್ದಾರೆ. ಅಲ್ಲದೆ ಹಿಂದೀಯಲ್ಲಿ "ಬಸವ ಪುರಾಣವನ್ನು ಬರೆದು" ರಾಷ್ಟ್ರಪತಿ ಡಾ|| ಬಾಬು ರಾಜೇಂದ್ರ ಪ್ರಸಾದರಿಂದ ಪ್ರಶಸ್ತಿಯನ್ನು ಪಡೆದದ್ದು ಕನ್ನಡ ನಾಡಿಗೆ ಹೆಮ್ಮೆಯ ಮಾತಾಗಿದೆ.

ಇವರು ಸಂಗೀತ ಸಾಹಿತ್ಯದ ಸೇವೆಯಿಂದ ಮಾಡಿದ ಉಪಕಾರವನ್ನು ನಿಜವಾದ ಯಾವ ಕನ್ನಡಿಗನೂ ಮರೆಯಲಾರ. ಇದಲ್ಲದೆ ನಾಟ್ಯಕಲೆಯಲ್ಲಿ ಇವರ ಹಾಸ್ಯವು ಬಹು ಮಧುರವಾಗಿದೆ, ಅಲ್ಲದೆ ಗಂಭೀರವಾಗಿದೆ. ನಾವಾದರೂ ಶ್ರೀ ಪುಟ್ಟರಾಜ ಗವಾಗಳನ್ನು ಕಲೆಯ ಪೂಜ್ಯ ಭಾವನೆಯಿಂದ ನೋಡಿದರೆ ನಮಗೂ ಕೂಡ ಶ್ರೇಯಸ್ಸು ಆಗುವುದರಲ್ಲಿ ಸಂದೇಹವಿಲ್ಲ. ಮಹಾ ಜ್ಞಾನಿಗಳಿಗೆ ಪ್ರೋತ್ಸಾಹಿಸುವಂತೆ ಕಲೆಗಾದರೂ ಮನ್ನಣೆ ಕೊಡುವದು ಅವಶ್ಯವಾದದ್ದು. ಇವರು ತಮ್ಮ ಕಲೆಯ ಮಹಾ ಸಾಧನೆಗಾಗಿ ತಮ್ಮ ಸರ್ವ ಆಯುಷ್ಯವನ್ನು ಕಲಾದೇವಿಗೆ ಧಾರೆ ಎರೆದಿದ್ದಾರೆ.

ಅಂದಿನಂತೆ ಶ್ರೀ ಕುಮಾರ ಕೃಪಾಪೋಷಿತ ನಾಟ್ಯಸಂಘವನ್ನು ಇಂದಿನ ವರೆಗೆ ನಡೆಸುತ್ತ ಬಂದಿರುವ ನಮ್ಮ ಶ್ರೀಪುಟ್ಟರಾಜ ಗವಾಯಿಗಳಿಗೆ ದೇವರು ಇವರಲ್ಲಿರುವ ಸಂಗೀತ ಸಾಹಿತ್ಯ ಕಲೆಯ ಜ್ಞಾನಕ್ಕೆ ಸರಿಯಾದ ಬೆಳಕನ್ನು ನೀಡಲಿ; ಮಾನವರಲ್ಲಿಯ ವಿವೇಕವನ್ನು ಎಚ್ಚರಿಸಲಿ; ಅವರಲ್ಲಿದ್ದ ಭಾವವನ್ನು ವಿಮಲ ಗೊಳಿಸಲಿ; ಅವರಿಗೆ ಸರಿಯಾದ ಗುರಿದಾರಿಗಳನ್ನು ಕಾಣಿಸಲಿ; ಇವರ ಕಲೆಯಿಂದ ವಿಶ್ವದಲ್ಲಿ ಶಾಂತಿ ಸಾಮ್ರಾಜ್ಯ ನೆಲೆಗೊಳ್ಳಲಿ; ದೇವರು ಇವರಿಗೆ ಹೆಚ್ಚಾಗಿ ಆಯುರಾರೋಗ್ಯವನ್ನು ಕೊಟ್ಟು ನಮ್ಮಲ್ಲಿರುವ ಅಜ್ಞಾನತನವನ್ನು ರಂಗಭೂಮಿಯ ಮೇಲೆ ಆಡುವ ಸಾಮಾಜಿಕ, ಪೌರಾಣಿಕ, ಐತಿಹಾಸಿಕ, ಕಥೆಗಳಿಂದ ಹೊರದೂಡಿಸಿ, ನಮ್ಮಲ್ಲಿ ಕಲೆಯ ಜ್ಞಾನವನ್ನು ಬೆಳಗಿಸಿ ನಮ್ಮ ನಾಡನ್ನು ಇನ್ನಿಷ್ಟು ಹೆಚ್ಚು ಕಲೆಯ ನಾಡನ್ನಾಗಿ ಮಾಡಲೆಂದು ಅವರಿಗೆ ಈ ಲೇಖನವನ್ನು ಬರೆದು ಕೈಲಾದಮಟ್ಟಿಗೆ ಕೃತಜ್ಞತೆಯನ್ನು ಸಲ್ಲಿಸಿದ್ದೇನೆ. ಇದೇ ನನ್ನ ಕಲಾದೇವಿಯ ಅಡಿದಾವರೆಗಳಲ್ಲಿ ನಮ್ರ ಪ್ರಾರ್ಥನೆ.

ಅಥಣಿ — ಕೃತಜ್ಞತೆಯನ್ನು ಸಲ್ಲಿಸಿದವರು

ದಿ. ೨೫-೯-೧೯೬೩ — ಉಭಾಳೆ ವಾಸುದೇವನ್ (ನಾಟಕ ಲೇಖಕರು) ಅಥಣಿ

೨೫

## ಶ್ರೀ ಕುಮಾರೇಶ್ವರ ಕೃಪಾಪೋಷಿತ

ಪಂಡಿತ ಪಂಚಾಕ್ಷರ ಗವಾಯಿಗಳವರ ನಾಟ್ಯ ಸಂಘ, ಗದಗ ಇವರಿಗೆ

ಶ್ರೀ ಮ. ಘ. ಚಕ್ರವರ್ತಿ ಹಿರೇಬೆಂಡಿಗೇರಿ ಮಠದ ಪಟ್ಟಾಧ್ಯಕ್ಷರ ಘನ ಅಧ್ಯಕ್ಷತೆಯಲ್ಲಿ

ದಾವಣಗೆರೆ ನಗರದ ಶ್ರೀ ಗುರು ಶಿವಯೋಗಿ ಬಕ್ಕೇಶ್ವರ ದೇವಸ್ಥಾನದ

ಭಜನಾ ಸಂಘದವರು ಅರ್ಪಿಸುವ

# ಅಭಿನಂದನ ಪತ್ರ



**ಪೂಜ್ಯ ಕಲಾಜ್ಯೋತಿಗಳೆ :**

ಲಿಂಗೈಕ್ಯ ಪಂ. ಪಂಚಾಕ್ಷರ ಗವಾಯಿಗಳವರ ವರಪ್ರಸಾದದಿಂದ ಬೆಳೆದ ಈ ಸಂಘವನ್ನು ಗದಗಿನಲ್ಲಿ ಸ್ಥಾಪಿಸಿ ಕನ್ನಡ ನಾಡಿನ ಕೆಲವು ಭಾಗದಲ್ಲಿ ಸಂಚರಿಸಿ, ಕಲಾಭಿಮಾನಿಗಳಾದ ಗದಗಿನ ನಾಗರಿಕರ ಪ್ರೋತ್ಸಾಹದ ಪ್ರತೀಕವಾಗಿ ಸತತವಾಗಿ ೩೦೫ ದಿವಸ 'ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ' ಎಂಬ ನಾಟಕವನ್ನು ಅಭಿನಯಿಸಿ ದಿಗ್ವಿಜಯಗೊಂಡು ವಾರ್ಷಿಕೋತ್ಸವವನ್ನು ಕೂಡ ಆಚರಿಸಿದ್ದಲ್ಲದೆ ಕರ್ನಾಟಕದ ಇನ್ನೂ ಅನೇಕ ಭಾಗಗಳಲ್ಲಿ ವಿಜಯ ವಿಕ್ರಮವನ್ನು ಹೊಂದಿ ಕರ್ನಾಟಕದ ಹೃದಯ ದಂತಿರುವ ದಾವಣಗೆರೆಗೆ ದಯಮಾಡಿಸಿ ಇಂದಿಗೆ ಸತತವಾಗಿ ಮಲ್ಲಮ್ಮ ನಾಟಕವನ್ನು ಒಳ್ಳೆ ಯಶಸ್ವಿ ರೀತಿಯಲ್ಲಿ ೩೨ ಪ್ರಯೋಗಗಳನ್ನು ಸುಸಜ್ಜಿತ ರಂಗಸಿದ್ಧತೆಗಳಿಂದ ಅಭಿನಯಿಸಿ ಕಲೆಯ ಮತ್ತು ಭಕ್ತಿಯ ಉಯ್ಯಾಲೆಯಲ್ಲಿ ತೂಗಾಡುವಂತೆ ನಮ್ಮಗಳ ಮನಸ್ಸಂತೋಷ ಪಡಿಸಿದಿರಿ. ನಿಮ್ಮ ಸಂಘದವರ ಕಲಾಪ್ರದರ್ಶನವನ್ನು ನೋಡಿ ನಾವು ಹೃದಯತುಂಬಿ ಅಭಿನಂದಿಸುತ್ತೇವೆ.

**ಪೂಜಾ ಧುರಂಧರರಾದ ಶ್ರೀ ವೇ॥ ಪುಟ್ಟಯ್ಯಸ್ವಾಮಿ ಗವಾಯಿಗಳವರೆ :**

ತಾವು ರಾಷ್ಟ್ರಾಧ್ಯಕ್ಷರಾದ ಶ್ರೀ ಬಾಬೂರಾಜೇಂದ್ರ ಪ್ರಸಾದರವರಿಂದ "ತ್ರಿಭಾಷಾ ವಿಶಾರದ ಮತ್ತು ಗಾನರತ್ನ" ಎಂಬ ಬಿರುದನ್ನು ಹೊಂದಿರುವದು ಕೇಳಿ ಕನ್ನಡನಾಡಿನ ಜನರಾದ ನಾವೆಲ್ಲರೂ ಅತ್ಯಂತ ಹೆಮ್ಮೆ ಪಡುತ್ತೇವೆ. ತಾವು ಈ ಸಂಘವನ್ನು ಅನಾಥ ಕುರುಡ ಮಕ್ಕಳ ರಕ್ಷಣೆಯ ಕಡುತರವಾದ ಜವಾಬ್ದಾರಿಯನ್ನು ಹೊತ್ತು ನಡೆಸುತ್ತಿರುವುದು ನಿಜವಾಗಿಯೂ ತಮ್ಮಗಳ ಪೂಜಾಫಲದ ಶಕ್ತಿಯೆಂದೇ ಭಾವಿಸುತ್ತೇವೆ.

**ಯತಿವರ್ಯರೆ :**

ಈ ಸಂಸ್ಥೆಯ ಮ್ಯಾನೇಜರರಾಗಿ ನನ್ನದೆಂಬ ಅಭಿಮಾನದಿಂದ ದುಡಿಯುತ್ತಿರುವ ಶ್ರೀ ವೇ|| ಎ. ಬಿ. ಹಿರೇಮಠ ರವರಿಗೂ ಮತ್ತು ಡೈರೆಕ್ಟರ ಶ್ರೀ ವೇ|| ಶಿವಮೂರ್ತಿ ಸ್ವಾಮಿ ದೇವಗಿರಿ ಇವರಿಗೂ ತಮ್ಮ ಸಂಸ್ಥೆಯ ವಿದ್ಯಾರ್ಥಿದೆಶೆಯಲ್ಲಿದ್ದು ತಮ್ಮ ಸೇವಾ ತತ್ಪರರಾಗಿ ತಮ್ಮಗಳ ಅನುಗ್ರಹಕ್ಕೆ ಪಾತ್ರರಾಗಿ ನಿಸ್ವಾರ್ಥ ಬುದ್ಧಿಯಿಂದ ದುಡಿಯುತ್ತಿರುವ ನಟವರ್ಗದವರಿಗೂ ಈ ಸಮಾರಂಭದಲ್ಲಿ ಅಭಿನಂದಿಸದೆ ಇರಲಾರೆವು.

**ಕಲಾದೇವಿಯ ಶ್ರೇಷ್ಠ ಪುತ್ರರೆ :**

ಈ ಸಂಘದ ಮೂಲಸ್ಥಂಭರಾಗಿ, ಪ್ರಸಾದ ನಿಲಯ ದಾತರಾಗಿ ಈ ಸಂಸ್ಥೆಯ ಉತ್ಪನ್ನವನ್ನು ಸದ್ವಿನಿಯೋಗಕ್ಕಾಗಿ ಉಪಯೋಗಿಸುತ್ತಿರುವುದನ್ನು ನೋಡಿ ತಮ್ಮ ಸಂಘಕ್ಕೆ ಎಲ್ಲೆಡೆಯಲ್ಲಿಯೂ ಮಹಾ ಜನರು ತನು, ಮನ, ಧನದಿಂದ ಪ್ರೋತ್ಸಾಹ ನೀಡುತ್ತಿರುವರು. ಈ ಸಂಸ್ಥೆಯ ಕೀರ್ತಿಯು ಶ್ರೀ ಕುಮಾರೇಶ್ವರ ಕೃಪೆಯಿಂದ ದಶ ದಿಕ್ಕುಗಳಲ್ಲಿಯೂ ಪಸರಿಸಿದೆ. ಕರ್ನಾಟಕದ ಎಲ್ಲೆಡೆಯಲ್ಲಿಯೂ ತಮಗೆ ಅತ್ಯಂತ ಸ್ವಾಗತ ದೊರೆಯಲೆಂದು ಹಾರೈಸುವುದಲ್ಲದೆ ತಮ್ಮ ಸಂಘದ ನಟವರ್ಗದವರಿಗೂ, ತಮಗೂ ಶ್ರೀಗುರು ಶಿವಯೋಗಿ ಬಕ್ಕೇಶ್ವರ ಸ್ವಾಮಿಯು ಆಯುರಾರೋಗ್ಯ ಐಶ್ವರ್ಯಾದಿ ಸನ್ಮಂಗಲವನ್ನುಂಟುಮಾಡಲೆಂದು ಹಾರೈಸುತ್ತೇವೆ.

**ಇತಿ. ಶುಭಂ. ಮಂಗಲಂ.**

ದಾವಣಗೆರೆ ಸಿಟಿ. ತಮ್ಮ :

**ಶ್ರೀ ಗುರು ಶಿವಯೋಗಿ ಬಕ್ಕೇಶ್ವರ ಭಜನಾ ಸಂಘ.**

ಶ್ರೀ ಬಸವಲಿಂಗಪ್ಪ ಗವಾಯಿ ಹುಗಾರ, ಮು. ಆಲಮೇಲ ತಾ. ಸಿಂದಗಿ ಜಿ. ವಿಜಾಪೂರ ಅವರು ಸಂಗೀತ-ವಾದ್ಯಗಳಲ್ಲಿ ಪರಿಣಿತರು.

ಶ್ರೀ ಆರ್. ವ್ಹಿ. ಶೇಷಾದ್ರಿ ಗವಾಯಿ ಬೆಂಗಳೂರು ಅವರು ೧೯೪೦ ರಿಂದ ೧೯೫೦ ರ ವರೆಗೆ ಶ್ರೀ ಗವಾಯಿಗಳವರಿಂದಲೂ ಹಾರ್ಮೋನಿಯಂ ತಬಲಾ ವಾದ್ಯದಲ್ಲಿ, ಗಾಯನ ಕಲೆಯಲ್ಲಿ ನೈಪುಣ್ಯ ಪಡೆದು ಮೈಸೂರ-ಬೆಂಗಳೂರ



ಭಾಗದಲ್ಲಿ ವಚನ ಗಾಯನ ಪ್ರಚಾರವನ್ನು ಮಾಡಿದವರು. ೧೯೫೫ ರಲ್ಲಿ ಸಿಡುಮಾಮಿಡಿ ಜ ಚೆನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳಿಂದ 'ವಚನಗಾನವಿಭೂಷಣ' ಎಂಬ ಪ್ರಶಸ್ತಿ ಪಡೆದರು. ಬೆಂಗಳೂರ ನಗರದಲ್ಲಿ ಶ್ರೀ ಪಂ. ಪಂಚಾಕ್ಷರ ಗವಾಯಿಗಳವರ ಕೃಪಾಪೋಷಿತ 'ಶ್ರೀ ಅರವಿಂದ ಸಂಗೀತ ವಿದ್ಯಾಲಯ' ವನ್ನು ಸ್ಥಾಪಿಸಿ ಸಂಗೀತವಿದ್ಯೆಯ ಪ್ರಚಾರವನ್ನು ಕೈಕೊಂಡಿರುವರು. ಇದುವರೆಗೆ ನೂರಾರು ವಿದ್ಯಾರ್ಥಿಗಳಿಗೆ ಪ್ರೌಢ ಶಿಕ್ಷಣ ಕೊಡಲಾಗಿದೆ. 'ಗಾಯನ ಗಂಗಾ' ಎಂಬ ದ್ವೈಮಾಸಿಕ ಪತ್ರಿಕೆಯನ್ನು ಪ್ರಕಟಿಸಿ ಅದರ ಮುಖಾಂತರ ಉತ್ತರಾದಿ ಮತ್ತು ದಕ್ಷಿಣಾದಿ ಸಂಗೀತವಿದ್ಯೆಯ ಬಗೆಗೆ ಹೆಸರಾಂತ ವಿದ್ವಾಂಸರ ಬರೆಹಗಳಿಂದ ಸಂಗೀತ ಸಾಹಿತ್ಯದ ಪ್ರಸಾರ ಕಾರ್ಯವೂ ನಡೆದಿದೆ 'ತತ್ವಗಾನ ರತ್ನಾಕರ' ಎಂಬ ಉದ್ಗ್ರಂಥಗಳನ್ನು ಈ ವಿದ್ಯಾಲಯದಿಂದಲೇ ಪ್ರಕಟಿಸಲಾಗಿದೆ. ಶ್ರೀ ಅರವಿಂದ ಸಂಗೀತ ವಿದ್ಯಾಲಯವು ಮೈಸೂರ ಸರಕಾರದಿಂದಲೂ ಮನ್ನಣೆ ಪಡೆದ ಸಂಸ್ಥೆಯಾಗಿದೆ.

ಶ್ರೀ ಶೇಷಾದ್ರಿ ಗವಾಯಿಗಳ ಜನ್ಮಸ್ಥಾನ ದಾವಣಗೆರೆ. ಅವರು ಸ್ಮಾರ್ತ ಬ್ರಾಹ್ಮಣರು. ಗುರುವರ್ಯ ಶ್ರೀ ಪಂಚಾಕ್ಷರ ಗವಾಯಿಗಳು ಮತ್ತು ಶ್ರೀ ಪುಟ್ಟರಾಜ ಗವಾಯಿಗಳವರ ಕೃಪೆಯಿಂದಲೇ ಅವರು ಸಂಗೀತ ಕ್ಷೇತ್ರದಲ್ಲಿ ಅದ್ವಿತೀಯ ಕೀರ್ತಿಯನ್ನು ಪಡೆಯುತ್ತಿದ್ದಾರೆ.

ಶ್ರೀ ರಂಗಪ್ಪ ಮಾಸ್ತರ, ಗುಡೂರು ಅವರು ಪಂ. ಪಂಚಾಕ್ಷರ ಗವಾಯಿಗಳಲ್ಲಿ ೧೯೩೫ ರಿಂದ ೧೯೪೪ ರ ವರೆಗೆ ಶಿಕ್ಷಣ ಪಡೆದು ಶಹನಾಯಿ, ಕೊಳಲು, ಸುಂದರಿ



ಕ್ಲಾರೋನೆಟ್, ಹಾರ್ಮೋನಿಯಂ, ಮತ್ತು ತಬಲಾ ವಾದ್ಯಗಳಲ್ಲಿ ನೈಪುಣ್ಯ ಸಂಪಾದಿಸಿದರು. ಪಂ. ಪುಟ್ಟರಾಜ ಗವಾಯಿಗಳ ಆಶೀರ್ವಾದ ಪಡೆದು ಕರ್ನಾಟಕದಲ್ಲೆಲ್ಲ ಸಂಚರಿಸಿ ಅನೇಕ ಕಲಾಪ್ರೇಮಿಗಳಿಂದ ಪ್ರಶಸ್ತಿಗಳನ್ನು ಪಡೆದಿರುವರು. ಆಗಾಗ ಆಕಾಶವಾಣಿಯ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸುತ್ತಾರೆ. ಗುಡೂರಲ್ಲಿ (ತಾ. ಹುನಗುಂದ) ಸಂಗೀತಶಾಲೆಯನ್ನು ಸ್ಥಾಪಿಸಿ ನೂರಾರು ವಿದ್ಯಾರ್ಥಿಗಳಿಗೆ ವಾದ್ಯವಿದ್ಯೆಯನ್ನು ಕಲಿಸಿ ಸಂಗೀತ ವಾದ್ಯ ಕಲೆಯ ಸೇವೆಯನ್ನು ಮಾಡುತ್ತಿದ್ದಾರೆ.



ದೊಡ್ಡಬಸವಾರ್ಯ ಗವಾಯಿ, ಹಿರೇಮಠ ಮಲ್ಲಾಪುರ ಅವರು ಶ್ರೀ ಗವಾಯಿಗಳವರಲ್ಲಿ ಒಂಬತ್ತು ವರ್ಷಗಳವರೆಗೆ ಶಿಕ್ಷಣ ಪಡೆದವರು. ಅವರು ಪಂ. ಪುಟ್ಟರಾಜ ಗವಾಯಿಗಳವರಿಂದ ಹಾರ್ಮೋನಿಯಂ ಮತ್ತು ತಬಲಾವಾದ್ಯಗಳನ್ನು ಕಲಿತು ಪ್ರವೀಣರಾಗಿದ್ದಾರೆ. ಈಗ ಅವರು ಆದವಾನಿ ಪ್ರಾಂತದಲ್ಲಿ ಸಂಗೀತ ಕಲೆಯ ಪ್ರಚಾರ ಮಾಡುತ್ತಿದ್ದಾರೆ. ಅನೇಕ ಸಂಗೀತ ಕಚೇರಿಗಳಲ್ಲಿ ಪ್ರಶಸ್ತಿಗಳನ್ನು ಪಡೆದು ಜನಪ್ರಿಯರಾಗಿದ್ದಾರೆ. ಆಕಾಶವಾಣಿ ಕೇಂದ್ರಗಳಲ್ಲಿಯೂ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ.



ಶ್ರೀ ಪಂಚಾಕ್ಷರಸ್ವಾಮಿ ಪಂಚಾಕ್ಷರಮಠ, ಮತ್ತಿಗಟ್ಟಿ ಅವರು ಸಂಗೀತ ಕಲೆಯನ್ನು ಆನುವಂಶಿಕವಾಗಿ ಪಡೆದವರು. ಇವರ ತಂದೆಯವರೂ ಸಂಗೀತಗಾರರು. ಚಿಕ್ಕಂದಿನಲ್ಲಿಯೇ ಇವರ ಕಂಠಮಾಧುರ್ಯವನ್ನು ಕಂಡು ಜನ ಮೆಚ್ಚಿತು. ಗ್ರಾಮದ ನಾಟಕಗಳಲ್ಲಿ ಇವರು ಇಂಪಾಗಿ ಹಾಡುತ್ತಿದ್ದರು. ಇವರ ದೈವದತ್ತ ಕಲೆಯು ಶಾಸ್ತ್ರೀಯವಾಗಿ ಬೆಳೆಯಲೆಂಬ ಬಯಕೆಯಿಂದ ಕಕ್ಕಂದಿರ ಪ್ರೇರಣೆಯಂತೆ ಗದಗಿನಲ್ಲಿ ಪಂ. ಪಂಚಾಕ್ಷರ ಗವಾಯಿಗಳ ಆಶ್ರಯವನ್ನು ಪಡೆದರು. ಏಕನಿಷ್ಠೆ ಮತ್ತು ಸತತ ಪ್ರಯತ್ನದಿಂದ ಹನ್ನೆರಡು ವರ್ಷಗಳ ವರೆಗೆ ಸಂಗೀತ ವಿದ್ಯೆಯನ್ನು ಸಾಧಿಸಿದರು. ನಂತರ ಪಂ. ಪುಟ್ಟರಾಜ ಗವಾಯಿಗಳಲ್ಲಿಯೂ ಏಳು ವರ್ಷಗಳವರೆಗೆ ಉತ್ತರಾದಿ

ಸಂಗೀತದ ಅಭ್ಯಾಸವನ್ನೂ ಮಾಡಿದರು. ಗುರುಗಳ ಅಪ್ಪಣೆಯಂತೆ ಕೆಲವು ವರ್ಷ ವಿದ್ಯಾಲಯದಲ್ಲಿ ಶಿಕ್ಷಕರಾಗಿಯೂ ಸೇವೆ ಮಾಡಿದರು. ಇವರ ಮಧುರಕಂಠ ದೈವ ದತ್ತ ದೇಣಿಗೆ. ೧೯೪೭ ರಿಂದ ಧಾರವಾಡದ ಆಕಾಶವಾಣಿ ಕೇಂದ್ರದಲ್ಲಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. ಇವರು ಅನೇಕ ಕಡೆ ಸಂಗೀತ ಕಚೇರಿ ಗಳನ್ನು ಮಾಡಿ ಪ್ರಶಸ್ತಿಗಳನ್ನ ಪಡೆದಿರುವರು. 'ಸತ್ಯಧರ್ಮ ಪರಿಷತ್ತಿ'ನ ಸಂಸ್ಥಾಪಕ ರಾದ ನವಿಲುಗುಂದದ ಶ್ರೀ ಮ. ನಿ. ಪ್ರ. ಬಸವಲಿಂಗಸ್ವಾಮಿಗಳವರು ಇವರ ಸಂಗೀತವನ್ನು ಮೆಚ್ಚಿ 'ಸಂಗೀತ ಕಲಾನಿಧಿ' ಎಂಬ ಪ್ರಶಸ್ತಿಯನ್ನು ದಯಪಾಲಿಸಿ ರುವರು. ಇವರು ನಾಟ್ಯಕಲೆಯಲ್ಲಿಯೂ ನಿಷ್ಣಾತರು. ಶ್ರೀ ಮತ್ತಿಗಟ್ಟಿ ಅವರ ಕಲೆ ಬಹುಮುಖವಾಗಿ ಪ್ರಗತಿ ಸಾಧಿಸಿವೆ,



ಶ್ರೀ ಪ್ರಭಯ್ಯ ಅಡಿವೆಯ್ಯ ಸಾಲಿಮಠ, ದಾಟನಾಳ (ತಾ. ನವಿಲಗುಂದ) ಅವರು ೧೯೩೮ ರಿಂದ ೧೯೪೮ ರ ವರೆಗೆ ಶ್ರೀ ಗವಾಯಿಗಳವರಲ್ಲಿ ಉತ್ತ ರಾದಿ ಸಂಗೀತವನ್ನು ಅಭ್ಯಸಿಸಿದರು ಪುಣೆಯ 'ಅ. ಭಾ. ಗಾಂಧರ್ವಮಹಾಮಂಡಲ'ದ 'ಸಂಗೀತ ವಿಶಾರದ' ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರಶಸ್ತಿಯನ್ನು ಪಡೆದಿರು ವರು. ೧೯೫೦ರಿಂದ ಧಾರವಾಡದ ಆಕಾಶವಾಣಿ ಕೇಂದ್ರ ದಲ್ಲಿಯ ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗ ವಹಿಸುತ್ತಿರುವರು. ಈಗ ಅವರು ತಾಳಿಕೋಟಿ (ಜಿ. ವಿಜಾಪುರ)ಯಲ್ಲಿ ಶ್ರೀ ಖಾಸ್ಗತೇಶ ಸಂಗೀತ ಪಾಠಶಾಲೆಯನ್ನು ನಡೆಯಿಸಿ ಅಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಜಾತೀಯತೆ ಯನ್ನು ಎಣಿಸದೆ ವಿದ್ಯಾದಾನ ಮಾಡುತ್ತಿರುವರು. ಅಲ್ಲಿಯ ಶ್ರೀ ಎಸ್. ಕೆ. ಹಾಯಸ್ಕೂಲಿನಲ್ಲಿ ಸಂಗೀತ ಶಿಕ್ಷಕರಾಗಿಯೂ ಸೇವೆ ಸಲ್ಲಿಸುತ್ತಿರುವರು.



ಶ್ರೀ ಕರಿಯಪ್ಪ ಶಿವಪ್ಪ ಮುಲ್ಲಾಪುರ ಅವರು ತಮ್ಮ ೧೨ ನೆಯ ವಯಸ್ಸಿನಲ್ಲಿಯೇ ಶ್ರೀ ಪಂಚಾಕ್ಷರ ಗವಾಯಿಗಳ ಶಿಷ್ಯತ್ವವನ್ನು ಪಡೆ ದರು. ಇವರ ಅಜ್ಜನವರು ಚರ್ಮವಾದ್ಯದಲ್ಲಿ ಬಹು ನಿಪುಣರಾಗಿದ್ದರು. ಈ ಆನುವಂಶಿಕ ಸಂಸ್ಕಾರ ಶ್ರೀ ಕರಿಯಪ್ಪನವರಲ್ಲಿ ತಬಲಾವಾದನದ ಅಭಿರುಚಿ ಯನ್ನು ಹುಟ್ಟಿಸಿತು: ಇವರು ಏಳು ವರ್ಷಗಳ ವರೆಗೆ ಶ್ರೀ ಗವಾಯಿಗಳಲ್ಲಿ ಶಿಕ್ಷಣ ಪಡೆದನಂತರ

ಕಾಶಿಯ ಭಾರತ ಪ್ರಸಿದ್ಧ ತಬಲಾ ವಾದಕರಾಗಿದ್ದ ಶ್ರೀ ಅನೋಖೆಲಾಲ್ ಅವರಲ್ಲಿ ೪ ವರ್ಷ ವಾದನ ಕಲೆಯನ್ನು ಅಭ್ಯಾಸ ಮಾಡಿದರು, ಆದರ್ಶ ಕಲಾವಂತರಾಗಿ ಮಾತೃಭೂಮಿಗೆ ಮರಳಿದರು. ಕಾಶಿಯಲ್ಲಿ ಇವರು ಶ್ರೀ ಇಲಕಲ್ಲ ಮಹಾಂತ ದೇವರ (ಈಗಿನ ಹುಬ್ಬಳ್ಳಿಯ ಮೂರುಸಾವಿರಮಠದ ಅಧಿಪತಿಗಳಾದ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು) ಉದಾರ ಆಶ್ರಯವನ್ನು ಹೊಂದಿದ್ದರು. ಶ್ರೀ ಕರಿಯಪ್ಪನವರು ಅನೇಕ ಕಾರ್ಯಕ್ರಮಗಳಲ್ಲಿ ಕಲಾವಂತಿಕೆಯನ್ನು ಪ್ರದರ್ಶಿಸಿ ಕಲಾಪ್ರಿಯರಿಂದ ಮನ್ನಣೆಯನ್ನು ಪಡೆದಿರುವರು. ಅವರೀಗ ಬಾಗಲಕೋಟೆಯಲ್ಲಿ 'ನಟರಾಜ ಸಂಗೀತ ಕಲಾಮಂದಿರ' ಎಂಬ ಸಂಗೀತ ವಿದ್ಯಾಲಯವನ್ನು ಸ್ಥಾಪಿಸಿ ವಾದನ ವಿದ್ಯೆಯ ಪ್ರಸಾರ ಕಾರ್ಯವನ್ನು ಕೈಕೊಂಡಿರುವರು.



ಶ್ರೀ ಕೊಟ್ರೇಶಸ್ವಾಮಿ. ಗವಾಯಿ ಚಿಗಟೇರಿ ಅವರು ಗವಾಯಿಗಳಲ್ಲಿ ಹತ್ತು ವರ್ಷ ಗಾಯನ, ವಾದ್ಯ (ಹಾರ್ಮೋನಿಯಂ, ತಬಲಾ), ಜ್ಯೋತಿಷ್ಯವನ್ನೂ ಕಲಿತರು. ೧೯೪೯ ರಿಂದ ರೇಡಿಯೋ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. 'ಪಂಚಾಕ್ಷರ ಸಂಗೀತ ವಿದ್ಯಾಲಯ' ವನ್ನು ಸ್ಥಾಪಿಸಿ ೧೫ ವಿದ್ಯಾರ್ಥಿಗಳಿಗೆ ಸಂಗೀತಪಾಠ ಹೇಳಿಕೊಡುತ್ತಿರುವರು. ಶ್ರೀ ಕೊಟ್ರಯ್ಯ ಸ್ವಾಮಿಗಳು ಬಳ್ಳಾರಿ ಜಿಲ್ಲೆಯಲ್ಲಿ ಸಂಗೀತ ಕಲೆಯ ಪ್ರಸಾರವನ್ನು ಮಾಡಿ ಸಂಗೀತ ಪ್ರಪಂಚಕ್ಕೆ ಸ್ತುತ್ಯವಾದ ಸೇವೆ ಸಲ್ಲಿಸುತ್ತಿರುವರು.



ಶ್ರೀ ಸಿದ್ದೇಶಕುಮಾರ ತೆಲಗಿ (ಜಿ. ಬಳ್ಳಾರಿ) ಅವರು ಶ್ರೀ ಪಂಚಾಕ್ಷರ ಗವಾಯಿಗಳವರ ಪ್ರತಿಭಾವಂತ ತಬಲಾವಾದಕ ಶಿಷ್ಯರಲ್ಲಿ ಒಬ್ಬರು. ಅವರು ಗುರುಗಳಲ್ಲಿ ಹತ್ತುವರ್ಷ ಅವ್ಯಾಹತವಾಗಿ ಈ ವಿದ್ಯೆಯ ಸಾಧನೆಯನ್ನು ಮಾಡಿ ಪರಿಪೂರ್ಣತೆಯನ್ನು ಸಾಧಿಸಿದವರು. ಶ್ರೀ ಸಿದ್ಧೇಶಕುಮಾರರು ಗವಾಯಿಗಳವರ ಕೃಪೆಗೆ ಪಾತ್ರರಾದ ಭಾಗ್ಯಶಾಲಿ ಕಲೆಗಾರರು. ಅಂತೆಯೆ ಅವರು ಭಾರತದಲ್ಲೆಲ್ಲ. ದೊಡ್ಡ ದೊಡ್ಡ ಸಂಗೀತ ಕಚೇರಿಗಳಲ್ಲಿ ಹೆಸರಾಂತ ವಿದ್ವಾಂಸ ಸಂಗೀತಗಾರರ

ಜೊತೆಯಲ್ಲಿ ತಬಲಾ ನುಡಿಸಿ ಸಾಕಷ್ಟು ಪ್ರಶಸ್ತಿಗಳನ್ನು ಪಡೆದಿರುವರು. ಅವರೀಗ ಮದ್ರಾಸ ಆಕಾಶವಾಣಿ ಕೇಂದ್ರದಲ್ಲಿ ಮೊದಲನೆಯ ಶ್ರೇಣಿಯ ಕಲಾಕಾರರಾಗಿ ಸೇವೆ ಸಲ್ಲಿಸುತ್ತಿರುವರು. ಕನ್ನಡ, ತೆಲಗು, ಹಿಂದೀ ಚಲಚಿತ್ರ ಗಳಲ್ಲಿ ತಬಲಾ, ಜಲತರಂಗ, ಪಖಾವಜ ಢೋಲ್, ಢೋಲ್, ಡೊಲ್ಕಿ ಇವೆಲ್ಲ ವಾದ್ಯಗಳನ್ನು ಕಲಾಮಯವಾಗಿ ನುಡಿಸುತ್ತಾರೆ- ಸೇವೆ-ಸೌಜನ್ಯಗಳಿಂದ ಗುರುವಿನ ಮನವೊಲಿಸಿ ವಿದ್ಯೆಯಲ್ಲಿ ಪರಿಣತೆಯನ್ನು ಸಂಪಾದಿಸಿದ ಆದರ್ಶ ಕಲೆಗಾರರು ಶ್ರೀ ಸಿದ್ಧೇಶಕುಮಾರರು. ಪರಪ್ರಾಂತದಲ್ಲಿಯೂ ಕನ್ನಡನಾಡ ಕಲೆಯನ್ನು ಪ್ರಚುರ ಗೊಳಿಸುತ್ತಿರುವ ಈ ತರುಣ ಕಲಾವಂತರ ಧೈರ್ಯ ಹಿರಿಯದು.



ಶ್ರೀ ಬಿ. ಮರಿಯಪ್ಪ ಕೋಣ ಅವರು ಪ್ರಸಿದ್ಧ ಬಜಂತ್ರಿ ಮನೆತನದವರು. ತಮ್ಮ ಆನು ವಂಶಿಕ ಕಲೆಯನ್ನು ವಿಶಿಷ್ಟವಾಗಿ ಸಾಧಿಸಲು ಶ್ರೀ ಗವಾಯಿಗಳವರಲ್ಲಿ ಬಂದು ಶಿಷ್ಯತ್ವ ವಹಿಸಿದರು. ಶಹನಾಯಿ ಮತ್ತು ಕೊಳಲು ವಾದ್ಯಗಳ ಶಿಕ್ಷಣವನ್ನು ಶಾಸ್ತ್ರೀಯವಾಗಿ ಪಡೆದರು. ಇವರು ಶ್ರೀ ಗವಾಯಿ ಗಳ ನಿತ್ಯದ ಮುಂಜಾನೆಯ ಶಿವಪೂಜೆಯ ವೇಳೆಯಲ್ಲಿ ಶಹನಾಯಿ ಮತ್ತು ಕೊಳಲುಗಳನ್ನು ಇಂಪಾಗಿ ನುಡಿಯಿ ಸುತ್ತಿದ್ದರು: ಗುರುವಿನ ಅನುಗ್ರಹವಾಗಿ ಸಾಕಷ್ಟು ಪಾಂಡಿತ್ಯ ಮತ್ತು ಕಲೆಯನು ಸಂಪಾದಿಸಿದರು. ಇವರಿಗೆ ಕೆಲವು ವರ್ಷ ಗುರುಗಳ ಸಂಗೀತ ವಿದ್ಯಾಲಯ ದಲ್ಲಿಯೇ ಶಿಕ್ಷಕರಾಗಿಯೂ ಸೇವೆ ಸಲ್ಲಿಸುವ ಭಾಗ್ಯ ಲಭಿಸಿತು.

ಕಲಾವಂತ ಮರಿಯಪ್ಪನವರಿಗೆ ಜನ ಮೆಚ್ಚುಗೆ ತಾನಾಗಿಯೆ ಬಂದಿತು. ೧೯೪೬ ರಲ್ಲಿ ಬೆಳಗಾಂವಿಯ ಆರ್ಟ ಸರ್ಕಲ್ಲಿನಲ್ಲಿ ತಮ್ಮ ಕಲಾಪ್ರೌಢಿಮೆಯನ್ನ ಪ್ರದರ್ಶಿಸಿ ಮನ್ನಣೆ ಪಡೆದರು. 'ವೇಣುವಾದನ ಪಟು'ಗಳಾದ ಇವರು ಮದ್ರಾಸ ಮೈಸೂರ, ಬೆಂಗಳೂರ, ಬಳ್ಳಾರಿ, ಸೊಲ್ಲಾಪುರ, ಹಾವೇರಿ ಮೊದಲಾದ ನಗರ ಗಳಲ್ಲಿ ಕಲಾಪ್ರೇಮಿಗಳಿಂದ ಗೌರವ ಪ್ರಶಸ್ತಿಗಳನ್ನು ಪಡೆದಿರುವರು. ಇವರಲ್ಲಿ ಅಭಿನಯಕಲೆಯೂ ಸಹಜವಾಗಿ ವಿಕಾಸಗೊಂಡಿದೆ. ಹಾಸ್ಯ ಪಾತ್ರಗಳಲ್ಲಿ ಚೆನ್ನಾಗಿ ನಟಿಸುತ್ತಾರೆ. 'ವಿನೋದ ರತ್ನ'ವೆಂಬ ಹೆಸರೂ ಅವರಿಗೆ ಸಾರ್ಥಕವಾಗಿದೆ.



ಶ್ರೀ ಸಿದ್ದರಾಮಸ್ವಾಮಿ ಕೊರವಾರ: ಪಂ. ಪಂಚಾಕ್ಷರ ಗವಾಯಿಗಳ ಕೃಪಾಕಾಶದಲ್ಲಿ ಬೆಳಗುತ್ತಿರುವ ಜ್ಯೋತಿಗಳಲ್ಲಿ ಶ್ರೀ ಸಿದ್ಧರಾಮಸ್ವಾಮಿ ಕೋರವಾರ ಅವರೂ ಒಬ್ಬರು. ಇವರಲ್ಲಿಯ ದೈವದತ್ತ ಸಂಗೀತ ಕಲೆ ಪಂ. ಪುಟ್ಟರಾಜ ಗವಾಯಿಗಳ ಕಾರುಣ್ಯದಲ್ಲಿ ಪರಿಪುಷ್ಟವಾಗಿ ಬೆಳೆಯಿತು. ಎಳೆಯ ವಯಸ್ಸಿನಲ್ಲಿಯೆ ಆಕಾಶವಾಣಿಯ ಕಲಾಕಾರರಾಗಿ ಮೂಡಿ ಬಂದರು. ಇವರು ಮುಂಬಯಿಯ ಅ. ಭಾ. ಗಂಧರ್ವ ಮಹಾ ವಿದ್ಯಾಲಯದ 'ಅಲಂಕಾರ'ವೆಂಬ ಉಚ್ಚ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಸಂಗೀತ ಪಾಂಡಿತ್ಯವನ್ನು ಪಡೆದಿರುವರು. ಇವರು ನಾಟ್ಯ ಮತ್ತು ವಾದನ ಕಲೆಯಲ್ಲಿಯೂ ಪರಿಣಿತರು. ಇವರು ಅನೇಕ ಸಂಗೀತ ಸಭೆಗಳಲ್ಲಿ ಭಾವಪೂರ್ಣ ಮತ್ತು ಲಲಿತ ರಾಗಗಳನ್ನು ಹಾಡಿ ಕಲಾಪ್ರಿಯರಿಗೆ ಶ್ರೋತೃಗಳಿಗೆ ಮನದಣಿ ರಸಾಸ್ವಾದನೆ ನೀಡಿದ್ದಾರೆ; ಜನಪ್ರಿಯ ಗಾಯಕರಾಗಿದ್ದಾರೆ. ಇವರು ತಮ್ಮ ಗುರುವರ್ಯ ರಾದ ಪಂ. ಪುಟ್ಟರಾಜ ಗವಾಯಿಗಳವರ ವಿದ್ಯಾಲಯದಲ್ಲಿ ಶಿಕ್ಷಕರಾಗಿಯೂ ಸೇವೆ ಸಲ್ಲಿಸುತ್ತಿರುವರು. ಶ್ರೀ ಕೊರವಾರ ಅವರ ಕಲಾಸರಸ್ವತಿಯ ಆರಾಧನೆ ನಿರಾತಂಕವಾಗಿ ಪರಮಾದರ್ಶವಾಗಿ ಸಾಗಿದೆ. ಅವರೊಬ್ಬ ಉದಯೋನ್ಮುಖ ಪ್ರತಿಭಾವಂತ ಕಲಾವಂತರು. ಅವರೀಗ ಭೋಪಾಲದ ಆಕಾಶವಾಣಿ ಕೇಂದ್ರದಲ್ಲಿ ಉಚ್ಚಶ್ರೇಣಿಯ ಕಲಾಕಾರರಾಗಿರುವರು.

ಶ್ರೀ ಯಲ್ಲಪ್ಪ ಅಮರಗೋಳ ಅವರು ಕರ್ನಾಟಕದ ಪ್ರಸಿದ್ಧ ಶಹನಾಯಿ ವಾದನ ಪಟುಗಳು. ಅವರು. ಶ್ರೀ ಪಂಚಾಕ್ಷರಿ ಮತ್ತು ಶ್ರೀ ಪುಟ್ಟರಾಜ ಗವಾಯಿಗಳ ವರಲ್ಲಿ ಶಹನಾಯಿ, ಕೊಳಲು ಮೊದಲಾದ ವಾದ್ಯಗಳನ್ನು ಶಾಸ್ತ್ರೀಯವಾಗಿ ಕಲಿತರು. ಆ ಮೇಲೆ ಕಾಶಿಗೆ ಹೋಗಿ ಭಾರತ ಪ್ರಸಿದ್ಧ ಶಹನಾಯಿವಾದಕರಾದ ಉಸ್ತಾದ ಬಿಸ್ಮಿಲ್ಲಾ ಖಾನ್ ಅವರಲ್ಲಿ ಶಹನಾಯಿವಾದನ ಕಲೆಯನ್ನು 'ವಿಶಿಷ್ಟವಾಗಿ ಅಭ್ಯಾಸ ಮಾಡಿದರು. ಉಸ್ತಾದ ಖಾನ್‌ರವರ ಪ್ರೀತಿಯ ಶಿಷ್ಯರಾದರು. ಶಹನಾಯಿ ವಾದನ ಕಲೆಯಲ್ಲಿ ಶ್ರೀ ಅಮರಗೋಳಕರ ಅವರು ಸಾಧಿಸಿರುವ ಪ್ರಗತಿ ಅದ್ವಿತೀಯವಾದುದು. ಅವರ ಶಹನಾಯಿಯ ಸ್ವರಮಾಧುರ್ಯವನ್ನು ಕೇಳಿ ಮುಗ ನಾಗದ ಕನ್ನಡಿಗರಿಲ್ಲ. ಅವರು ಕಾಶಿಯಲ್ಲಿರುವಾಗಲೇ ಅನೇಕ ಸಂಗೀತ ಸಮ್ಮೇಲನ ಗಳಲ್ಲಿ ಭಾಗವಹಿಸಿ ಪ್ರಶಸ್ತಿಗಳನ್ನು ಪಡೆದಿರುವರು. ಈಗ ಅವರು ಕರ್ನಾಟಕ ದಲ್ಲಿ ಈ ವಾದ್ಯವಿದ್ಯೆಯ ಪ್ರಸಾರ ಮಾಡುತ್ತಿರುವರು. ಶ್ರೀ ಅಮರಗೋಳಕರ

ಅವರ ಶಹನಾಯಿವಾದನವನ್ನು ಕೇಳುವದೆಂದರೆ ಕಲಾಪ್ರಿಯರಿಗೆ ಅದೊಂದು ರಸದೂಟ. ಶಹನಾಯಿ ಎಂದರೆ ಜನತೆಯಲ್ಲಿ ಅದೊಂದು ಮದುವೆ ಮುಂಜಿಗಳಲ್ಲಿ ಬಾರಿಸುವ ಸಾಮಾನ್ಯ ವಾದ್ಯವೆಂದು ಅನಾದರ ಮೂಡಿತ್ತು. ಆದರೆ ಶ್ರೀ ಅಮರಗೋಳಕರ ಅವರ ಶಹನಾಯಿಯ ತಾನಮಯ ವಾದನವನ್ನು ಕೇಳಿದ ಮೇಲೆ ಅದು ಒಂದು ಪ್ರಾಚೀನ ಮತ್ತು ಶಾಸ್ತ್ರೀಯ ಭಾರತವಾದ್ಯ; ಅದರಲ್ಲಿಯೂ ಕಲೆಗಾರಿಕೆ ಇದೆ ಎಂಬುದು ಮನವರಿಕೆಯಾಗದೆ ಇರದು. ಶ್ರೀ ಅಮರಗೋಳಕರರು ಶಹನಾಯಿವಾದನದಲ್ಲಿ ತಮ್ಮದೇ ... ಷ್ಟ ಕಲಾ ಪ್ರೌಢಿಮೆಯನ್ನು ಪಡೆದಿದ್ದಾರೆ.



ಶ್ರೀ ಅರ್ಜುನಸಾ ವೆಂಕ... ಕೋ... ಅವರು ಶ್ರೀ ಗವಾಯಿಗಳವರಲ್ಲಿ ... ರ ವರೆಗೆ ಹಿಂದುಸ್ತಾನಿ ಶಾಸ್ತ್ರೀ... ಅಭ್ಯಾಸ ಮಾಡಿ ಕಿರಾನಾ ... ಒಳ್ಳೆಯ ಸಂಗೀತಗಾರರೆಂದು ... ಆ. ಭಾ. ಆಕಾಶವಾಣಿಯ ಧ... ಬೆಂಗಳೂರು ಮತ್ತು ದಿಲ್ಲಿಯ ... ಕಾರ್ಯಕ್ರಮಗಳು ಬಹಳ ಜ... ಅ. ಭಾ. ಸಂಗೀತ ಸಮ್ಮೇಲನದಲ್ಲಿಯೂ ಭಾಗವಹಿಸಿ... ಬಸವೇಶ್ವರ ವಚನಗಳು ಮತ್ತು ಭಾವಗೀತೆಗಳ ಧ್ವ... ವಾಣಿಯ ವಿವಿಧ ಭಾರತಿಯ ರೂಪದಲ್ಲಿ ಪ್ರಸಾರಗೊ... ಪುಟ್ಟರಾಜ ಗವಾಯಿಗಳವರ ಪ್ರೀತಿಯ ಶಿಷ್ಯರಾಗಿಯ... ಅರ್ಜುನಸಾ ಅವರ ಭವಿಷ್ಯ ಉಜ್ವಲವಾಗಿದೆ.

ಶ್ರೀ ಬಸವರಾಜ ತಾಳಕೇರಿ ಅವರು ... ಗವಾಯಿಗಳವರ ಕೃಪಾಶ್ರಯದಲ್ಲಿದ್ದು ಸಾಹಿತ್ಯ, ಸಂಗೀ... ಅಭಿನಯಕಲೆಗಳನ್ನು ಅಭ್ಯಾಸ ಮಾಡಿದ ಕಲಾವಿದ... ಇವರು ರಾಯಚೂರ ಜಿಲ್ಲೆಯ ಕುಷ್ಟಗಿ ತಾಲ್ಲೂ... ತಾಳಕೇರಿ ಗ್ರಾಮದವರು. ಚಿಕ್ಕಂದಿನಲ್ಲಿಯೆ ... ಡ್ಲಿರುವ ಕಲೆಯನ್ನು ಕಂಡ ಶ್ರೀ ಮೃತ್ಯುಂಜಯಸ್ವಾ... ಪುರಾಣಿಕಮಠ ಅವರು ೧೯೪೧ ರಲ್ಲಿ ಇವರನ್ನು ... ಗಳ ಸನ್ನಿಧಾನಕ್ಕೆ ತಂದುಬಿಟ್ಟರು. ಶ್ರೀ ...

ಅವರ ಶಹನಾಯಿವಾದನವನ್ನು ಕೇಳುವದೆಂದರೆ ಕಲಾಪ್ರಿಯರಿಗೆ ಅದೊಂದು ರಸದೂಟ. ಶಹನಾಯಿ ಎಂದರೆ ಜನತೆಯಲ್ಲಿ ಅದೊಂದು ಮದುವೆ ಮುಂಜಿಗಳಲ್ಲಿ ಬಾರಿಸುವ ಸಾಮಾನ್ಯ ವಾದ್ಯವೆಂದು ಅನಾದರ ಮೂಡಿತ್ತು. ಆದರೆ ಶ್ರೀ ಅಮರಗೋಳಕರ ಅವರ ಶಹನಾಯಿಯ ತಾನಮಯ ವಾದನವನ್ನು ಕೇಳಿದ ಮೇಲೆ ಅದು ಒಂದು ಪ್ರಾಚೀನ ಮತ್ತು ಶಾಸ್ತ್ರೀಯ ಭಾರತವಾದ್ಯ; ಅದರಲ್ಲಿಯೂ ಕಲೆಗಾರಿಕೆ ಇದೆ ಎಂಬುದು ಮನವರಿಕೆಯಾಗದೆ ಇರದು. ಶ್ರೀ ಅಮರಗೋಳಕರರು ಶಹನಾಯಿವಾದನದಲ್ಲಿ ತಮ್ಮದೇ ಆದ ವಿಶಿಷ್ಟ ಕಲಾ ಪ್ರೌಢಿಮೆಯನ್ನು ಪಡೆದಿದ್ದಾರೆ.



ಶ್ರೀ ಅರ್ಜುನಸಾ ವೆಂಕೋಸಾ ನಾಕೋಡ ಅವರು ಶ್ರೀ ಗವಾಯಿಗಳವರಲ್ಲಿ ೧೯೪೧ ರಿಂದ ೧೯೪೭ರ ವರೆಗೆ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿ ಕಿರಾನಾ ಘರಾಣೆಯ ಶೈಲಿಯ ಒಳ್ಳೆಯ ಸಂಗೀತಗಾರರೆಂದು ಪ್ರಸಿದ್ಧಿ ಪಡೆದಿರುವರು. ಅ. ಭಾ. ಆಕಾಶವಾಣಿಯ ಧಾರವಾಡ, ಮೈಸೂರು, ಬೆಂಗಳೂರು ಮತ್ತು ದಿಲ್ಲಿಯ ಕೇಂದ್ರಗಳಲ್ಲಿಯ ಇವರ ಕಾರ್ಯಕ್ರಮಗಳು ಬಹಳ ಜನಪ್ರಿಯವಾಗಿವೆ. ಇವರು ಅ. ಭಾ. ಸಂಗೀತ ಸಮ್ಮೇಲನದಲ್ಲಿಯೂ ಭಾಗವಹಿಸಿದ್ದಾರೆ. ಇವರು ಹಾಡಿದ ಬಸವೇಶ್ವರ ವಚನಗಳು ಮತ್ತು ಭಾವಗೀತೆಗಳ ಧ್ವನಿಮುದ್ರಿಕೆಗಳು ಆಕಾಶವಾಣಿಯ ವಿವಿಧ ಭಾರತಿಯ ರೂಪದಲ್ಲಿ ಪ್ರಸಾರಗೊಳ್ಳುತ್ತಿವೆ. ಇವರು ಪಂ. ಪುಟ್ಟರಾಜ ಗವಾಯಿಗಳವರ ಪ್ರೀತಿಯ ಶಿಷ್ಯರಾಗಿಯೂ ಶಿಕ್ಷಣ ಪಡೆದವರು. ಅರ್ಜುನಸಾ ಅವರ ಭವಿಷ್ಯ ಉಜ್ವಲವಾಗಿದೆ.

ಶ್ರೀ ಬಸವರಾಜ ತಾಳಕೇರಿ ಅವರು ಶ್ರೀ ಗವಾಯಿಗಳವರ ಕೃಪಾಶ್ರಯದಲ್ಲಿದ್ದು ಸಾಹಿತ್ಯ, ಸಂಗೀತ ಅಭಿನಯಕಲೆಗಳನ್ನು ಅಭ್ಯಾಸ ಮಾಡಿದ ಕಲಾವಿದರು. ಇವರು ರಾಯಚೂರ ಜಿಲ್ಲೆಯ ಕುಷ್ಟಗಿ ತಾಲೂಕಿನ ತಾಳಕೇರಿ ಗ್ರಾಮದವರು. ಚಿಕ್ಕಂದಿನಲ್ಲಿಯೆ ಇವರಲ್ಲಿರುವ ಕಲೆಯನ್ನು ಕಂಡ ಶ್ರೀ ಮೃತ್ಯುಂಜಯಸ್ವಾಮಿ ಪುರಾಣಿಕಮಠ ಅವರು ೧೯೪೧ ರಲ್ಲಿ ಇವರನ್ನು ಗವಾಯಿಗಳ ಸನ್ನಿಧಾನಕ್ಕೆ ತಂದುಬಿಟ್ಟರು. ಶ್ರೀ ಪುಟ್ಟರಾಜ



ಗವಾಯಿಗಳ ಕೃಪೆಗೆ ಪಾತ್ರರಾಗಿ ಶ್ರೀ ತಾಳಿಕೇರಿ ಅವರು ಸಂಗೀತ ಸಾಹಿತ್ಯ ಗಳೆರಡರಲ್ಲಿಯೂ ಪರಿಣತಿಯನ್ನು ಪಡೆದರು. ಮುಂಬಯಿಯ ಗಂಧರ್ವ ಮಹಾ ವಿದ್ಯಾಲಯದ ಸಂಗೀತಪರೀಕ್ಷೆಗಳನ್ನು ಉತ್ತಮ ಶ್ರೇಣಿಯಲ್ಲಿ ಪಾಸು ಮಾಡಿದ್ದಾರೆ. ೨೦ ವರ್ಷ ಗವಾಯಿಗಳ ನಾಟ್ಯ ಸಂಘದಲ್ಲಿದ್ದು ಸೇವೆ ಸಲ್ಲಿಸಿದ್ದಾರೆ. ನಾಟ್ಯ ಸಂಘದ ದಿಗ್ದರ್ಶಕರಾಗಿಯೂ, ಲೇಖಕರಾಗಿಯೂ, ನಟರಾಗಿಯೂ ಅನೇಕ ಮುಖವಾಗಿ ಸೇವೆ ಸಲ್ಲಿಸಿದ್ದಾರೆ. 'ನೆಲ್ಲೂರ ನಂಬೆಕ್ಕ' 'ಹೇಮರಡ್ಡಿ ಮಲ್ಲಮ್ಮ' ಮೊದಲಾದ ಸಂಘದ ನಾಟಕಗಳಲ್ಲಿ ಸ್ತ್ರೀಪಾತ್ರಗಳನ್ನು ಯಶಸ್ವಿಯಾಗಿ ಅಭಿನಯಿ ಸಿದ್ದಾರೆ. ಇವರ ಕಲಾಜಾಣ್ಮೆಯನ್ನು ಮೆಚ್ಚಿ ಅನೇಕ ಸಂಘ ಸಂಸ್ಥೆಗಳು ಪ್ರಶಸ್ತಿಗಳನ್ನು ದಯಪಾಲಿಸಿವೆ. ಮುಂಬಯಿ, ಮೈಸೂರ ಸರಕಾರದ ಸಂಗೀತ ನಾಟಕ ಅಕಡೆಮಿಯವರಿಂದಲೂ 'ಶ್ರೇಷ್ಠ ಕಲಾವಿದ' ರೆಂಬ ಮನ್ನಣೆಯ ಪ್ರಶಸ್ತಿಗಳನ್ನು ಪಡೆದಿರುವರು. ಇವರು ಗಮಕ ಕಲೆಯಲ್ಲಿಯೂ ನಿಷ್ಣಾತರು. ಶರಣರ ವಚನಗಳನ್ನು, ಕನ್ನಡಕಾವ್ಯಗಳನ್ನು ಸರಾಗವಾಗಿ ಇಂಪಾಗಿ ಹಾಡುವ ಕೌಶಲವನ್ನು ಸಾಧಿಸಿದ್ದಾರೆ. ಇವರು ಅನೇಕ ಜನಪದ ಸಾಹಿತ್ಯ ಕೃತಿಗಳನ್ನು ರಚಿಸಿ ದ್ದಾರೆ. ಹಾಡುಗಾರಿಕೆಯಲ್ಲದೆ ತಬಲಾ, ಮೃದಂಗ, ಜಲತರಂಗ ಮೊದಲಾದ ವಾದ್ಯಗಳಲ್ಲಿಯೂ ನೈಪುಣ್ಯ ಗಳಿಸಿದ್ದಾರೆ. ಶ್ರೀ ತಾಳಕೇರಿ ಅವರು ಒಬ್ಬ ತರುಣ ಬಹುಮುಖ ಕಲಾವಿದರು.



ಶ್ರೀ ಸಂಗಮೇಶ್ವರ ಪಾಟಿಲ, ಗೂಡೂರು ಅವರು ಗವಾಯಿಗಳಲ್ಲಿ ಹತ್ತುವರ್ಷ ಸಂಗೀತ, ವಾದ್ಯ ಶಿಕ್ಷಣ ಪಡೆದರು. ಹಾರ್ಮೋನಿಯಂ ಮತ್ತು ಸಿತಾರವಾದನ ಕಲೆ ಯಲ್ಲಿ ನೈಪುಣ್ಯ ಸಂಪಾದಿಸಿ 'ಸಂಗೀತ ವಿಶಾರ'ದರಾಗಿ ದ್ದಾರೆ. ಈಗ ಹೈದರಾಬಾದದಲ್ಲಿರುವ 'ವಿವೇಕ ವರ್ಧಿನಿ ಸಂಗೀತ ಶಾಲೆ'ಯಲ್ಲಿ ಸಿತಾರ ಶಿಕ್ಷಕರಾಗಿದ್ದಾರೆ. ರೇಡಿಯೋ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ.

ಶ್ರೀ, ಚನ್ನಬಸವಯ್ಯನವರು ಜೇಕಿನಕಟ್ಟಿ, ಬಮ್ಮನಹಳ್ಳಿ ಅವರು ಗವಾಯಿಗಳ ನೆಚ್ಚಿನ ತಬಲಾವಾದನ ಪಟು ಶಿಷ್ಯರಲ್ಲಿ ಒಬ್ಬರು. ಅವರು ಗುರುಗಳ ಸೇವೆಯನ್ನು ಮಾಡುತ್ತ ತಬಲಾವಾದನ ಕಲೆಯನ್ನು ಅಖಂಡವಾಗಿ, ಹನ್ನೆರಡು



ವರ್ಷಗಳವರೆಗೆ ಸಾಧಿಸಿ ಸಿದ್ಧಿಯನ್ನು ಪಡೆದಿರುವರು. ಅವರು ಜನರಿಂದ ಮನ್ನಣೆಯನ್ನು ವಿದ್ವಾಂಸರಿಂದ ಪ್ರಶಸ್ತಿಗಳನ್ನೆಂದೂ ಬಯಸಿದವರಲ್ಲ. ನಿಸ್ಪೃಹಸೇವೆಯೆ ಅವರ ಜೀವನದ ಧ್ಯೇಯ. ಪ್ರತಿವರ್ಷವೂ ಶಿವರಾತ್ರಿಯ ಕಾಲಕ್ಕೆ ಮಂದಿರದ ಸಂಗೀತ ಕಾರ್ಯಕ್ರಮಗಳಲ್ಲಿ ಅವರ ಸೇವೆ ತಪ್ಪುವಂತಿಲ್ಲ. ಅವರೊಬ್ಬ ಸಾತ್ವಿಕ ಕಲಾವಂತರು.

ಶ್ರೀ ಪಂಪಾಪತಿ ಸ್ವಾಮಿ ಗವಾಯಿ ಒಡೆಯರ ಗೋವಿಂದವಾಡ (ಜಿ: ಅನಂತಪುರ) ಅವರು ಶ್ರೀ ಗವಾಯಿಗಳವರಲ್ಲಿ ಹಿಂದುಸ್ತಾನಿ ಸಂಗೀತದ ಅಭ್ಯಾಸ ಮಾಡಿದರು. ಇವರು ಶ್ರೀ ಪುಟ್ಟರಾಜ ಗವಾಯಿಗಳ ಮೆಚ್ಚಿನ ಶಿಷ್ಯರು ಆಂಧ್ರ ಮತ್ತು ಮಹಾರಾಷ್ಟ್ರ ಪ್ರಾಂತಗಳಲ್ಲಿ ಅನೇಕ ಕಡೆ ತಮ್ಮ ಸಂಗೀತ ಸುಧೆಯನ್ನು ಕಲಾಪ್ರಿಯ ಜನತೆಗೆ ಉಣಿಸಿ ತಣಿಸಿರುವರು. ಸೊಲ್ಲಾಪುರ ನಗರದಲ್ಲಿ ಅವರು ಪ್ರೋಗ್ರಾಮುಗಳನ್ನು ನಡೆಯಿಸಿದಾಗ ಬ್ಯಾರಿಸ್ಟರ್ ಶ್ರೀ ಸರದಾರ ಅವರು ಶ್ರೀ ಒಡೆಯರರ ಕಲಾವಂತಿಕೆಯನ್ನು ಮೆಚ್ಚಿ 'ಸಂಗೀತ ರತ್ನ' ವೆಂದು ಹರಿಸಿದರು. ಇವರು ಒಂದು ಸಾವಿರ ರೂಪಾಯಿಗಳನ್ನು ದಕ್ಷಿಣೆಯ ರೂಪದಲ್ಲಿ ಗುರುಗಳಿಗೆ ಅರ್ಪಿಸಿದ್ದಾರೆ.

ಶ್ರೀ ಜಿ. ಎಸ್. ಶಿವಶರಣ ಗವಾಯಿ ಅವರು ೧೯೪೫ ರಲ್ಲಿ ಶ್ರೀ ಪುಟ್ಟರಾಜ ಗವಾಯಿಗಳವರಲ್ಲಿ ಶಿಷ್ಯತ್ವ ವಹಿಸಿ ೧೯೫೦ ರವರೆಗೆ ಉತ್ತರಾದಿ ಸಂಗೀತ ಮತ್ತು ವಾದ್ಯಕಲೆಯನ್ನು ಸಂಪಾದಿಸಿದವರು. ಇವರು ಗುರುಗಳಿಂದ ಅಪ್ಪಣೆ ಪಡೆದು ಸಂಗೀತ ವಿದ್ಯೆಯ ಪ್ರಸಾರ ಕಾರ್ಯವನ್ನು ಕೈಕೊಂಡು ಮೊದಲು ೧೯೫೧ರಲ್ಲಿ ಆನಂದಪುರದ ಜಗದ್ಗುರು ಮುರಘಾಮಠದ ಅಧಿಪತಿಗಳಾದ ಶ್ರೀ. ಜ. ಸಚ್ಚಿದಾನಂದ ಮಹಾಸ್ವಾಮಿಗಳವರ ಉದಾರಾಶ್ರಯದಲ್ಲಿ ಆಸ್ಥಾನ ಗವಾಯಿಗಳಾಗಿದ್ದು ಹಲವಾರು ವಿದ್ಯಾರ್ಥಿಗಳಿಗೆ ಸಂಗೀತ ಪಾಠಗಳನ್ನು ಹೇಳಿದರು. ಮಲೆನಾಡಿನಲ್ಲಿ ಸಂಗೀತವಿದ್ಯೆಯ ಪ್ರಸಾರ ಇವರಿಂದಲೇ ಮೊದಲಾಯಿತೆಂದು ಹೇಳಬಹುದು. ಇವರು ಹುಟ್ಟುಗುರುಡರು. ಇವರ ಕಲೆಗಾರಿಕೆಯನ್ನು ಮೆಚ್ಚಿ ಸಾಗರ ತಾಲೂಕಿನ ಕ್ಯಾಸನೂರ ಗ್ರಾಮದ ಕ್ಯಾಂಪಿನಲ್ಲಿ ಕಾಶಿಯ ಜ್ಞಾನಪೀಠಾಧಿಪತಿಗಳಾದ ಶ್ರೀ. ಜ. ವಿಶ್ವಾರಾಧ್ಯ ಶಿವಾಚಾರ್ಯ

ಮಹಾಸ್ವಾಮಿಗಳವರು 'ಸಂಗೀತ ವಿದ್ವಾನ್' ಎಂಬ ಪ್ರಶಸ್ತಿಯನ್ನು ದಯಪಾಲಿಸಿದರು. ಈಗ ಅವರು ಮೂಡಿಯ ಶ್ರೀ ಶಿವಲಿಂಗೇಶ್ವರ ವಿರಕ್ತಮಠದಲ್ಲಿರುವ ಸಂಗೀತ ಪಾಠಶಾಲೆಯಲ್ಲಿದ್ದು ಸಂಗೀತ ವಿದ್ಯೆಯ ಸೇವೆಯನ್ನು ಮಾಡುತ್ತಿರುವರು

**ಶ್ರೀ ಹನುಮಂತಾಚಾರ್** ಅವರು ಶ್ರೀ ಪುಟ್ಟರಾಜ ಗವಾಯಿಗಳವರಲ್ಲಿ ಹಾರ್ಮೋನಿಯಂ ಮೊದಲಾದ ವಾದ್ಯಗಳಲ್ಲಿ ನಿಪುಣತೆಯನ್ನು ಪಡೆದವರು. ಅವರು ಗಾಯನ-ಕೀರ್ತನಗಳಲ್ಲಿಯೂ ಕಲೆಗಾರಿಕೆಯನ್ನು ಸಂಪಾದಿಸಿರುವರು. ಅವರು ಈಗ ಮದ್ರಾಸ ನಗರದಲ್ಲಿಯೆ ಇದ್ದುಕೊಂಡು ಅನೇಕ ಚಲನಚಿತ್ರ ಕಂಪನಿಗಳಲ್ಲಿ ಕಲಾಕಾರರಾಗಿ ಸೇವೆ ಸಲ್ಲಿಸುತ್ತಿರುವರು. ಆಗಾಗ ಪಂ. ಪುಟ್ಟರಾಜ ಗವಾಯಿಗಳನ್ನು ಅವರ ಶಿಷ್ಯ ಮಂಡಳಿಯೊಂದಿಗೆ ಮದ್ರಾಸಕ್ಕೆ ಕರೆಯಿಸಿಕೊಂಡು ಸಂಗೀತ ಕಚೇರಿಗಳನ್ನು ಏರ್ಪಡಿಸಿ ಶ್ರೀ ಪಂಚಾಕ್ಷರಗವಾಯಿಗಳವರ ಕಲಾಸೇವೆಯ ಪರಿಚಯವನ್ನು ಪರಪ್ರಾಂತದಲ್ಲಿಯೂ ಮಾಡಿಕೊಡುತ್ತಿರುವದು ಶ್ರೀ ಹನುಮಂತಾಚಾರ್ಯರ ಗುರುಭಕ್ತಿ, ಕಲಾನಿಷ್ಠೆ ಮತ್ತು ಹೃದಯ ವೈಶಾಲ್ಯಗಳ ಹೆಗ್ಗುರುತಾಗಿದೆ. ಕಲೆಯ ಕ್ಷೇತ್ರದಲ್ಲಿ ಜಾತಿಮತ ಪಂಥಗಳ ಸಂಕುಚಿತ ಭಾವನೆಗೆ ಅವಕಾಶವಿಲ್ಲವೆಂಬುದಕ್ಕೆ ಶ್ರೀ ಹನುಮಂತಾಚಾರ್ಯರ ಕಲಾಮಯ ಜೀವನ ಒಂದು ಉತ್ತಮ ಆದರ್ಶವಾಗಿದೆ. ಶ್ರೀ ಹನುಮಂತಾಚಾರ್ಯರು ಈಗ ದೈವಭಕ್ತ ಹಾಗು ಪ್ರಸಿದ್ಧ ಕಲಾವಿದೆಯರಾದ ಶ್ರೀಮತಿ ಪಂಡರಿಬಾಯಿ ಅವರ ನಾಟ್ಯಸಂಘದಲ್ಲಿ ಅಭಿನಯಿಸಿ ಸೇವೆ ಸಲ್ಲಿಸುತ್ತಿರುವರು.

**ಶ್ರೀ ಸೋಮಶೇಖರಸ್ವಾಮಿ ಲೋಣಾರಮಠ** ಅವರು ವಿಜಾಪುರ ಜಿಲ್ಲೆಯ ನಿಡೋಣಿ ಗ್ರಾಮದಲ್ಲಿ ಜನ್ಮ ತಾಳಿದರು. ಇವರ ಮಾಧ್ಯಮಿಕ ಶಿಕ್ಷಣವು ವಿಜಾಪುರದ ಶ್ರೀ ಸಿದ್ಧೇಶ್ವರ ಮಾಧ್ಯಮಿಕ ಶಾಲೆಯಲ್ಲಿ ಮುಗಿಯಿತು.



ಇವರಿಗೆ ಚಿಕ್ಕಂದಿನಿಂದಲೇ ಕೊಳಲು ನುಡಿಸುವಲ್ಲಿ ಆಸಕ್ತಿ ಇದ್ದಿತು. ವಿದ್ಯಾರ್ಥಿಗಳಾಗಿದ್ದಾಗಲೇ ಅನೇಕ ಸಾರ್ವಜನಿಕ ಸಭೆಗಳಲ್ಲಿ ಕೊಳಲು ನುಡಿಸಿ ಜನತೆಯಿಂದ ಪ್ರೋತ್ಸಾಹವನ್ನೂ ಮನ್ನಣೆಯನ್ನೂ ಪಡೆದಿದ್ದರು ಶ್ರೀ ಸಿದ್ಧರಾಮಸ್ವಾಮಿ ಕೋರವಾರ ಅವರ ಪ್ರೇರಣೆಯಿಂದ ಹೆಚ್ಚಿನ ಸಂಗೀತ ಶಿಕ್ಷಣವನ್ನು ಪಡೆಯಲು ಪಂ. ಪುಟ್ಟರಾಜ ಗವಾಯಿಗಳವರಲ್ಲಿ ಬಂದುರು. ಶ್ರೀ ಗವಾಯಿಗಳು ಶ್ರೀ ಲೋಣಾರಮಠದಲ್ಲಿರುವ

'ದೈವದತ್ತ ಕಲೆಯನ್ನು ಕಂಡು ಮೆಚ್ಚಿದರು. ಗುರುಕೃಪೆಯಿಂದ ಇವರು ಕೊಳಲು, ತಬಲಾ, ಹಾರ್ಮೋನಿಯಂ ಮೊದಲಾದ ವಾದ್ಯವಿದ್ಯೆಯಲ್ಲಿ ನಿಪುಣರಾದರು. ಗುರುಗಳ ಅನುಜ್ಞೆ ಪಡೆದು ಸಂಗೀತ ಪ್ರಸಾರ ಸೇವೆಯನ್ನು ಕೈಕೊಂಡಿರುವರು. ವಿಜಾಪುರದಲ್ಲಿ 'ಶ್ರೀ ಕುಮಾರೇಶ್ವರ ಸಂಗೀತ ವಿದ್ಯಾಲಯ'ವನ್ನು ಸ್ಥಾಪಿಸಿ ಅನೇಕ ವಿದ್ಯಾರ್ಥಿಗಳಿಗೆ ಗಾಯನ ವಾದನ ಕಲೆಯನ್ನು ಕಲಿಸಿದರು. ಅವರೀಗ ಶ್ರೀ ಸಿದ್ಧೇಶ್ವರ ಮಾಧ್ಯಮಿಕ ಶಾಲೆಯಲ್ಲಿ ಸಂಗೀತ ಶಿಕ್ಷಕರಾಗಿ ಶಾಸ್ತ್ರೀಯ ಸಂಗೀತ ವಿದ್ಯೆಯ ಪ್ರಸಾರವನ್ನೂ ಮಾಡುತ್ತಿರುವರು.

ಶ್ರೀ ನಂಜುಂಡಯ್ಯ ಗಿರಿಯಾಪುರ ಅವರು ಶ್ರೀ ಪಂಚಾಕ್ಷರ ಗವಾಯಿಗಳವರಲ್ಲಿದ್ದು ತಬಲಾ ವಾದನವನ್ನು ಅಭ್ಯಾಸ ಮಾಡಿ ಪ್ರವೀಣರಾಗಿರುವರು. ಅವರು ಚಿಕ್ಕಮಗಳೂರಲ್ಲಿದ್ದುಕೊಂಡು ಮಲೆನಾಡಿನಲ್ಲಿಯ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಪ್ರಸಿದ್ಧ ತಬಲಾವಾದಕರೆಂದು ಮನ್ನಣೆ ಪಡೆದಿರುವರು.



ಶ್ರೀ ಶಿವಮೂರ್ತಿ ಬುವಾ ಅಳವುಂಡಿ (ಜಿ. ರಾಯಚೂರು) ಅವರು ಗ್ವಾಲಿಯರದಲ್ಲಿ ಪಂ. ಪುಟ್ಟರಾಜ ಗವಾಯಿಗಳವರ ಶಿಷ್ಯರಾಗಿ ೬ ವರ್ಷಗಳವರೆಗೆ ಸಂಗೀತ ಶಿಕ್ಷಣವನ್ನು ಪಡೆದರು. ತಬಲಾ ವಾದನದಲ್ಲಿ ವಿಶೇಷ ಆಸಕ್ತಿ ವಹಿಸಿ ಪರಿಣತಿಯನ್ನು ಸಂಪಾದಿಸಿದವರು. ಮುಂಬಯಿ ಗಂಧರ್ವ ಮಹಾವಿದ್ಯಾಲಯದ ಉಚ್ಚ ಪರೀಕ್ಷೆಗಳಲ್ಲಿ ಪ್ರಶಸ್ತಿಗಳನ್ನು ಪಡೆದಿರುವರು. ರಾಯಚೂರ ಜಿಲ್ಹೆಯಲ್ಲಿ ಸಂಗೀತ ಪ್ರಸಾರ ಕಾರ್ಯವನ್ನು ಕೈಕೊಂಡಿರುವರು.

ಶ್ರೀ ಲಿಂಗರಾಜ ಗವಾಯಿ ಕುಂದಗೋಳ ಅವರು ಪಂ. ಪಂಚಾಕ್ಷರ ಗವಾಯಿಗಳವರ ಶಿಷ್ಯರಾದ ಶ್ರೀ ಶಿವಲಿಂಗ ಗವಾಯಿಗಳವರ ಶಿಷ್ಯರು. ಇವರು ಶ್ರೀ ಶಿವಲಿಂಗ ಗವಾಯಿಗಳವರಲ್ಲಿ ಉತ್ತರಾದಿ ಸಂಗೀತವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದ್ದಾರೆ. ತಬಲಾ ಮೊದಲಾದ ವಾದನ ಕಲೆಯಲ್ಲಿಯೂ ನಿಪುಣರು. ಈಗ ಇವರು ಹುಬ್ಬಳ್ಳಿಯ ಜಗದ್ಗುರು ಗಂಗಾಧರ ಹೈಸ್ಕೂಲಿನಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವರು.



**ಶ್ರೀ ಬಸವಲಿಂಗ ಭೀಮರಾವ ಪೂಜಾರಿ,** ಅವರು ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಆಲಮೇಲದಲ್ಲಿ ೧೯೧೦ ರಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಮುಗಿಸಿದ ನಂತರ ಸಂಗೀತವು ಇವರ ಮನೆತನದ ಕಲೆಯಾದುದರಿಂದ ಮನಸ್ಸಿನ ಪ್ರವೃತ್ತಿಯೂ ಸಂಗೀತ ಕಲೆಯತ್ತ ಒಲಿಯಿತು. ಅವರು ಲಿಂ. ಪಂಚಾಕ್ಷರ ಗವಾಯಿಗಳ ಸನ್ನಿಧಿಯಲ್ಲಿದ್ದು ತಮ್ಮ ಕಲಾಭಿರುಚಿಯಂತೆ ಹಿಂದುಸ್ತಾನಿ-ಕರ್ನಾಟಕ ಸಂಗೀತಗಳನ್ನು ಸಮರ್ಥರೀತಿಯಲ್ಲಿ ಸಾಧಿಸಿದರು. ಗುರುಗಳ ಅಪ್ಪಣೆಯಂತೆ ನಾಡಿನಲ್ಲಿ ಸಂಚರಿಸಿ ಸಂಗೀತಪ್ರಸಾರ ಕಾರ್ಯವನ್ನು ಕೈಕೊಂಡರು. ಅವರೀಗ ಆಲಮೇಲದ ಎ. ಕೆ. ನಂದಿ ಹೈಸ್ಕೂಲಿನಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವರು. ಅಲ್ಲಿಯೇ 'ಬಸವೇಶ್ವರ ಸಂಗೀತ ವಿದ್ಯಾಲಯ'ವನ್ನು ಸ್ಥಾಪಿಸಿರುವರು. ಈ ವಿದ್ಯಾಲಯವು ಸರಕಾರದಿಂದ ಮನ್ನಣೆ ಪಡೆದಿದೆ. ಇಲ್ಲಿ ನೂರಾರು ವಿದ್ಯಾರ್ಥಿಗಳಿಗೆ ಸಂಗೀತ ಶಿಕ್ಷಣ ದೊರೆಯುತ್ತಿದೆ. ಇದುವರೆಗೆ ಅನೇಕ ಪ್ರತಿಭಾವಂತ ಕಲಾಕಾರರು ಇವರಿಂದ ಶಿಕ್ಷಣ ಪಡೆದು ಗುರುವರ್ಯರ ಕೀರ್ತಿಯನ್ನು ಹೆಚ್ಚಿಸಿರುವರು.



**ಶ್ರೀ ವೆಂಕಪ್ಪ ರೋಣ,** ಅವರು ೧೯೧೪ ರಲ್ಲಿ ಜನ್ಮದಳೆದರು. ಪ್ರಾಥಮಿಕ ಶಿಕ್ಷಣ ಮುಗಿಸಿ ೧೯೪೦ ರಲ್ಲಿ ಲಿಂ. ಪೂಜ್ಯ ಪಂಚಾಕ್ಷರ ಗುರುವರ್ಯರ ಆಶ್ರಯದಲ್ಲಿ ಸಂಗೀತ-ನಾಟ್ಯಕಲೆಗಳ ಅಧ್ಯಯನ ಮಾಡಿದರು. ಇವರಲ್ಲಿ ಹಾಸ್ಯಾಭಿನಯ ಸಹಜವಾಗಿ ಬೆಳೆದು ಬಂದಿದೆ. ೧೯೪೩ ರಲ್ಲಿ ಕೊಪ್ಪಳ ಮುಕ್ಕಾಮಿನಲ್ಲಿ ಶ್ರೀ ಗರುಡ ಸದಾಶಿವರಾಯರೊಂದಿಗೆ 'ಸತ್ಯಸಂಕಲ್ಪ' ನಾಟಕದಲ್ಲಿ ಹಿರಣ್ಯಗರ್ಭಾಚಾರ್ಯರ ಪಾತ್ರವನ್ನು ಅಭಿನಯಿಸಿದಾಗ ಇವರ ಹಾಸ್ಯಾಭಿನಯವನ್ನು ಬಹುಪಾಗಿ ಮೆಚ್ಚಿ ಶ್ರೀ ಗರುಡರು 'ನಟಶ್ರೇಷ್ಠ' ಎಂದು ಉದ್ಗಾರ ತೆಗೆದು ಪ್ರೋತ್ಸಾಹಿಸಿದರು. ಅಂದು ಗುರುವರ್ಯ ಶ್ರೀ ಪಂಚಾಕ್ಷರ ಗವಾಯಿಗಳವರಿಗೆ ಆದ ಆನಂದ ಅಷ್ಟಿಷ್ಟಲ್ಲ. ಗುರುವರ್ಯರು ತಮ್ಮ ನಾಟ್ಯಸಂಸ್ಥೆಯಲ್ಲಿ ಶ್ರೀ ವೆಂಕಣ್ಣನವರಿಗೆ ಆಜೀವ ಸೇವೆ ಸಲ್ಲಿಸುವಂತೆ ಹೃದಯದುಂಬಿ ಹರಸಿದರು. ಅದರಂತೆ ಶ್ರೀ ವೆಂಕಪ್ಪನವರು ಶ್ರೀ ಪುಟ್ಟರಾಜರನ್ನೇ ತಮ್ಮ ಗುರುವರ್ಯರ ಅವತಾರವೆಂದು ತಿಳಿದು ಭಕ್ತಿಯಿಂದ ನಾಟ್ಯಸಂಸ್ಥೆಯಲ್ಲಿ ಅಭಿನಯಿಸಿ ಸಾವಿರಾರು ಪ್ರೇಕ್ಷಕರನ್ನು ತಣಿಸಿ ಜನಪ್ರಿಯ ನಟರಾಗಿರುವರು.

## ಶ್ರೀ ಮಹಾಲಿಂಗರಾಜ ಹಿರೇಗುಂಜಳ



ಅವರು ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಹಿರೇಗುಂಜಳ ಗ್ರಾಮದವರು. ಎಂಟನೆಯ ವಯಸ್ಸಿನಲ್ಲಿಯೇ ಕನ್ನಡಪ್ರಾಥಮಿಕ ಶಿಕ್ಷಣದೊಂದಿಗೆ ಹಾರ್ಮೋನಿಯಂ ವಾದ್ಯವನ್ನು ಕಲಿತರು. ಶಾಸ್ತ್ರೀಯ ಸಂಗೀತವನ್ನು ಗುರುಮುಖವಾಗಿ ಸಂಪಾದಿಸಬೇಕೆಂಬ ಹಂಬಲ ಅವರನ್ನು ಶ್ರೀ ವೀರೇಶ್ವರ ಪುಣ್ಯಾಶ್ರಮಕ್ಕೆ ಕರೆತಂದಿತು. ಅವರು ಶ್ರೀ ಪುಟ್ಟರಾಜರ ಪ್ರೀತಿಯ ಶಿಷ್ಯರಾಗಿ ಸಂಗೀತ ಶಿಕ್ಷಣವನ್ನು ಪಡೆದರು. ದಕ್ಷತೆಯ ದುಡಿತ, ನಿಷ್ಠೆಯ ಗುರುಸೇವೆಯಿಂದಾಗಿ ಅವರಿಗೆ ಸಂಗೀತದೇವಿ ಒಲಿದಿರುವಳು. 'ಸಂಗೀತ ವಿಶಾರದ' ಮೊದಲಾದ ಪದವಿಗಳನ್ನು ಪಡೆದಿರುವರು. ಗುರುವರ್ಯರ ಪ್ರವಾಸದಲ್ಲಿ ಅವರೂ ಜೊತೆಗಿದ್ದು ಅನೇಕ ಸಂಗೀತ ಕಚೇರಿಗಳಲ್ಲಿ ಭಾಗವಹಿಸಿ ಜನಪ್ರಿಯ ಕಲಾವಂತರಾಗಿದ್ದಾರೆ.

## ಶ್ರೀ ಜಿ. ಎಮ್. ಚಂದ್ರಶೇಖರಸ್ವಾಮಿ



ಹಾವೇರಿ, ಅವರು ಹಾವೇರಿ ತಾಲೂಕಿನ ಇಜಾರಿ ಕಮಲಾಪುರ ಗ್ರಾಮದಲ್ಲಿ ೧೯೫೩ ರಲ್ಲಿ ಜನ್ಮ ತಾಳಿದರು. ಪ್ರಾಥಮಿಕ ಶಿಕ್ಷಣ ಮುಗಿಸಿ ಹಾವೇರಿಯ ಶ್ರೀ ಹುಕ್ಕೇರಿಮಠದಲ್ಲಿ ವೈದಿಕ ಜ್ಯೋತಿಷ್ಯವನ್ನು ಕಲಿತರು. ಅಲ್ಲಿಯೇ ಶ್ರೀ ಮ. ಘ. ಚ. ಶಾಂತವೀರ ಪಟ್ಟಾಧ್ಯಕ್ಷರು, ಸಿಂದಗಿ ಅವರಿಂದ ಸ್ಥಾಪಿತವಾದ ಶ್ರೀ ಕುಮಾರೇಶ್ವರ ವೈದಿಕ-ಜ್ಯೋತಿಷ್ಯ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ಈಗ ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ಪಂ. ಪುಟ್ಟರಾಜ ಗವಾಯಿಗಳವರ ಸನ್ನಿಧಿಯಲ್ಲಿ ಸಂಸ್ಕೃತ ಮತ್ತು ಸಂಗೀತ ಶಿಕ್ಷಣವನ್ನು ಪಡೆಯುತ್ತಿರುವರು. ಇವರಲ್ಲಿ ಹಾಸ್ಯಕಲೆಯು ದೈವದತ್ತವಾಗಿ ಬಲಿಯುತ್ತಿದೆ.



**ಶ್ರೀ ಚಂದ್ರಶೇಖರ ಫೂಲಚಿಂತಿ** ಸಂಗೀತ ವಿಶಾರದ ಅವರು ಕರ್ನೂಲ ಜಿಲ್ಲೆಯ ಆದವಾನಿ ತಾಲೂಕಿನ ಫೂಲಚಿಂತಿ ಗ್ರಾಮದಲ್ಲಿ ೧೯೩೯ ರಲ್ಲಿ ಜನ್ಮ ತಾಳಿದರು. ಇವರ ಹಿರಿಯಣ್ಣ ಬಂಡಯ್ಯನವರು ಕರ್ನಾಟಕ ಸಂಗೀತಜ್ಞರು. ಅವರ ಸಹವಾಸದಿಂದ ಸಂಗೀತವು ಇವರಿಗೆ ಸಹಜವಾಗಿ ಸಾಧಿಸಿತು. ಸಹೋದರರ ಪ್ರೇರಣೆಯಂತೆ ಇವರು ಪಂಡಿತ ಪುಟ್ಟರಾಜ ಗವಾಯಿಗಳವರ ಪುಣ್ಯಾಶ್ರಮದಲ್ಲಿ ಪ್ರವೇಶ ಪಡೆದರು, ಕಲಾಸಾಧನೆಗೆ ಮೊದಲು ಮಾಡಿದರು ಗುರುವಿನ ಕರುಣೆಯಿಂದ ಸಂಗೀತ ವಿಸಾರದರೆನಿಸಿದರು. ಅವರೀಗ ಗುಲಬರ್ಗಾದಲ್ಲಿ 'ಶಾರದಾ ಸಂಗೀತಶಾಲೆ' ಯನ್ನು ಸ್ಥಾಪಿಸಿ ಅನೇಕ ಗಾಯಕರಿಗೂ ವಾದಕರಿಗೂ ಶಿಕ್ಷಣ ಕೊಟ್ಟಿರುವರು, ಕೊಡುತ್ತಿರುವರು. ಮಧುರಕಂಠವನ್ನು ದೈವದತ್ತವಾಗಿ ಪಡೆದ ಇವರು ಮೂರು ಸಪ್ತಕಗಳಲ್ಲಿ ಸರಳವಾಗಿ ಹಾಡುತ್ತಾರೆ. ವಚನಗಳನ್ನು ಭಾವಗೀತೆಗಳಂತೆ ರಸವತ್ತಾಗಿ ಹಾಡುವ ಕಲೆ ಇವರಲ್ಲಿ ಅನುಪಮವಾಗಿದೆ. ಅಂತೆಯೆ ರಾಯಚೂರ ಹೈದರಾಬಾದ ಮೊದಲಾದ ನಗರಗಳಲ್ಲಿಯ ಕಲಾಪ್ರೇಮಿಗಳನ್ನು ಇವರು ಸಂಗೀತ ಕಲೆಯನ್ನು ಮೆಚ್ಚಿ ಬಹುವಾಗಿ ಸನ್ಮಾನಿಸಿರುವರು. ಇವರೊಬ್ಬ ಉದಯೋನ್ಮುಖ ಸಂಗೀತಗಾರರಾಗಿ ಮುಂದುವರಿಯುತ್ತಿದ್ದಾರೆ.



**ಶ್ರೀ ಹುಚ್ಚಯ್ಯ ಚನ್ನಯ್ಯ ಹಿರೇಮಠ** ಅವರು ರಾಯಚೂರ ಜಿಲ್ಲೆಯ ಕುಷ್ಟಗಿ ತಾಲೂಕಿನ ಹೊನ್ನಿಗನೂರಲ್ಲಿ ಜನಿಸಿದರು. ಪ್ರಾಥಮಿಕ ಕನ್ನಡ ಶಿಕ್ಷಣ ಮುಗಿಸಿದರು. ಅವರಲ್ಲಿ ನಾಟ್ಯ ಕಲೆಯತ್ತ ಅಭಿರುಚಿ ಸಹಜವಾಗಿತ್ತು. ಅದನ್ನು ಕಲಿಯಲು ಹಂಬಲಿಸಿ ತಾಯಿಯನ್ನು ಒಪ್ಪಿಸಿ ೧೯೫೦ರಲ್ಲಿ ನಾಟ್ಯ-ಸಂಗೀತ ಕಲೆಯ ಸಂಗಮವಾದ ಗದುಗಿನ ವೀರೇಶ್ವರ ಪುಣ್ಯಾಶ್ರಮವನ್ನು ಸೇರಿದರು. ಗುರುವಿನ ಅನುಗ್ರಹ ಮತ್ತು ಸಾಧನೆಯಿಂದ ನಾಟ್ಯಕಲೆಯಲ್ಲಿ ನಿಪುಣರಾದರು. ಶ್ರೀ ಕುಮಾರೇಶ್ವರ ನಾಟ್ಯಸಂಘದ ಹೇಮರಡ್ಡಿ ಮಲ್ಲಮ್ಮ, ನಲ್ಲೂರ ನಂಬೆಕ್ಕ, ಸತಿ ಸುಕನ್ಯಾ, ಶಿರಹಟ್ಟಿ ಶ್ರೀ ಫಕೀರಸ್ವಾಮಿ ಮೊದಲಾದ ನಾಟಕಗಳಲ್ಲಿ ಆರು ವರ್ಷಗಳ ವರೆಗೆ ಮುಖ್ಯಪಾತ್ರಗಳನ್ನು

ವಹಿಸಿ ಸಂಘದ ಸೇವೆಯನ್ನು ಮಾಡಿದರು. ನಂತರ ಉಜ್ಜನಿಮಠದ ಶ್ರೀ ಸಿದ್ಧರಾಜರ 'ಸಮಾಜವಿಕಾಸ ನಾಟ್ಯ ಸಂಘ'ದಲ್ಲಿ ಸೇರಿ ಅಲ್ಲಿಯೂ ಸಮರ್ಥರೀತಿಯಲ್ಲಿ ಅಭಿನಯಿಸಿದರು. ಈ ನಾಟ್ಯಸಂಘದ ಪ್ರಸಿದ್ಧ ಪ್ರಯೋಗವಾದ 'ದಸರಾ' ದಲ್ಲಿ ಇವರ ಪಾತ್ರ ಬಹು ಜನಾದರಣೀಯವಾಯಿತು. ಈಗ ಅವರು ಚಲಚಿತ್ರಗಳಲ್ಲಿ ಅಭಿನಯಿಸುತ್ತಿರುವರು. 'ಚಿತ್ರವಾಣಿ' ಯವರು ಚಿತ್ರಿಸುತ್ತಿರುವ 'ಸಂಗೊಳ್ಳಿ ರಾಯಣ್ಣ' ಎಂಬ ಪ್ರಸಿದ್ಧ ಐತಿಹಾಸಿಕ ಚಿತ್ರದಲ್ಲಿ ಅವರು ಭಾಗವಹಿಸಿರುವರು. ತಮ್ಮ ಜೀವನವನ್ನೇ ಕಲಾಸೇವೆಗೆಂದು ಮುಡುಪಾಗಿಟ್ಟಿರುವ ಶ್ರೀ ಹಿರೇಮಠರು ಗುರುವರ್ಯರ ಪ್ರೀತಿಗೆ ಪಾತ್ರರಾಗಿ ಮುನ್ನಡೆಯುತ್ತಿರುವುದು ಹೆಮ್ಮೆಯ ವಿಷಯವಾಗಿದೆ.



ಶ್ರೀ ಸಂಗಮೇಶ್ವರ ಹೊನ್ನಿಗನೂರ 'ಸಂಗೀತಅಲಂಕಾರ' ಅವರು ಗುರುವರ್ಯರ ಸಂಗೀತ ಶಾಲೆಯಲ್ಲಿ ೮-೧೦ ವರ್ಷಕಾಲ ಶಾಸ್ತ್ರೀಯ ಗಾಯನ-ವಾದನ ಕಲೆಗಳಲ್ಲಿ ಪಳಗಿದವರು. ಸಂಗೀತದೊಂದಿಗೆ ರಂಗಭೂಮಿಯ ಸೇವೆಯನ್ನು ಮಾಡಿ ಜನಮೆಚ್ಚುಗೆಯನ್ನು ಪಡೆದಿರುವರು. ಒಂದುವರ್ಷ ಅವರು ಆಶ್ರಮದಲ್ಲಿ ಸಂಗೀತ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಅವರು ಈಗ ಹುಬ್ಬಳ್ಳಿ ಮಹಾನಗರದಲ್ಲಿ 'ಗುರುದೇವ ಸಂಗೀತಶಾಲೆ'ಯನ್ನು ಸ್ಥಾಪಿಸಿ ಸಂಗೀತ ಪ್ರಸಾರ ಕಾರ್ಯ ಮಾಡುತ್ತಿರುವರು. ಗುರುವರ್ಯರ ಕೀರ್ತಿಯನ್ನು ಬೆಳಗಿಸುತ್ತಿರುವರು.

ಶ್ರೀ ಬಿ. ಡಿ. ಭಜಂತ್ರಿ ಅವರು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಗಜೇಂದ್ರಗಡದಲ್ಲಿ ೧೯೩೩ ರಲ್ಲಿ ಜನ್ಮ ತಾಳಿದರು. ಬಾಲ್ಯದಿಂದಲೇ ದೈವದತ್ತವಾದ ಸಂಗೀತಕಲೆ ಇವರಲ್ಲಿ ಕಳೆಗೂಡಿ ಬಂದಿತು. ೧೯೫೦ರಲ್ಲಿ ಅವರ ಶ್ರೀ ಪುಟ್ಟರಾಜರ ಶಿಷ್ಯತ್ವ ವಹಿಸಿ ಸಂಗೀತ ಸಾಧನೆಗೆ ಮೊದಲು ಮಾಡಿದರು. ವಾದನ ಕಲೆ ಅವರ ಮೆಚ್ಚಿನ ವಿಷಯವಾಯಿತು. ಶಹನಾಯಿ ಕೊಳಲು, ಕ್ಲಾರೊನೇಟ ಮುಂತಾದ ವಾದ್ಯಗಳಲ್ಲಿ ಪಾರಂಗತರಾದರು. ಅವರು ಆಕಾಶವಾಣಿಯ ಕಾರ್ಯ



ಕ್ರಮಗಳಲ್ಲಿ ಭಾಗವಹಿಸಿ ಜನಪ್ರಿಯ ವಾದಕರಾಗಿದ್ದಾರೆ. ನಾಟಕ ಸಂಗೀತ ಸಮಾರಂಭಗಳಲ್ಲಿಯೂ ಮಧುರ ವಾದ್ಯಗಳನ್ನು ನುಡಿಸಿ ಕಲಾಪ್ರೇಮಿಗಳ ಆದರಕ್ಕೆ ಪಾತ್ರರಾಗಿರುವರು.



ಶ್ರೀ ಸಿದ್ದಪ್ಪ ಶೆಟ್ಟಿಗೂಳಿ ಇವರು ಕರ್ನೂಲ ಜಿಲ್ಲೆಯ ಆಲೂರ ತಾಲೂಕಿನವರು. ೧೯೪೦ ರಲ್ಲಿ ಗೂಳ ಗ್ರಾಮದಲ್ಲಿ ಜನಿಸಿದರು. ಮೂರು ವರ್ಷದ ಹಸುಳನಾಗಿರುವಾಗಲೇ ಬೇನೆಯಿಂದ ನೇತ್ರಗಳ ಜ್ಯೋತಿಯನ್ನು ಕಳೆದುಕೊಂಡರು. ೧೯೫೨ ರಲ್ಲಿ ಈ ಜನ್ಮಾಂಧ ಬಾಲಕನು ಶ್ರೀ ಪುಟ್ಟರಾಜರ ಸನ್ನಿಧಾನವನ್ನು ಸಂಗೀತ ವಿದ್ಯೆಯನ್ನು ಕಲಿಯುವ ಉತ್ಕಟೇಚ್ಛೆಯಿಂದ ಸೇರಿದನು. ಗುರುವಿನ ಕರುಣೆಯು ಕಂಡರಾಗಿ ಸಂಗೀತ ವ್ಯಾಸಂಗ ಮಾಡಿದರು. ಪರಿಶ್ರಮಕ್ಕೆ ತಕ್ಕಂತೆ 'ಸಂಗೀತ ವಿಶಾರದ' ಪದವಿಯನ್ನು ಸಂಪಾದಿಸಿದರು. ಈಗ ಇವರು ಗುರುವರ್ಯರ ನಾಟಕ ಕಂಪನಿಯಲ್ಲಿ ವಾ ಯ್ ಲಿ ನ್ ನುಡಿಸುವ ಸೇವೆಯನ್ನು ಕೈಕೊಂಡು ನಿಷ್ಠೆಯಿಂದ ಸಂಘದ ಪ್ರಗತಿಗಾಗಿ ದುಡಿಯುತ್ತಿರುವರು.



ಶ್ರೀ ಸೋಮಶೇಖರ ಹಾಗರಗಿ ಇವರು ಗುಲಬರ್ಗಾ ತಾಲೂಕಿನ ಹಾಗರಗಿ ಗ್ರಾಮದಲ್ಲಿ ೧೯೨೮ ರಲ್ಲಿ ಜನಿಸಿದರು. ಎಳೆಯ ವಯಸ್ಸಿನಲ್ಲಿಯೇ ಇವರಿಗೆ ಕಲೆಯ ನಾದವು ಹತ್ತಿತು. ಹಿರಿಯಗುರುವರ್ಯರ ಶಿಷ್ಯ-ರಾದ ಶ್ರೀ ಬಸವಲಿಂಗಪ್ಪನವರು ಆಲಮೇಲೆ ಇವರಲ್ಲಿ ಪ್ರಾಥಮಿಕ ಸಂಗೀತದ ವ್ಯಾಸಂಗ ಮಾಡಿ ಮುಂದೆ ಪಂ. ಪುಟ್ಟರಾಜರಲ್ಲಿ ಸಂಗೀತಾಭ್ಯಾಸವನ್ನು ಮುಂದುವರಿಸಿದರು, ಸಂಗೀತ ಚತುರರಾದವರು ಗುಲಬರ್ಗಾದ ಬೃಹನ್ಮಠದಲ್ಲಿ ಸಂಗೀತ ಪಾಠಶಾಲೆಯನ್ನು ಪ್ರಾರಂಭಿಸಿ ಹಲವಾರು ಸಂಗೀತಗಾರರನ್ನು ತಯಾರು ಮಾಡಿದರು ಇವರಿಗೆ ಇಂಪಾದ ಕಂಠಮಾಧುರ್ಯ ದೇವರ ದೇಣಿಗೆಯಾಗಿ ದೊರೆತಿವೆ. ಇವರು ಹೈದರಾಬಾದ ಆಕಾಶವಾಣಿ ಕೇಂದ್ರದಲ್ಲಿಯೂ ತಮ್ಮ ಕಲಾಪ್ರತಿಭೆಯನ್ನು ಪ್ರದರ್ಶಿಸಿರುವರು. ಗುಲಬರ್ಗಾದ ಕಲಾಮಂಡಳಿಯ ಪೋಷಕ ಸದಸ್ಯರಾಗಿ ಕಲಾಸೇವೆಯನ್ನು ಪನಮುಟ್ಟಿ ಮಾಡುತ್ತಿರುವರು.

ಶ್ರೀ ವೀರಭದ್ರಯ್ಯ ರಾಜಶೇಖರಯ್ಯ ಶಾಸ್ತ್ರಿ ಹಿರೇಮಠ ಅವರು ೧೯೪೦ರಲ್ಲಿ ಶ್ರೀ ಪಂಚಾಕ್ಷರ ಗುರುವರ್ಯರ ಸನ್ನಿಧಿಯಲ್ಲಿ ಸಂಗೀತ ಅಭ್ಯಾಸ ಮಾಡಲು ವಿದ್ಯಾಲಯದಲ್ಲಿ ಪ್ರವೇಶ ಪಡೆದರು. ನಿಷ್ಠೆಯಿಂದ ಪರಿಶ್ರಮವಹಿಸಿ ಶಾಸ್ತ್ರೀಯ ಸಂಗೀತದಲ್ಲಿ ನಿಪುಣರಾದರು. ಹಾರ್ಮೋನಿಯಂ ಮೊದಲಾದ ವಾದನ ಕಲೆಯನ್ನು ಸಾಧಿಸಿಕೊಂಡರು. ಗುರುಗಳ ಪ್ರಿಯ ಶಿಷ್ಯರಾದರು. ಅವರೀಗ ಗದುಗಿನಲ್ಲಿಯೇ ನೆಲೆಯಾಗಿ ಉದ್ಯೋಗಶೀಲರಾಗಿ ಪ್ರಗತಿ ಪಡೆದಿರುವರು. ಅವರು ಸಂಗೀತ ಕಲೆಯನ್ನು ಮರೆಯದೆ ಅದರ ನಾದದಲ್ಲಿ ತಮ್ಮ ಆದರ್ಶ ಜೀವನವನ್ನು ಸಾಗಿಸಿರುವರು. ಆಕಾಶವಾಣಿ ಕೇಂದ್ರದಲ್ಲಿಯೂ ಆಗಾಗ ಅವರ ಕಾರ್ಯಕ್ರಮಗಳು ಏರ್ಪಟ್ಟಿವೆ. ಗುರುಗಳಲ್ಲಿ ಅವರಿಗೆ ಬಹು ಅಭಿಮಾನ. ಲಿಂ. ಗುರುವರ್ಯ ಪಂಚಾಕ್ಷರ ಗವಾಯಿಗಳವರ ಅಮೃತಶಿಲಾ ಮೂರ್ತಿಯ ಪ್ರತಿಷ್ಠೆಯ ಮಹಾಕಾರ್ಯದಲ್ಲಿ ಅವರೂ ಬಹುವಾಗಿ ಶ್ರದ್ಧೆಯಿಂದ ಶ್ರಮಿಸಿ ಸೇವೆ ಮಾಡಿರುವರು.



ಶ್ರೀ ನಿ. ಪ್ರ. ಶಿವಾನಂದ ಸ್ವಾಮಿಗಳು ಚಡಚಣ ಅವರು ಬಾಲ್ಯದಿಂದಲೇ ಶ್ರೀ ನಿ. ಪ್ರ. ಬಂಥನಾಳ ಶಿವಯೋಗಿಗಳವರ ಕೃಪಾಪೂರ್ಣ ಆಶ್ರಮದಲ್ಲಿ ಬೆಳೆದು ಬಂದವರು. ಅವರು ಕೆಲವು ವರ್ಷ ಶ್ರೀ ಮುರುಗೇಂದ್ರ ಶಿವಯೋಗಿಗಳವರ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಅಧ್ಯಯನವನ್ನು ಮಾಡಿ ಪದವಿಯನ್ನು ಪಡೆದರು. ಕನ್ನಡ ಹಿಂದಿ ಭಾಷೆಗಳಲ್ಲಿಯೂ ಪರಿಣತರು. ಅವರೀಗ ಪಂ. ಪುಟ್ಟರಾಜರ ವಿದ್ಯಾಲಯದಲ್ಲಿ ಸಂಗೀತದ ಅಭ್ಯಾಸ ಮಾಡುತ್ತ ಪುರಾಣ-ಪ್ರವಚನ ಕಲೆಯನ್ನು ಸಾಧಿಸುತ್ತಿರುವರು. ಅವರೊಬ್ಬ ಆದರ್ಶ ಮಠಾಧಿಕಾರಿಗಳಾಗಿ ಸಮಾಜಸೇವೆಯ ಪವಿತ್ರ ಧ್ಯೇಯವನ್ನು ಮುಂದಿಟ್ಟುಕೊಂಡು ನಿಷ್ಠೆಯಿಂದ ಸಾಧನೆ ಮಾಡುತ್ತಿರುವರು.

ಶ್ರೀ ರುದ್ರಯ್ಯಸ್ವಾಮಿ ಕೋಡಿಕೊಪ್ಪಮಠ ಅವರು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಕೋಡಿಕೊಪ್ಪ ಗ್ರಾಮದ ಚೌಕೀಮಠವಲ್ಲಿ ೧೯೩೭ರಲ್ಲಿ ಜನ್ಮ ತಾಳಿದರು. ಸಂಗೀತ ಕಲೆಯು ಇವರಿಗೆ ಜನ್ಮದತ್ತವಾಗಿ

ಬಂದುದು. ೧೯೪೪ರಲ್ಲಿ ಇವರು ಪೂಜ್ಯ ಪಂ. ಪುಟ್ಟರಾಜ ಗವಾಯಿಗಳವರಲ್ಲಿ ಶಿಷ್ಯವೃತ್ತಿಯನ್ನು ಕೈಕೊಂಡು ಕಲಾಸಾಧನೆಗೆ ಮೊದಲು ಮಾಡಿದರು. ಸಂಗೀತವಲ್ಲದೆ ನಾಟ್ಯ-ಕೀರ್ತನ ಕಲೆಗಳಲ್ಲಿಯೂ ಪ್ರಗತಿ ಸಾಧಿಸಿದರು. ಗುರುಗಳ ಕೃಪಾಶೀರ್ವಾದ ಪಡೆದು ಸಮಾಜ ಸೇವಕರಾಗಿ ತಮ್ಮ ಸಂಗೀತಮತ್ತು ಕೀರ್ತನ ಪ್ರವಚನಗಳಿಂದ ಧರ್ಮಪ್ರಸಾರ ಕೈಕೊಂಡರು. ಪ್ರತಿಭಾನ್ವಿತರಾದ ಇವರು ಶ್ರೀ ಗವಾಯಿಗಳ ಶಿಷ್ಯಕೋಟಿಯಲ್ಲಿ ಆದರ್ಶ ಜೀವಿಗಳಾಗಿದ್ದಾರೆ.

ಶ್ರೀ ಚೆನ್ನಬಸವಾರ್ಯ ಬಸವಾರ್ಯ ಚಿಕ್ಕಮಠ, ಕಿರೇಸೂರು ಅವರು ಶ್ರೀ ಗವಾಯಿಗಳಲ್ಲಿ ೧೯೩೯ ರಿಂದ ೧೯೪೪ ರ ವರೆಗೆ ತಬಲಾವಾದನ ಶಿಕ್ಷಣವನ್ನು ಪಡೆದರು. ನಂತರ ಪಂ. ಪುಟ್ಟರಾಜ ಗವಾಯಿಗಳಿಂದಲೂ ಸಂಗೀತ ಮತ್ತು ವಾದನಕಲೆಯನ್ನು ಸಂಪಾದಿಸಿದರು. ಇವರು ಬೆಳಗಾಂವ, ಹುಬ್ಬಳ್ಳಿ ಧಾರವಾಡ ಮತ್ತು ಗದಗ ಮೊದಲಾದ ನಗರಗಳಲ್ಲಿಯ ಸಂಗೀತಕೂಟಗಳಲ್ಲಿ ಕಲೆಯ ಪ್ರದರ್ಶನವನ್ನು ಮಾಡಿ ಜನರ ಮೆಚ್ಚುಗೆಯನ್ನು ಮತ್ತು ಅನೇಕ ಪ್ರಶಸ್ತಿಗಳನ್ನು ಪಡೆದಿರುವರು. ಶ್ರೀ ಚಿಕ್ಕಮಠ ಅವರು ಆಕಾಶವಾಣಿಯ ಕೇಂದ್ರಗಳಲ್ಲಿಯೂ, ಕಲಾವಂತರಿಂದ ಮನ್ನಣೆ ಪಡೆದಿರುವರು. ಇವರು ಪಂ ಗವಾಯಿಗಳವರ ನಾಟಕ ಕಂಪನಿಯಲ್ಲಿ ತಬಲಾವಾದಕರಾಗಿಯೂ ಸೇವೆ ಸಲ್ಲಿಸುತ್ತಿರುವರಲ್ಲದೆ ಅನೇಕ ವಿದ್ಯಾರ್ಥಿಗಳಿಗೂ ವಿದ್ಯಾದಾನ ಮಾಡಿ ಲೋಕಪ್ರಿಯರಾದ ವಾದ್ಯಗಾರರಾಗಿರುವರು.



ಶ್ರೀ ಎಚ್. ಗುರುಲಿಂಗಸ್ವಾಮಿ ಬೆಳವಣಕಿ (ಜಿ. ಧಾರವಾಡ) ಅವರು ಚಿಕ್ಕಂದಿನಿಂದಲೇ ಕಲೆಯತ್ತ ಒಲಿದವರು. ನಾಟ್ಯ-ಸಂಗೀತ ಕಲೆಗಳು ಇವರಿಗೆ ಆನುವಂಶಿಕವಾಗಿ ಬಂದ ಭಾಗ್ಯಗಳು. ಪ್ರಾಥಮಿಕ ಶಾಲೆಯಲ್ಲಿ ಕಲಿಯುವಾಗಲೇ ಶಾಲೆಯ ಸಾಂಸ್ಕೃತಿಕ ಉತ್ಸವಗಳಲ್ಲಿ ಅಭಿನಯ ಪ್ರದರ್ಶಿಸಿ ಜನಪ್ರಿಯರಾಗಿದ್ದರು. ೧೯೫೦ರಲ್ಲಿ ಪಂ. ಪಂಚಾಕ್ಷರ ಗವಾಯಿಗಳ ಶಿಷ್ಯರಾದ ಶ್ರೀ ರುದ್ರಯ್ಯಸ್ವಾಮಿ ಸಾಲಿಮಠ ಅವರಲ್ಲಿ ಸಂಗೀತವನ್ನು ಕಲಿತರು. ಗುರುಗಳ ನಾಟ್ಯಸಂಘವು ಬೆಳವಣಕಿಗೆ ಬಂದಾಗ ಇವರು ಅದೇ ಸಂಘದಲ್ಲಿ ಸೇರಿ ಪಂ. ಪುಟ್ಟರಾಜ ಗವಾಯಿಗಳ ಕೃಪಾಶ್ರಯದಲ್ಲಿದ್ದು ಶಾಸ್ತ್ರೀಯ ಸಂಗೀತ-ವಾದ್ಯಗಳ ಕಲೆಯನ್ನು ಸಾಧಿಸಿದರು. ೧೯೬೦ರಲ್ಲಿ ಗುರುಗಳ ಆಶೀರ್ವಾದ ಪಡೆದು ದೊಡ್ಡವಾಡ ನಾಟಕ ಕಂಪನಿಯಲ್ಲಿ ಯುಸಿವಾಕ್ಸ

ವಾದ್ಯಗಾರರಾಗಿ ಸೇರಿ ಗುಡುವರ್ಯರಿಗೆ ಕೀರ್ತಿ ತಂದರು. ಮುಂಪೆ ಕೆಲವು ವರ್ಷ ನಾಟ್ಯಕಲಾಚಾರ್ಯ ಶ್ರೀ ಎ. ಸಿ. ಮಹಾದೇವ ಸ್ವಾಮಿಗಳ ನಾಟ್ಯ ಸಂಸ್ಥೆಯಲ್ಲಿ ಇದೇ ವಾದ್ಯ ನುಡಿಸುವ ಕಲಾಕಾರರಾಗಿದ್ದು ಜನಾದರ ಪಡೆದರು. ಗವಾಯಿಗಳವರ ಶಿಷ್ಯರಲ್ಲಿ ಜಾ ವಾದ್ಯದಿಂದ ಕೂಡಿದ ಈ ವಿಶಿಷ್ಟ ಯು:ಸಿವಾಕ್ಸ ವಾದ್ಯವನ್ನು ನುಡಿಸುವ ಕಲೆಯನ್ನು ಸಾಧಿಸಿದವರಲ್ಲಿ ಅಗ್ರಗಣ್ಯರು ಕೆಲವು ವರ್ಷ ಇವರು ತಮ್ಮ ಗ್ರಾಮದಲ್ಲಿ ಶ್ರೀ ಕೆ. ಸ:ಗಣ್ಣನವರಿಂದ ಸ್ಥಾಪಿತವಾದ ಶ್ರೀ ವೀರಭದ್ರೇಶ್ವರ ನಾಟಕ ಸಂಸ್ಥೆಯಲ್ಲಿ ಹಾರ್ಮೋನಿಯಂ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಅವರು 'ಸಂಗೀತ ವಿಶಾರ'ದ ಪರೀಕ್ಷೆಯಲ್ಲಿಯೂ ಉತ್ತೀರ್ಣರಾಗಿ ಅನೇಕ ಸಂಗೀತ ಕಚೇರಿಗಳಲ್ಲಿ ತಮ್ಮ ಕಲಾಪ್ರದರ್ಶನ ಮಾಡಿ ಅನೇಕ ಪ್ರಶಸ್ತಿಗಳನ್ನು ಪಡೆದಿರುವರು. ಶ್ರೀ ಗುರುವರ್ಯರ ನಿಷ್ಠಾವಂತ ಶಿಷ್ಯರಾಗಿರುವರು.



ಶ್ರೀ ಪಂಚಾಕ್ಷರಿಸ್ವಾಮಿ ಮಲ್ಲಾಪುರ ಅವರು ೧೯೩೪ರಲ್ಲಿ ನಿಡಗುಂದಿಕೊಪ್ಪ (ತಾ. ರೋಣ) ಗ್ರಾಮದ ಹಿರೇಮಠದಲ್ಲಿ ಜನಿಸಿದರು. ಇವರ ತಂದೆಯವರಾದ ಶ್ರೀ ಅನ್ನದಾನಯ್ಯಸ್ವಾಮಿ ಅವರು ಪೂಜ್ಯಗುರುಗಳ ಕೃಪೆಗೆ ಪಾತ್ರರಾಗಿ ಸಂಗೀತವಿದ್ಯಾಲಯ-ನಾಟ್ಯಸಂಘಗಳ ವ್ಯವಸ್ಥೆಯ ಸೇವೆಯನ್ನು ನಿರ್ವಹಿಸಿಕೊಂಡು ಬಂದವರು; ಅವರು ತಮ್ಮ ಪುತ್ರನನ್ನು ಗುರುವಿನ ಸನ್ನಿಧಿಯಲ್ಲಿಟ್ಟು ಸಂಗೀತ ಕಲಿಯಲು ಪ್ರೇರಣೆ ನೀಡಿದರು ಶ್ರೀ ಪಂಚಾಕ್ಷರಿ ಸ್ವಾಮಿ ಅವರು ೧೯೫೫ರಲ್ಲಿ ಸಂಗೀತವಿದ್ಯಾಲಯದಲ್ಲಿ ಪ್ರವೇಶ ಪಡೆದರು. ಸಂಗೀತದೊಂದಿಗೆ ಹಾರ್ಮೋನಿಯಂ ತಬಲಾ ಮೊದಲಾದ ವಾದ್ಯಗಳಲ್ಲಿ ನಿಪುಣರಾದರು, ಗುರುಗಳ ಕೃಪೆಗೆ ಪಾತ್ರರಾದರು.

ಶ್ರೀ ರುದ್ರಪ್ಪ ಮಾಸ್ತರ ಮತ್ತಿಗಟ್ಟಿ ಅವರು ಧಾರವಾಡ ಜಿಲ್ಲೆ ಕುಂದಗೋಳ ತಾಲೂಕಿನ ಮತ್ತಿಗಟ್ಟಿ ಗ್ರಾಮದವರು ಕನ್ನಡ ಪ್ರಾಥಮಿಕ ಶಿಕ್ಷಣ ಮುಗಿಸಿ ಹುಟ್ಟು ಕಲಾವಿದರಾದ ಇವರು ೧೯೫೩ರಿಂದ ಪುಟ್ಟರಾಜ ಗವಾಯಿಗಳ ಆಶ್ರಯದಲ್ಲಿದ್ದು ಸಂಗೀತ—ಸಾಹಿತ್ಯ—ನಾಟ್ಯಕಲೆಗಳ ಅಭ್ಯಾಸವನ್ನು ಹುನಮುಟ್ಟ ಮಾಡಿದರು. ಈ ಮೂರು ಕಲೆಗಳಲ್ಲಿ ನಿಪುಣರಾಗಿ ಆದರ್ಶ ನಟರಾಗಿ ಜನಪ್ರೀತಿಯನ್ನು ಗಳಿಸಿಕೊಂಡಿರುವರು ಇವರ ಸಹಜ ಮತ್ತು ಆದರ್ಶಮಯ ಅಭಿನಯ



ಬಹು ಶ್ರೇಷ್ಠ ತರಗತಿಯದು. ಆವರೀಗ ೧೦-೧೨ವರ್ಷಗಳಿಂದಲೂ ಗುರುಗಳ ನಾಟ್ಯ ಸಂಸ್ಥೆಯಲ್ಲಿಯೇ ನಿಷ್ಠೆಯಿಂದ ಕಲಾಸೇವೆ ಮಾಡಿ ಗುರುಕೃಪೆಗೆ ಪಾತ್ರರಾಗಿ ಜನಾನುರಾಗವನ್ನೂ ಪಡೆದಿರುವರು.



ಶ್ರೀ ದೇವರಾಜ ಅಂಬಳಿ ಅವರು ಬಳ್ಳಾರಿ ಜಿಲ್ಲೆಯ ಕೂಡ್ಲಗಿ ತಾಲೂಕಿನ ಅಂಬಳಿಗ್ರಾಮದಲ್ಲಿ ೧೯೩೪ ರಲ್ಲಿ ಜನ್ಮತಾಳಿದರು. ಬಾಲ್ಯದಿಂದಲೇ ಇವರ ಒಲವು ಸಂಗೀತದತ್ತ ಸಹಜವಾಗಿತ್ತು. ಕನ್ನಡ ಪ್ರಾಥಮಿಕ ಅಭ್ಯಾಸವನ್ನು ಮುಗಿಸಿ ೧೯೫೦ರಲ್ಲಿ ಪಂ. ಪುಟ್ಟರಾಜರ ಶಿಷ್ಯರಾಗಿ ಸಂಗೀತಸಾಧನೆಯನ್ನು ಪ್ರಾರಂಭಿಸಿದರು. ಪರಿಶ್ರಮವಹಿಸಿ ಅಭ್ಯಾಸಮಾಡಿದರು. ಸಂಗೀತ ವಿಶಾರದ ಮತ್ತು ಸಂಗೀತಾಲಂಕಾರ ಪರೀಕ್ಷೆ ಗಳಲ್ಲಿ ವಿಶೇಷಯೋಗ್ಯತೆಯೊಂದಿಗೆ ಉತ್ತೀರ್ಣರಾದರು. ಇವರಲ್ಲಿ ನಾಟ್ಯಕಲೆಯೂ ತಾನಾಗಿಯೇ ಬಂದುದು. ಇವರ ಸ್ತ್ರೀಪಾತ್ರಾಭಿನಯ ಜನಮನವನ್ನು ಸೂರೆಗೊಂಡಿದೆ. ಈಗ ಇವರು ಗುರುಗಳ ನಾಟಕಕಂಪನಿಯಲ್ಲಿ ಪ್ರತಿಭಾವಂತ ನಾಟ್ಯಕಲಾವಿದರಾಗಿ ಸೇವೆ ಸಲ್ಲಿಸುತ್ತಿರುವರು.



ಶ್ರೀ ಭೋಜರಾಜ ಒಣೆನೂರು (ಜಿ. ಬಳ್ಳಾರಿ) ಅವರು ಪೂಜ್ಯರಾದ ಪುಟ್ಟರಾಜರ ಪರಮಾಶ್ರಯದಲ್ಲಿ ೧೦-೧೨ ವರ್ಷಗಳವರೆಗೆ ಪ್ರಯತ್ನಶೀಲರಾಗಿ ಸಂಗೀತ ವಿದ್ಯೆಯನ್ನು ಸಾಧಿಸಿ ಪಾರಂಗತರಾಗಿರುವರು. ಅವರು ಹಾರ್ಮೋನಿಯಂ ಮೊದಲಾದ ವಾದ್ಯಕಲೆಯಲ್ಲಿ ಪಳಗಿದ ವರು. ಅವರೀಗ ಗುರುಗಳ ನಾಟಕಕಂಪನಿಯಲ್ಲಿ ಹಾರ್ಮೋನಿಯಂ ಮಾಸ್ತರರಾಗಿ ಸೇವಾಕಾರ್ಯ ಮಾಡು ತ್ತಿರುವರು. ಕಲಾಭಿವೃದ್ಧಿಯನ್ನು ಪಡೆಯುತ್ತಿರುವರು

ಶ್ರೀಲಿಂಗರಾಜ ಅಂಬಳಿ ಅವರು ಸಂಗೀತ ಕಲಿಯಲು ೧೯೫೫ರಲ್ಲಿ ಗುರು ಗಳಲ್ಲಿ ಬಂದರು. ವಿದ್ಯಾನಿಲಯದಲ್ಲಿ ಪ್ರವೇಶ ಪಡೆದರು. ಸಂಗೀತದೊಂದಿಗೆ ಹಾರ್ಮೋನಿಯಂ, ಮೊದಲಾದ ವಾದ್ಯಗಳಲ್ಲಿಯೂ ನಿಪುಣರಾದರು. ಅವರೀಗ ಗುರು ಗಳ ನಾಟ್ಯಸಂಘದಲ್ಲಿ ಅಭಿನಯ ಕಲೆಯನ್ನು ಸಾಧಿಸುತ್ತಿರುವರು. ಹೇಮರಡ್ಡಿ ಮಲ್ಲಮ್ಮನ ನಾಟಕದಲ್ಲಿ ಶ್ರೀಶೈಲ ಮಲ್ಲಿಕಾರ್ಜುನಸ್ವಾಮಿಯ ಪಾತ್ರವನ್ನೂ ಬಹು ಸಹಜವಾಗಿ ಮತ್ತು ಆಕರ್ಷಕವಾಗಿ ಅಭಿನಯಿಸುತ್ತಾರೆ.

ಶ್ರೀ ಶಿವಪ್ಪ ಎಲೆ ಇಂಗಳಗಿ ( ಜಿ. ಬಳ್ಳಾರಿ ) ಅವರು ಗುರುಗಳಲ್ಲಿ ಸಂಗೀತ ವಾದ್ಯಕಲಾಭ್ಯಾಸ ಮಾಡಿ ನಾಟ್ಯಕಲೆಯಲ್ಲಿಯೂ ಪಳಗಿರುವರು. ಅವರೀಗ ಗುರುಗಳ ನಾಟ್ಯಸಂಘದಲ್ಲಿ ಶೃಂಗಾರಪಾತ್ರಗಳನ್ನು ಸಹಜವಾಗಿ ಪ್ರದರ್ಶಿಸಿ ಪ್ರೇಕ್ಷಕರ ಮನಸನ್ನು ಸೆಳೆಯುವ ಮೋಡಿಯನ್ನು ಪಡೆದಿರುವರು.



ಶ್ರೀ ಶಂಕರಪ್ಪ ಉಲತಿ, ಸಂಗೀತವಿಶಾರದ ಅವರು ಕರ್ನೂಲ ಜಿಲ್ಲೆಯ ಆದವಾನಿ ತಾಲೂಕಿನ ಸಂತೆಕೂಡ್ಲೂರು ಗ್ರಾಮದಲ್ಲಿ ೧೯೪೪ರಲ್ಲಿ ಜನಿಸಿದರು. ಚಿಕ್ಕಂದಿನಲ್ಲಿಯೇ ಬೇನೆಯಿಂದ ಕಣ್ಣು ಕಳೆದುಕೊಂಡರು. ಆದರೆ ದೇವನು ಅವರಿಗೆ ಕಲೆಯ ಕಣ್ಣನ್ನು ಕೊಟ್ಟು ಕಳುಹಿದ್ದನು. ೧೯೫೬ರಲ್ಲಿ ಪಂ. ಪುಟ್ಟರಾಜರ ಸನ್ನಿಧಿಯಲ್ಲಿ ಸಂಗೀತಶಿಕ್ಷಣ ಪಡೆಯಲು ಬಂದರು. ನಿಷ್ಠೆಯಿಂದ ಅಧ್ಯಯನ ಮಾಡಿ ಗುರುವಿನ ದಯೆಯನ್ನು ಪಡೆದರು. ಕಲಾವಂತ ವಾದನಪಟುಗಳಾದರು. ಅವರೀಗ ಶ್ರೀ ಗುಡುವರ್ಯರ ನಾಟಕಕಂಪನಿಯಲ್ಲಿ ದಿಲ್‍ರುಬಾ ನುಡಿಸಿ ಸೇವೆ ಸಲ್ಲಿಸುತ್ತಿದ್ದಾರೆ. ಅವರೊಬ್ಬ ಒಳ್ಳೆಯ ಕಲಾವಂತರಾಗಿ ಪ್ರಗತಿಪಥದಲ್ಲಿ ಮುನ್ನಡೆಯುತ್ತಿದ್ದಾರೆ.



ಶ್ರೀ ಬಾಲಚಂದ್ರಸ್ವಾಮಿ ಹಿರೇಮಠ ಚಿಕ್ಕಮಣ್ಣೂರು ಅವರು ಪುರಾಣ, ಕೀರ್ತನ ಮುಂತಾದ ರೀತಿಯಿಂದ ಧರ್ಮೋಪದೇಶ ಮಾಡಿ ಸಮಾಜಸೇವೆ ಮಾಡಬೇಕೆಂಬ ಹಂಬಲದಿಂದ ೧೯೫೫ರಲ್ಲಿ ಹಿರೇಹಾಳದ ಶ್ರೀ ಶಿವಯ್ಯನವರ ಪ್ರೇರಣೆಯಿಂದ ಶ್ರೀ ಪುಟ್ಟರಾಜರ ಆಶ್ರಮಕ್ಕೆ ಬಂದು ಸೇರಿದರು. ಗುರುವಿನ ಅಪ್ಪಣೆಯಂತೆ ಇವರು ನಾಟ್ಯಾಭಿನಯವನ್ನು ಪ್ರದರ್ಶಿಸಲು ಮನಸ್ಸು ಮಾಡಿದರು. ಶ್ರೀ ಕುಮಾರೇಶ್ವರ ನಾಟ್ಯಸಂಘದಲ್ಲಿ ಇವರು ಸೇವಕನಿಂದ ರಾಜನವರೆಗೂ ಸ್ತ್ರೀ ಪುರುಷ ಪಾತ್ರಗಳನ್ನು ಬಹು ಸಜವಾಗಿ ಅಭಿನಯಿಸಿ ಗುರುಕೃಪೆಗೆ ಪಾತ್ರರಾಗಿ 'ನಾಟ್ಯಕೋವಿದ' ರೆಂದು ಹೆಸರುಗಳಿಸಿರುವರು. ಶ್ರೀ ಪುಟ್ಟರಾಜರ ಶಿಷ್ಯರಲ್ಲಿ ಇವರೊಬ್ಬ ನುರಿತ ಮತ್ತು ಆದರ್ಶ ಅಭಿನಯ ಕಲಾವಿದರಾಗಿದ್ದಾರೆ.



ಶ್ರೀ ವೀರೇಶ್ವರ ಮದರಿ 'ಸಂಗೀತ ವಿಶಾರದ' ಅವರು ಕರ್ನೂಲ ಜಿಲ್ಲೆಯ ಆದವಾನಿ ತಾಲೂಕಿನ ಮದರಿ ಗ್ರಾಮದಲ್ಲಿ ೧೯೪೪ ರಲ್ಲಿ ಜನ್ಮವೆತ್ತರು ಬಾಲ್ಯ ದಿಂದಲೇ ಇವರಲ್ಲಿ ಸಂಗೀತಕಲೆಯು ಕಳೆಗೊಂಡಿತು. ೧೯೫೭ ರಲ್ಲಿ ಗುರುವರ್ಯ ಪಂ. ಪುಟ್ಟರಾಜರ ಪದತ-ಲದಲ್ಲಿ ಕುಳಿತು ಸಂಗೀತವಿದ್ಯ ಸಾಧನೆಗೆ ಪ್ರಾರಂಭಿಸಿದರು ವಾಯ್‌ಲನ್ ವಾದನಕಲೆಯು ಇವರಿಗೆ ಸಂಪೂರ್ಣವಾಗಿ ಕರಗತವಾಗಿದೆ. ಧಾರವಾಡ ಆಕಾಶ ವಾಣಿಯು ವತಿಯಿಂದ ತರುಣಕಲಾವಿದರಾಗಿ ಆರಿಸಲ್ಪಟ್ಟು ೧೯೬೩ ರಲ್ಲಿ ದಿಲ್ಲಿಗೆ ಹೋಗಿ ಅಲ್ಲಿ ತಮ್ಮ ಕಲೆಗಾರಿಕೆಯ ಪ್ರದರ್ಶನವನ್ನು ಮಾಡುವ ಭಾಗ್ಯ ಪಡದಿರುವರು. ಅವರೊಬ್ಬ ಸತತಾಭ್ಯಾಸಿ ಕಲೆಗಾರರಾಗಿ ಅಭ್ಯುದಯದ ಮಾರ್ಗದಲ್ಲಿ ಮುನ್ನಡೆದಿದ್ದಾರೆ.



ಶ್ರೀ ಶಿವಪ್ಪ ಲಾಯದಗುಂದಿ (ಜಿ. ವಿಜಾಪುರ) ಅವರು ಚಿಕ್ಕಂದಿನಲ್ಲಿಯೇ ಸಂಗೀತದ ನಾದದಲ್ಲಿ ಬೆಳೆದವರು. ೧೯೫೭ ರಲ್ಲಿ ಶ್ರೀ ಪುಟ್ಟರಾಜರಲ್ಲಿ ಶಾಸ್ತ್ರೀಯವಾಗಿ ಸಂಗೀತ ವಿದ್ಯೆಯನ್ನು ಪಡೆಯುವ ಲವಲವಿಕೆಯಿಂದ ಬಂದರು. ಅಭಿನಯಕಲೆಯಲ್ಲಿಯೂ ಗುರುಗಳ ಪ್ರೇರಣೆಯಂತೆ ಮುಂದುವರೆದರು. ಅವರೀಗ ಗುರುಗಳ ನಾಟ್ಯಸಂಸ್ಥೆಯಲ್ಲಿ ಅಭಿನಯ ಕಲಾವಿದರಾಗಿ ಸಂಸ್ಥೆಯ ಸೇವೆಯನ್ನು ನಿಷ್ಠೆಯಿಂದ ಮಾಡುತ್ತಿರುವರು.



ಶ್ರೀ ಶರಣಪ್ಪ ಮುಸಾರಿಹಂಚಿನಾಳ ಇವರು ರಾಯಚೂರ ಜಿಲ್ಲೆಯ ಯಲಬುರ್ಗಿ ತಾಲೂಕಿನ ಮುಸಾರಿಹಂಚಿನಾಳ ಗ್ರಾಮದ ಬಜಂತ್ರಿ ಮನೆತನದಲ್ಲಿ ಜನ್ಮ ತಾಳಿದರು. ಇವರು ಪುಟ್ಟರಾಜ ಗುರುಗಳಲ್ಲಿ ವಾದನ ಕಲೆಯನ್ನು ಶಾಸ್ತ್ರೀಯವಾದ ಅಭ್ಯಾಸ ಪಡೆದಿರುವರು. ಕ್ಲಾರೋನೆಟ್ ವಾದ್ಯವನ್ನು ಬಹು ಇಂಪಾಗಿ ನುಡಿಸುತ್ತಾರೆ. ಗುರುವರ್ಯ ನಾಟ್ಯಸಂಘದ ಅಭಿನಯವು ಇವರ ವಾದನ ಕಲೆಯಿಂದ ಬಹು ಕಳೆಗಟ್ಟಿದೆ. ಧಾರವಾಡ ಬಾನುಲಿ

ಕೇಂದ್ರದಲ್ಲಿಯೂ ಇವರು ಭಾಗವಹಿಸಿ ಜನಪ್ರಿಯರೂ ಕಲಾವಿದರಿಂದ ಸನ್ಮಾನ್ಯರೂ ಆಗಿರುವರು.



ಶ್ರೀ ಬಸವಲಿಂಗಯ್ಯ ಚಿತ್ತರಗಿ ಅವರು ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನ ಚಿತ್ತರಗಿ ಗ್ರಾಮದಲ್ಲಿ ೧೯೪೫ರಲ್ಲಿ ಜನಿಸಿದರು. ಸಂಗೀತ ಕಲಿಯಬೇಕೆಂಬ ಆಶೆಯಿಂದ ೧೯೪೮ರಲ್ಲಿ ಪೂಜ್ಯ ಪುಟ್ಟರಾಜರ ಆಶ್ರಯ ಕೋರಿ ಬಂದರು. ಅವರು ಸಂಗೀತ ವ್ಯಾಸಂಗವನ್ನು ಮಾಡಿ ಕಲಾರಾಧನೆಯ ಗರಡಿಯಲ್ಲಿ ಪಡೆಯುತ್ತಿರುವರು .ಉದಯೋನ್ಮುಖ ಕಲಾವಂತರಾಗಿರುವರು.

ಶ್ರೀ ಚನ್ನವೀರ ಬನ್ನೂರ ಅವರು ಧಾರವಾಡ ಜಿಲ್ಲೆಯ ಸಿಗ್ಗಾವ ತಾಲೂಕಿನ ಬನ್ನೂರ ಗ್ರಾಮದಲ್ಲಿ ೧೯೪೫ ರಲ್ಲಿ ಜನನ ತಾಳಿದರು. ಇವರಿಗೆ ಸಂಗೀತ ಕಲೆಯು ತಂದೆಯವರಿಂದ ಬಳುವಳಿಯಾಗಿ ಬಂದಿತು. ೧೯೫೯ ರಲ್ಲಿ ಅವರು ಪಂ. ಪುಟ್ಟರಾಜರ ಆಶ್ರಯದಲ್ಲಿ ಸಂಗೀತ ಶಿಕ್ಷಣ ಪಡೆಯಲು ಬಂದರು. ಅವರು ಸತತ ಪರಿಶ್ರಮ ವಹಿಸಿ ಕಲಾಸಾಧನೆ ಮಾಡುತ್ತ ಗುರುವಿನ ಪ್ರಸಾದ ಪಡೆಯುವ ಪ್ರಯತ್ನದಲ್ಲಿರುವರು.



# ಶಿವ ಕೀರ್ತನಕಾರರು

ಕೀರ್ತನವು ಧರ್ಮಪ್ರಸಾರಕ್ಕೆ ಬಹು ಸಹಾಯಕಾರಿಯೆಂದು ಲಿಂ. ಹಾನಗಲ್ಲ ಶ್ರೀಗಳವರು ಬಗೆದಿದ್ದರು. ಸಂಗೀತಮಯವಾದ ಕೀರ್ತನವು ಸಾಮಾನ್ಯರ ಮನವನ್ನು ಪಾವನಗೊಳಿಸಬಲ್ಲುದು. ಅದಕ್ಕೆ ತಕ್ಕಂತೆ ವಚನ ಶಾಸ್ತ್ರ, ಆಗಮ, ಉಪನಿಷತ್ತು, ಭಾಷ್ಯ, ಸಾಹಿತ್ಯ ನೀತಿ ಶಾಸ್ತ್ರಗಳು ಸಮ್ಮಿಳಿತವಾದರೆ ಕೇಳುವದೇನು? ಈ ದಿಶೆಯಲ್ಲಿ ಶ್ರೀ ಗಳವರು ಅನೇಕ ಶಿವಕೀರ್ತನಕಾರರನ್ನು ತರಬೇತುಗೊಳಿಸಿ ಅವರಿಂದ ನಾಡಿನ ಮೂಲೆ ಮೂಲೆ ಯಲ್ಲಿಯೂ ಧಾರ್ಮಿಕ ಪ್ರಸಾರವಾಗಿ ಜನತೆಯ ಜೀವನ ಹಸನಾಗುವ ಮಹತ್ಕಾರ್ಯ ಮಾಡಿದರು. ಅವರ ಕೃಪಾಶ್ರಯದಲ್ಲಿ ಅನೇಕ ಶಿವಕೀರ್ತನಕಾರರು ಶಿಕ್ಷಣ ಪಡೆದು ಲೋಕಪ್ರಿಯರಾದರು.

೧. ಶ್ರೀ ಬಸವಲಿಂಗ ಶಾಸ್ತ್ರಿಗಳು, ದೇವಪುರ (ದ್ಯಾವಾಪುರ)
೨. ಶ್ರೀ ಮಲ್ಲಿಕಾರ್ಜುನ ಶಾಸ್ತ್ರಿಗಳು, ಶಿವಣಗಿ
೩. ಶ್ರೀ ಬಸವಲಿಂಗ ಶಾಸ್ತ್ರಿಗಳು, ಮತ್ತಿಕಟ್ಟಿ
೪. ಶ್ರೀ ಇಂದುಧರ ಶಾಸ್ತ್ರಿಗಳು
೫. ಶ್ರೀ ಶ್ರೀಕಂಠಶಾಸ್ತ್ರಿಗಳು, ನಲವಡಿ
೬. ಶ್ರೀ ಸದಾಶಿವ ಶಾಸ್ತ್ರಿಗಳು, ಹುಕ್ಕೇರಿ
೭. ಶ್ರೀ ಮಹಾಲಿಂಗಪ್ಪನವರು, ದಾವಣಗೆರೆ
೮. ಶ್ರೀ ವೀರಯ್ಯನವರು, ಹಿರೇಹಾಳ

ಮೊದಲಾದವರು ಪ್ರಮುಖರು. ಇವರೆಲ್ಲರೂ ಪ್ರತಿ ವರ್ಷ ಶಿವರಾತ್ರಿಯ ಯಾತ್ರೆಯ ಕಾಲಕ್ಕೆ ಶಿವಯೋಗ ಮಂದಿರಕ್ಕೆ ಬಂದು ಸೇವೆ ಸಲ್ಲಿಸುವ ಪರಿಪಾಟವನ್ನಿಟ್ಟುಕೊಂಡಿದ್ದವರು.

ಶ್ರೀ ಬಸವಲಿಂಗ ಶಾಸ್ತ್ರಿಗಳು ದೇವಪುರ (ದ್ಯಾವಾಪುರ, ಬಬಲೇಶ್ವರದ ಹತ್ತಿರ) ಅವರು ಸೊನ್ನದ ಶ್ರೀ ದೇಸಾಯಿ ಅವರಲ್ಲಿ ಪುರಾಣಿಕರಾಗಿದ್ದರು.

ಬಹಳ ರಸಿಕರು; ಸಂಗೀತದಲ್ಲಿ ನಿಷ್ಣಾತರು. ಅವರ ಕಂಠ ಬಹಳ ಮಧುರ ವಾಗಿತ್ತು. ಅವರು ಹಾನಗಲ್ಲ ಶ್ರೀಗಳವರ ಸನ್ನಿಧಿಯಲ್ಲಿದ್ದುಕೊಂಡು ಅನೇಕ ಉತ್ತಮ ವಿಷಯಗಳನ್ನು ಸಂಗ್ರಹಿಸಿ ತಿಳಿದುಕೊಂಡಿದ್ದರು. ಶ್ರೀಗಳವರ ಅಪ್ಪಣೆ ಯಂತೆ ಕೀರ್ತನ ರೂಪವಾಗಿ ಶಿವಧರ್ಮತತ್ವಗಳನ್ನು ಸಮಸ್ತ ಮತೀಯರಿಗೂ, ಮನವರಿಕೆಯಾಗುವಂತೆ ಬೋಧಿಸುತ್ತಿದ್ದರು. ಅವರು ಮೈಸೂರು, ಬೆಂಗಳೂರು ಬಳ್ಳಾರಿ ಮೊದಲಾದ ಕಡೆ ಸಂಚರಿಸಿ ಧರ್ಮಬೋಧೆ ಮಾಡಿದರು. 'ಕೀರ್ತನ ವಿಶಾರದ' ರೆಂದು ಪ್ರಸಿದ್ಧಿ ಪಡೆದರು. ೧೯೫೯ ರಲ್ಲಿ ಗದುಗಿನ ಧರ್ಮಾಭಿಮಾನಿ ಗಳ ಅಪೇಕ್ಷೆಯ ಮೇರೆಗೆ ಶ್ರೀ ರಾಚೋಟಿ ದೇವಸ್ಥಾನದಲ್ಲಿ ಶ್ರಾವಣಮಾಸದಲ್ಲಿ ಶಿವಕೀರ್ತನಗಳನ್ನು ಮಾಡಿದರು. ಅವರ ಕೀರ್ತನವನ್ನು ಕೇಳಲು ಜನ ಕಿಕ್ಕಿ ರಿದು ನೆರೆಯುತ್ತಿತ್ತು. ಉತ್ತಮ ಸಂಗೀತ, ತಿಳಿಹಾಸ್ಯ ಮತ್ತು ತತ್ವವಿವೇಚನೆ ಗಳಿಂದ ಅವರ ಕೀರ್ತನಗಳು ಮನಾಕರ್ಷವಾಗುತ್ತಿದ್ದವು. ಧಾರವಾಡದಲ್ಲಿ ಕೂಡಿದ ಸಾಹಿತ್ಯ ಸಮ್ಮೇಲನದಲ್ಲಿ ಸುಶ್ರಾವ್ಯವಾಗಿ ಕೀರ್ತನ ಮಾಡಿದ್ದರಿಂದ ಕನ್ನಡ ಸಾಹಿತ್ಯ ಪರಿಷತ್ತಿನವರು ಶ್ರೀ ಶಾಸ್ತ್ರಿಗಳವರಿಗೆ ಪ್ರಶಸ್ತಿ ಬಹುಮಾನಕೊಟ್ಟು ಗೌರವಿಸಿ ದರು. ಬ್ಯಾಡಗಿಯಲ್ಲಿಯೂ ಒಂದು ವರ್ಷ ಶ್ರಾವಣದಲ್ಲಿ ಅಖಂಡವಾಗಿ ಶಿವ ಕೀರ್ತನ ಮಾಡಿದರು. ಅವರು ಕೊಲ್ಲಾಪುರ, ಗಡಹಿಂಗ್ಲಜ, ಸಂಕೇಶ್ವರ, ಸೊಲ್ಲಾಪುರ ಮೊದಲಾದ ಗಡಿನಾಡಿನಲ್ಲಿಯೂ ಶ್ರೀಗಳವರೊಂದಿಗೆ ಇದ್ದು ಶಿವಕೀರ್ತನರೂಪದಿಂದ ಧರ್ಮಬೋಧೆ ಮಾಡುತ್ತಿದರು.

ಅವರು ಕೊನೆಗೆ ಶ್ರೀಗಳವರ ಸನ್ನಿಧಿಯಲ್ಲಿ ಶಿವಯೋಗಮಂದಿರದಲ್ಲಿಯೇ ೧೯೬೪ ರಲ್ಲಿ ಶಿವನ ಧ್ಯಾನವನ್ನು ಮಾಡುತ್ತ 'ಬೇರೊಂದು ಪದವಿಯನೊಲ್ಲೆ....' ಎಂಬ ಶ್ರೀ ನಿಜಗುಣರ ಅಧ್ಯಾತ್ಮ ಗೀತವನ್ನು ವಟುಗಳಿಂದ ಹಾಡಿಸಿ ಕೇಳುತ್ತಲೇ ಲಿಂಗೈಕ್ಯರಾದರು. 'ಶರಣರ ಗುಣ ಮರಣದಲ್ಲಿ' ಎನ್ನುವವಕ್ಕೆ ಶ್ರೀ ಬಸವಲಿಂಗ ಶಾಸ್ತ್ರಿಗಳ ಜೀವನ ಒಂದು ಆದರ್ಶ ನಿದರ್ಶನ.

**ಶ್ರೀ ವೀರಯ್ಯ ಶಾಸ್ತ್ರಿಗಳು ಹಿರೇಹಾಳ** ( ತಾ. ರೋಣ ) ಅವರು ಕ್ರಿ. ಶ. ೧೯೦೮ ರಲ್ಲಿ ನವಲಗುಂದ ತಾಲೂಕಿನ ನಾಯಕನೂರಲ್ಲಿ ಜನ್ಮವೆತ್ತಿ ದರು. ಬಾಗಿಲುಕೋಟೆಯಲ್ಲಿ ಮುಲ್ಕಿಪರೀಕ್ಷೆಯವರೆಗೆ ಕನ್ನಡ ಕಲಿತು ಸಂಸ್ಕೃತ ಪಾಠಶಾಲೆಯಲ್ಲಿ ಕನ್ನಡ-ಸಂಸ್ಕೃತ ಭಾಷೆಗಳಲ್ಲಿ ಪ್ರೌಢಕಾವ್ಯ ಗ್ರಂಥಗಳನ್ನು ಅಭ್ಯಾಸ ಮಾಡಿದರು. ನಂತರ ಕೆಲವು ವರ್ಷ ಯಲಬುರ್ಗಿ ತಾಲೂಕಿನ ಇಟಗಿ



ದೇಸಾಯರ ವಾಡೆಯಲ್ಲಿ ಗಾವಠಿ ಶಾಲೆಯ ಶಿಕ್ಷಕರಾಗಿದ್ದರು. ಪರಮಪೂಜ್ಯ ವಿಜಯ ಮಹಾಂತಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಹಾನಗಲ್ಲ ಶ್ರೀಗಳವರು ಮಠದ ವ್ಯವಸ್ಥೆಗಾಗಿ ಇಲಕಲ್ಲ ಪ್ರಾಂತಕ್ಕೆ ದಯಮಾಡಿಸಿದ್ದರು. ಅಮರಾವತಿಯ ದೇಸಾಯರ ಮನೆಯಲ್ಲಿ ಶ್ರೀ ವೀರಯ್ಯನವರು ಮೊಟ್ಟಮೊದಲು ಶ್ರೀಗಳವರ ದರ್ಶನ ಪಡೆದರು. ಅವರ ಅಪ್ಪಣೆಯಂತೆ ಶಿಕ್ಷಕ ವೃತ್ತಿಯನ್ನು ಬಿಟ್ಟು ಶಿವಕೀರ್ತನಕಾರರಾದರು. ಶ್ರೀ ವೀರಯ್ಯನವರು ಬಹಳ ವಿನೋದಪ್ರಿಯರು; ಹಾಸ್ಯರಸಪಟುಗಳು. ಶ್ರೀಗಳವರ ಮಾರ್ಗದರ್ಶನದಲ್ಲಿ ಶ್ರೀ ವೀರಯ್ಯನವರು ಧಾರ್ಮಿಕ ವಿಷಯವನ್ನು ಸಂಗ್ರಹಿಸಿದರು. ಅದನ್ನು ಆಗಾಗ ಹಾಸ್ಯರಸದ ಪುಟಕ್ಕಿಟ್ಟು ಬಹಳ ಮಾರ್ಮಿಕವಾಗಿ ಜನತೆಯು ಮೆಚ್ಚುವಂತೆ ವಿವೇಚಿಸುತ್ತಿದ್ದರು. ಅವರು ಬಿಡುವಿದ್ದಾಗ ಶಿವಯೋಗಮಂದಿರದಲ್ಲಿ ಶ್ರೀಗಳವರ ಸನ್ನಿಧಿಯಲ್ಲಿದ್ದು ವೀರಶೈವಧರ್ಮ, ಸರ್ವಧರ್ಮಸಮನ್ವಯ ದೃಷ್ಟಿ ಮೊದಲಾದ ವಿಷಯಗಳ ಬಗ್ಗೆ ಕನ್ನಡ-ಸಂಸ್ಕೃತ ಗ್ರಂಥಗಳನ್ನು ಅಭ್ಯಾಸ ಮಾಡಿ ತಮ್ಮ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ನಾಡಿನಲ್ಲೆಲ್ಲ ಹಳ್ಳಿಗಳಲ್ಲಿ ಪಟ್ಟಣಗಳಲ್ಲಿಯೂ ಶಿವಕೀರ್ತನೆಗಳಿಂದ ಜನರಲ್ಲಿ ಜ್ಞಾನದ ಬೆಳಗನ್ನು ಮೂಡಿಸಿದರು. ಅವರ ಕೀರ್ತನ ಕಲೆಯನ್ನು ನೋಡಿ ಶಿವಯೋಗಮಂದಿರ ಸಂಸ್ಥೆಯವರು 'ಕೀರ್ತನ ಕಲಾ ಕುಶಲ' ಎಂದು, ನವಿಲುಗುಂದದ ಮಹಾಜನರು 'ಕೀರ್ತನ ವಿಶಾರದ' ಎಂದು, ಗುಳೇದಗುಡ್ಡದ ನಾಗರಿಕರು 'ಕೀರ್ತನ ಪ್ರವೀಣ' ಎಂದು ಪ್ರಶಸ್ತಿಗಳನ್ನು ಕೊಟ್ಟು ಗೌರವಿಸಿರುವರು. ಶ್ರೀ ವೀರಯ್ಯ ಶಾಸ್ತ್ರಿಗಳವರು ತಮ್ಮ ವಾರ್ಧಕ್ಯದಲ್ಲಿಯೂ ಪ್ರತಿವರ್ಷ ಮಂದಿರಕ್ಕೆ ಬಂದು ಸೇವೆಯನ್ನು ಸಲ್ಲಿಸುವ ಪರಿಪಾಟವನ್ನು ಬಿಟ್ಟಿರಲಿಲ್ಲ. ಶ್ರೀ ವೀರಯ್ಯನವರು ತಮ್ಮ ಕೀರ್ತನಗಳಲ್ಲಿ ಪೂಜ್ಯ ಲಿಂ. ಹಾನಗಲ್ಲ ಶ್ರೀಗಳವರು ಬೋಧಿಸಿದ ವೀರಶೈವ ಆಧ್ಯಾತ್ಮ ವಿದ್ಯೆಯನ್ನು ಸಾಮಾನ್ಯ ಜನಮನ ಹಿಡಿಸುವಂತೆ ತಿಳಿಯಾಗಿ ಹಾಸ್ಯದ ಹೊನಲನ್ನು ಹರಿಸಿ ವಿವೇಚಿಸುತ್ತಿದ್ದರು. ಅವರು ದ್ಯಾಂಪುರದ ಮಹಾಲಿಂಗಯ್ಯನವರು, ದ್ಯಾವಾಪುರದ ಬಸವಲಿಂಗ ಶಾಸ್ತ್ರಿಗಳು, ದ್ಯಾಂಪುರದ 'ಕವಿರತ್ನ' ಚನ್ನಕವಿಗಳು, ಲಿಂ. ಪಂಚಾಕ್ಷರ ಗವಾಯಿಗಳು ಮೊದಲಾದ ಅನುಭವಿಗಳ ಸತ್ಸಂಗದಲ್ಲಿದ್ದು ಅನೇಕ ವಿಷಯಗಳನ್ನು ಸಂಗ್ರಹಿಸಿ ರಸವತ್ತಾದ ತಾತ್ವಿಕವಾದ ಶಿವಕೀರ್ತನಗಳನ್ನು ಕಟ್ಟಿದ್ದರು. ಅವರು ಲಿಂಗೈಕ್ಯರಾದುದು ಶಿವಕೀರ್ತನಕಾರ ಸಮಾಜಕ್ಕೆ ತುಂಬಿಬಾರದ ಹಾನಿಯಾಗಿದೆ

ಶ್ರೀ ಜಿ. ವೀರಾರ್ಯ ಶಾಸ್ತ್ರಿ ಹಿರೇಮಠ, ಸುರಕೋಡ (ತಾಲೂಕ ನವಲಗುಂದ) ಅವರು ಕನ್ನಡ ವ್ಯಾಸಂಗವನ್ನು ಪೂರಯಿಸಿ ಗದುಗಿನ ಜಗದ್ಗುರು ಶ್ರೀ ತೋಂಟದಾರ್ಯ ಪಾಠಶಾಲೆಯಲ್ಲಿ ಸಂಸ್ಕೃತ ನಾಟಕ ಮತ್ತು ಕಾವ್ಯಗಳ



ಅಭ್ಯಾಸವನ್ನು ಮಾಡಿ ಶ್ರೀ ಪಂಚಾಕ್ಷರ ಗವಾಯಿಗಳವರಲ್ಲಿ ಸಂಗೀತವನ್ನು, ದ್ಯಾವಾಪುರದ ಶ್ರೀ ಬಸವಲಿಂಗ ಶಾಸ್ತ್ರಿಗಳವರಲ್ಲಿ ಕೀರ್ತನ ಕಲೆಯನ್ನು ಕಲಿತರು. ಹಾನಗಲ್ಲ ಶ್ರೀಗಳವರ ಕೃಪಾಬಲದಿಂದ ಉತ್ತಮ ಕೀರ್ತನಕಾರರಾಗಿ ಶಿರಿಯಾಳಕೊಪ್ಪ (ಜಿ. ಶಿವಮೊಗ್ಗ), ಬ್ಯಾಡಗಿ, ಗದಗ, ಸದಲಗಾ ( ಜಿ. ಬೆಳಗಾಂವ ), ತಾಳಿಕೋಟೆ, ಮೊರಬ (ಜಿ. ಧಾರವಾಡ) ಮೊದಲಾದ ಕಡೆ ಕೀರ್ತನಗಳನ್ನು ಮಾಡಿ ಅನೇಕ ಪಂಡಿತರು, ಸ್ವಾಮಿಗಳು ಮತ್ತು ನಾಗರಿಕರಿಂದ ಬಹುವಾಗಿ ಮನ್ನಣೆಯನ್ನು ಪಡೆದಿರುವರು. ಸವದತ್ತಿಯಲ್ಲಿ 'ತರ್ಕನ್ಯಾಯ ವೇದಾಂತಾಚಾರ್ಯ' ಶ್ರೀ ನೀಲಕಂಠ ಶಿವಾಚಾರ್ಯ ಸ್ವಾಮಿಗಳು ಬೃಹನ್ಮಠ ಹೂಲಿ ಅವರ ಅಧ್ಯಕ್ಷತೆಯಲ್ಲಿ ಕೀರ್ತನ ಮಾಡಿ 'ಕೀರ್ತನ ಶಿರೋಮಣಿ' ಎಂಬ ಪ್ರಶಸ್ತಿಯನ್ನು ಸಂಪಾದಿಸಿದರು. ಇವರು ಶಿವಕೀರ್ತನ ಮುಖವಾಗಿ ಧರ್ಮಬೋಧೆಯ ಸೇವೆಯನ್ನು ಮಾಡುತ್ತಿರುವರು.

ಶ್ರೀ ಗುರುಲಿಂಗ ಶಾಸ್ತ್ರಿಗಳು, ಸಾಲಿಮಠ ಬೀಳಗಿ ಅವರು ೧೯೩೪ರಲ್ಲಿ ನರಗುಂದದಲ್ಲಿ ಪಂ. ಕೊಂಗವಾಡ ಗೌರೀಶಂಕರ ಶಾಸ್ತ್ರಿಗಳಿಂದ ಜ್ಯೋತಿಷ್ಯ, ವೈದಿಕ ಕಲಿತು ನಂತರ ಪಂ. ಪಂಚಾಕ್ಷರ ಗವಾಯಿಗಳಲ್ಲಿ ೩ ವರ್ಷ ಕೀರ್ತನ, ಪುರಾಣ ಹೇಳುವ ಶಿಕ್ಷಣ ಪಡೆದರು. ೧೯೩೧-೩೨ರಲ್ಲಿ ಬೆಂಗಳೂರ ಸರ್ಪಭೂಷಣ ಮಠದಲ್ಲಿದ್ದು ಕನ್ನಡ ಶಿಕ್ಷಣವನ್ನು ಪಡೆದು ಪುರಾಣ



ಕೀರ್ತನಗಳಿಂದ ಧರ್ಮಪ್ರಚಾರ ಕಾರ್ಯವನ್ನು ಮಾಡುತ್ತಿರುವರು. ನರಗುಂದ, ಹಾನಗಲ್ಲ, ನೀಲಗುಂದ, ನಿಡಗುಂದಿ ಕೊಪ್ಪ, ಬಿದರಿ, ಬಾಗಲಕೋಟೆ, ಕೊತಬಾಳ, ಕೊಪ್ಪಳ, ಸೂಡಿ ಮೊದಲಾದ ಗ್ರಾಮಗಳಲ್ಲಿ ಕೀರ್ತನ, ಪುರಾಣಗಳನ್ನು ಹೇಳಿ ಮನ್ನಣೆ ಪಡೆದಿರುವರು.

ಮಹಾದೇವ ಶಾಸ್ತ್ರಿಗಳು, ಹಿರೇಮಠ, ಕೃಷ್ಣಾಪುರ ಅವರು ಹದಿನಾಲ್ಕನೆಯ ವಯಸ್ಸಿನಲ್ಲಿಯೇ ಪಂ. ಪಂಚಾಕ್ಷರ ಗವಾಯಿಗಳವರಲ್ಲಿ ಹತ್ತು ವರ್ಷ

ಸಂಗೀತ ವಿದ್ಯೆಯನ್ನು ಕಲಿತರು. ನಂತರ ಪಂ. ಪುಟ್ಟರಾಜ ಗವಾಯಿಗಳ ಕೃಪೆಗೆ ಪಾತ್ರರಾಗಿ ಸಾಹಿತ್ಯ-ನಾಟ್ಯ ಕಲೆಯಲ್ಲಿ ಪ್ರವೀಣರಾದರು. ಗುರುಗಳ ಅಪ್ಪಣೆ ಪಡೆದು ಬಳ್ಳಾರಿ, ಗುಲಬುರ್ಗಾ ಜಿಲ್ಲೆಗಳಲ್ಲಿ ಶಿವಕೀರ್ತನರೂಪದಿಂದ ತತ್ವಬೋಧೆಯ ಸೇವೆಯನ್ನು ಕೈಕೊಂಡಿರುವರು. ಬಳ್ಳಾರಿ ಜಿಲ್ಲೆಯ ಅಚ್ಚಳಿಯಲ್ಲಿ ಸೇರಿದ ಪ್ರಣವಾನುಭವ ಸಮ್ಮೇಲನವಲ್ಲಿ ಕೀರ್ತನ ಮಾಡಿ 'ಕೀರ್ತನ ರತ್ನ'ವೆಂಬ ಪ್ರಶಸ್ತಿಯನ್ನು ಪಡೆದಿರುವರು. ಗುಲಬುರ್ಗಾ ಜಿಲ್ಲೆಯ ದುಧನಿಯಲ್ಲಿ ನಾಡ ಹಬ್ಬದ ಉತ್ಸವಗಳ ಕಾರ್ಯಕ್ರಮಗಳಿಗೆ ಶ್ರೀ ಶಾಸ್ತ್ರಿಗಳ ಕೀರ್ತನಗಳು ಬಹಳ ಕಳೆತಂದು ಕೊಟ್ಟವು. ಅಲ್ಲಿಯ ತಪಸ್ವಿ ಶ್ರೀಗಳವರು ಶಾಸ್ತ್ರಿಗಳವರಿಗೆ ಪ್ರಶಸ್ತಿ ಗಳನ್ನು ದಯಪಾಲಿಸಿದ್ದರು ಶ್ರೀ ಶಾಸ್ತ್ರಿಗಳು ಲಿಂಗಪೂಜಾನಿಷ್ಠರೂ ಆಗಿರುವರು.

ಶ್ರೀ ಚನ್ನಬಸಯ್ಯಸ್ವಾಮಿ, ವಿಶ್ವನಾಥಮಠ, ಧೋತರಗಾಂವ ಅವರು ಸೊಲ್ಲಾಪುರದಲ್ಲಿ ಶ್ರೀಮಂತ ವಾರದವರ ಸಂಸ್ಕೃತ ಪಾಠಶಾಲೆಯಲ್ಲಿ ಪಂ. ಜಗದೀಶ ಶಾಸ್ತ್ರಿಗಳವರಲ್ಲಿ ಸಂಸ್ಕೃತ ವ್ಯಾಸಂಗವನ್ನು ಮಾಡಿದರು. ಕೆಲವು ವರ್ಷ ಹರಪನಹಳ್ಳಿಯಲ್ಲಿದ್ದು 'ಭಾರತ ಜ್ಯೋತಿಷ್ಯ ವೈದ್ಯಾಲಯ'ದಲ್ಲಿ ಜ್ಯೋತಿಷ್ಯವನ್ನು ಕಲಿತರು. ಇವರಿಗೆ ಸಂಗೀತ ಮತ್ತು ಕೀರ್ತನ ಕಲೆಯಲ್ಲಿ ಚಿಕ್ಕಂದಿನಲ್ಲಿಯೇ ಅಭಿರುಚಿ ಇದ್ದಿತು. ಪಂ. ಪುಟ್ಟರಾಜ ಗವಾಯಿಗಳವರಲ್ಲಿ ಐದು ವರ್ಷಗಳವರೆಗೆ ಸಂಗೀತ ಮತ್ತು ಕೀರ್ತನ ಕಲೆಯನ್ನು ಚನ್ನಾಗಿ ಅಭ್ಯಾಸ ಮಾಡಿದರು. ಈಗ ಇವರು ಗುಲಬುರ್ಗಾ ಪ್ರಾಂತದಲ್ಲಿ ಹೆಸರಾದ ಕೀರ್ತನಕಾರರಾಗಿ ಧರ್ಮಬೋಧೆ ಯನ್ನು ಮಾಡುತ್ತಿದ್ದಾರೆ. ಶ್ರೀ ಚೆನ್ನಬಸಯ್ಯಸ್ವಾಮಿಗಳ ವಾಣಿ ಬಹಳ ವೃಧು ಮಧುರ. ಅವರ ತಿಳಿಯಾದ ಹಾಸ್ಯಮಯ ಉಪನ್ಯಾಸ ಶೈಲಿ ಬಹಳ ಮನೋಹರ.

ಶ್ರೀ ಟಿ. ಎಂ. ಚಂದ್ರಶೇಖರ ಶಾಸ್ತ್ರಿಗಳು, ದಾವಣಗೆರೆ ಅವರು ಕರ್ಜಗಿ (ತಾ. ಹಾವೇರಿ) ಗ್ರಾಮದವರು. ಇಂಗ್ಲೀಷ S. S. L. C. ಪಾಸಾಗಿ ಸಿಂದಗಿಯ ಶ್ರೀ ಘ. ಚ. ಶಾಂತವೀರ ಪಟ್ಟಾಧ್ಯಕ್ಷರ ಕೃಪೆಯಿಂದ ಗದಗಿನ ಸಂಗೀತ ಶಾಲೆಯಲ್ಲಿ ಪ್ರವೇಶ ಪಡೆದು ಮೂರು ವರ್ಷ ಪಂ. ಪುಟ್ಟರಾಜ ಗವಾಯಿಗಳಲ್ಲಿ ಸಂಗೀತ-ಸಾಹಿತ್ಯ ಅಭ್ಯಾಸ ಮಾಡಿ ಕೀರ್ತನ ಕಲೆಯನ್ನು ಸಾಧಿಸಿದರು. ಕೀರ್ತನ ಪುರಾಣಗಳಿಂದ ಸಂಸ್ಕೃತಿ ಪ್ರಸಾರ ಮಾಡುತ್ತಿದ್ದಾರೆ. 'ಪಂಚಾಕ್ಷರಿ ಸ್ತೋತ್ರ ಮಂಜರಿ' ಮುಂತಾಗಿ ಕಿರು ಸಾಹಿತ್ಯ ರಚನೆಗಳನ್ನು ಮಾಡಿರುವರು.



ಶ್ರೀ ಕಲ್ಲಿನಾಥ ಶಾಸ್ತ್ರಿ, ಹಿರೇಮಠ, ಆರ್. ಎಂ. ಸಿ. ಅವರು ಕೊಪ್ಪಳನಾಡಿನ ಯಲಬುರಗಿ ತಾಲೂಕಿನಲ್ಲಿಯ ದ್ಯಾಂಪುರ ಗ್ರಾಮದವರು. ಅವರ ತಂದೆಯವರಾದ ವೀರಯ್ಯನವರು ಶಿಕ್ಷಕರಾಗಿದ್ದು ನಿಜಗುಣರ ಗ್ರಂಥಗಳಲ್ಲಿ ಷಡಕ್ಷರ ಕವಿಯ ಕಾವ್ಯ-ಗಳಲ್ಲಿಯೂ ಪರಿಣತಿ ಪಡೆದವರು. ಶ್ರೀ ಕಲ್ಲಿನಾಥ ಶಾಸ್ತ್ರಿಗಳವರು ಕನ್ನಡ ಮತ್ತು ಸಂಸ್ಕೃತ ಕಾವ್ಯಗಳ ಅಧ್ಯಯನವನ್ನು ಚೆನ್ನಾಗಿ ಮಾಡಿ ಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳಸಿಕೊಂಡರು. ಲೇಖನ ಭಾಷಣ ಕಲೆಯು ಸಾಹಿತ್ಯಾಭ್ಯಾಸ ದಿಂದ ಬಲಿಯಿತು. ಆಗಾಗ ಪತ್ರಿಕೆಗಳಲ್ಲಿ ಬರೆಹಗಳನ್ನು ಕವನಗಳನ್ನು ಬರೆಯುವ ಅಭ್ಯಾಸವನ್ನಿಟ್ಟುಕೊಂಡರು. ಪಂ. ಪಂಚಾಕ್ಷರ ಗವಾಯಿಗಳವರಲ್ಲಿ ಸಂಗೀತ ಕಲಿತು ಪುರಾಣ-ಕೀರ್ತನ ಕಲೆಯಲ್ಲಿಯೂ ಪಳಗಿದರು. ಗವಾಯಿಗಳವರ ಅಪ್ಪಣೆ ಯಂತೆ ಹುಬ್ಬಳ್ಳಿಯಲ್ಲಿ ಆಯುರ್ವೇದ ವ್ಯಾಸಂಗವನ್ನು ಪೂರಯಿಸಿದರು. ದ್ಯಾಂಪುರದಲ್ಲಿ 'ಬಸವರಾಜ ಚಿಕಿತ್ಸಾಮಂದಿರ' ವನ್ನು ಸ್ಥಾಪಿಸಿ ಜನಸೇವೆ ಯೊಂದಿಗೆ ಕನ್ನಡ ಸಾಹಿತ್ಯ ಸೇವೆಯನ್ನು ಮಾಡುತ್ತಿರುವರು.



ಶ್ರೀ ಟಿ. ಎಂ. ರೇವಣಸಿದ್ಧ ಶಾಸ್ತ್ರಿ, ಸಿರಿಗೆರೆ (ಜಿ. ಬಳ್ಳಾರಿ) ಅವರು ಗದುಗಿನ ಗವಾಯಿಗಳ ರಲ್ಲಿ ವಿದ್ಯಾಲಯದಲ್ಲಿ ಪ್ರವೇಶ ಪಡೆದು ಸಂಗೀತ-ಸಾಹಿತ್ಯ-ಕಲೆಗಳನ್ನು ಸಾಧಿಸಿ ದರು. ಗದುಗಿನ ಇಚ್ಛೆಯಿಂದ ಅವರು ಗುರುಗಳ ಅಪ್ಪಣೆಯಂತೆ ಪುರಾಣ-ಕೀರ್ತನಗಳ ಮುಖಾಂತರ ಧರ್ಮಪ್ರಸಾರ ಕಾರ್ಯದಲ್ಲಿ ತೊಡಗಿ ಸೇವೆ ಮಾಡು ತ್ತಿರುವರು. ಜನಪ್ರಿಯ ಕೀರ್ತನಕಾರರಾಗಿರುವರು.

ಶ್ರೀ ವೀರಭದ್ರಶಾಸ್ತ್ರಿ, ಕುರುಬಗೊಂಡ [ಜಿ. ಧಾರವಾಡ] ಅವರು ಗದುಗಿನಲ್ಲಿ ಜನ್ಮ ತಾಳಿದರು. ಪ್ರಾಥಮಿಕ ಶಿಕ್ಷಣ ಪಡೆದನಂತರ ವೈದಿಕ ಜ್ಯೋತಿಷ್ಯಗಳನ್ನು ಕಲಿತರು. ಸಂಗೀತ ಕಲೆಯುವ ಅಭಿಲಾಷೆಯಿಂದ ಗುರುಗಳ ವಿದ್ಯಾಲಯದಲ್ಲಿ ಪ್ರವೇಶ ಪಡೆದರು. ಪಂ. ಪುಟ್ಟರಾಜರಲ್ಲಿ ೪-೫ ವರ್ಷಗಳವರೆಗೆ ಪರಿಶ್ರಮವಹಿಸಿ ಸಂಗೀತಕಲೆಯಲ್ಲಿ ಪ್ರವೇಶ ಪಡೆದರು. ಪುರಾಣ ಕೀರ್ತನ ಕಲೆಯನ್ನು ಸಾಧಿಸಿರುವರು. ಅವರೀಗ ಜ್ಞಾನಪ್ರಸಾರಕಾರ್ಯ ಮಾಡುತ್ತಿರುವರು.



ಸಿರಿಗೆರೆಯ ಶ್ರೀ ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು ರಾಯದುರ್ಗ ತಾಲೂಕಿನ ಹಿರೇಹಾಳು ಬೃಹನ್ಮಠದ ಚರಪಟ್ಟಾಧ್ಯಕ್ಷರು. ಅವರು ಪ್ರಾರಂಭದಲ್ಲಿ ಕಂಪಲಿಯ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ-ಕನ್ನಡ ಅಭ್ಯಾಸ ಮಾಡಿದರು. ಸಿರಿಗೆರೆಯಲ್ಲಿ ಒಂದು ಪಾಠ ಶಾಲೆಯನ್ನು ತೆರೆದು ಒಬ್ಬ ಪಂಡಿತರನ್ನು ಇಟ್ಟು ೨೫ ವಿದ್ಯಾರ್ಥಿಗಳಿಗೆ ವಿದ್ಯಾದಾನ ಹಾಗೂ ಭಕ್ತರಿಗೆ ಶಿವಧರ್ಮದ ಬೋಧೆ ಮಾಡಿದರು. ಕೆಲವು ವರ್ಷ ಲಿಂ. ಹಾನಗಲ್ ಶ್ರೀಗಳವರ ಪ್ರೇರಣೆಯಂತೆ ಪಂ. ಪಂಚಾಕ್ಷರ ಗವಾಯಿಗಳವರ ಸಂಗೀತ ವಿದ್ಯಾಲಯದಲ್ಲಿ ಸಂಗೀತ—ಪುರಾಣ—ಪ್ರವಚನ ಕಲೆಗಳನ್ನು ಕಲಿತರು. ಶ್ರೀ ಗವಾಯಿಗಳು ಅವರ ಪೂಜಾನಿಷ್ಠೆ ಸಾತ್ವಿಕ ಸ್ವಭಾವವನ್ನು ಕಂಡು ಮೆಚ್ಚಿ ಅವರನ್ನೇ ತಮ್ಮ ಕ್ರಿಯಾಮೂರ್ತಿಗಳನ್ನಾಗಿ ಮಾಡಿಕೊಂಡಿದ್ದರು. ನಂತರ ಅವರು ಪ್ರತಿವರ್ಷ ಶ್ರಾವಣಮಾಸದಲ್ಲಿ ಗವಾಯಿಗಳವರ ಪುಣ್ಯಾಶ್ರಮಕ್ಕೆ ಬಂದು ಪುರಾಣ-ಪ್ರವಚನಗಳಲ್ಲಿ ಭಾಗವಹಿಸುತ್ತಿದ್ದರು. ಪಂ. ಪುಟ್ಟರಾಜರು ಶ್ರೀ ವಿರುಪಾಕ್ಷಸ್ವಾಮಿಗಳಲ್ಲಿ ಬಹಳ ವಿಶ್ವಾಸವನ್ನುಳಿಸಿಕೊಂಡು ಬಂದಿರುವರು. ಶ್ರೀ ಪುಟ್ಟರಾಜ ಗವಾಯಿಗಳು ಪರಿವಾರದೊಂದಿಗೆ ತಮ್ಮ ನಾಡಿಗೆ ಸಂಚರಿಸಿದಾಗ ಶ್ರೀ ಸ್ವಾಮಿಗಳವರು ಬಹುವಾಗಿ ಸಂಸ್ಥೆಗೆ ಸಹಾಯಮಾಡಿರುವರು.



ಶ್ರೀ ಬಸವರಾಜ ಅಮರಗೋಳ, ಅವರು ರೋಣ ಗ್ರಾಮದವರು. ೧೯೪೫ ರಲ್ಲಿ ಗುರುಗಳ ವಿದ್ಯಾಲಯದಲ್ಲಿ ಪ್ರವೇಶ ಪಡೆದು ೧೦-೧೨ ವರ್ಷಗಳ ವರೆಗೆ ಕಲಾಸಾಧನೆಯನ್ನು ಮಾಡಿ ಗಾಯನದೊಂದಿಗೆ ಹಾರ್ಮೋನಿಯಂ ತಬಲಾದಲ್ಲಿಯೂ ನಿಪುಣರಾದರು. ಒಂದು ವರ್ಷ ವಿದ್ಯಾಲಯದಲ್ಲಿ ಸಂಗೀತಶಿಕ್ಷಕರಾಗಿಯೂ ಸೇವೆ ಸಲ್ಲಿಸಿದರು. ಎರಡು ವರ್ಷಗಳ ವರೆಗೆ ನಾಟಕ ಸಂಘದಲ್ಲಿಯೂ ಹಾರ್ಮೋನಿಯಂ ಶಿಕ್ಷಕರಾಗಿದ್ದರು ತಮ್ಮ ಗ್ರಾಮದಲ್ಲಿದ್ದು ಸಂಗೀತ ವಿದ್ಯೆಯ ಪ್ರಸಾರ ಮಾಡುತ್ತಿರುವರು.

ಶ್ರೀ ಪಾವಡ ಬಸವೇಶ್ವರ ಪಟ್ಟಾಧ್ಯಕ್ಷರು, ನಾಗಠಾಣ ಅವರು ಗ್ಗಾಗಿಳರಲ್ಲಿ ಸಂಗೀತ ಸಾಹಿತ್ಯಗಳೊಂದಿಗೆ ಪುರಾಣ-ಪ್ರವಚನ ಕಲೆಗಳನ್ನು ಸಾಧಿಸಲು ಶ್ರೀ ಪಂಚಾಕ್ಷರಿ ಗವಾಯಿಗಳವರಲ್ಲಿ ಬಂದರು. ಅವರು ಶಿವಪೂಜಾ ಪ್ರೇಮಿಗಳು. ಸರಳವೃತ್ತಿಯವರು, ಆದುದರಿಂದಲೇ ಪೂಜ್ಯ ಗವಾಯಿಗಳವರು ಅವರನ್ನು ತಮ್ಮ ಕ್ರಿಯಾಮೂರ್ತಿಗಳೆಂದು ಸನ್ಮಾನಿಸುತ್ತಿದ್ದರು. ಸಂ. ಪಂಚಾಕ್ಷರ ಗವಾಯಿಗಳು ಗದುಗಿನಲ್ಲಿ ಲಿಂಗೈಕ್ಯರಾದಾಗ ಶ್ರೀ ಪಟ್ಟಾಧ್ಯಕ್ಷರು ಪೂಜ್ಯ ಹಾಲಕೆರೆಯ ಶ್ರೀ ನಿ ಪ್ರ. ಅನ್ನದಾನಿ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಲಿಂ. ಗವಾಯಿಗಳವರ ಕ್ರಿಯಾಸಮಾಧಿಯನ್ನು ವಿಧಿಪ್ರಕಾರವಾಗಿ ನೆರವೇರಿಸಿದರು.

## ಉಳಿದ ಕೆಲವು ಕಲಾವಂತರು

ಶ್ರೀ ಚನ್ನಬಸವಯ್ಯ ಸ್ವಾಮಿ, ನರೇಗಲ್ಲ ಅವರು ಸಂ. ಪಂಚಾಕ್ಷರ ಗವಾಯಿಗಳು ಮತ್ತು ಶ್ರೀ ಪುಟ್ಟರಾಜರಲ್ಲಿಯೂ ಸಾಹಿತ್ಯ-ಸಂಗೀತಗಳನ್ನು ಕಲಿತು ನಿಪುಣರಾದವರು. ಅವರಲ್ಲಿ ಅಭಿನಯವಿದ್ಯೆ ಸಹಜವಾಗಿ ಬೆಳೆದು ಬಂದಿತು ಗುರುವರ್ಯರ ಮಾರ್ಗದರ್ಶನದಂತೆ ಶ್ರೀ ಕುಮಾರ ವಿಜಯನಾಟ್ಯಸಂಸ್ಥೆಯನ್ನು ಕಟ್ಟಿ ಕಲಾಸೇವೆಯ ಪ್ರಪಂಚದಲ್ಲಿ ಪ್ರವೇಶಿಸಿದರು. ಅವರು ಕರ್ನಾಟಕದ ಎಲ್ಲಕಡೆಗೂ ಅನೇಕ ನೀತಿಬೋಧಪರ ನಾಟಕಗಳನ್ನು ಅಭಿನಯಿಸಿ ಜನರ ಮನರಂಜನೆಯ ಜೊತೆಗೆ ಸಂಸ್ಕೃತಿಪ್ರಚಾರವನ್ನು ಮಾಡುತ್ತಿರುವರು. ಅವರೊಬ್ಬ ನಿರಭಿಮಾನಿ ನಿಸ್ಪೃಹಿ ಕಲಾಪ್ರೇಮಿಗಳಾಗಿ ಜನಮಾನ್ಯರಾಗಿರುವರು.

ಶ್ರೀ ಶಿವಯ್ಯಸ್ವಾಮಿ ಮುದೇನಗುಡಿ [ತಾ. ರೋಣ] ಅವರು ಗ್ಗಾಗಿಂದಲ್ಲಿ ಶ್ರೀ ಗವಾಯಿಗಳವರ ಆಶ್ರಯದಲ್ಲಿ ಸಂಗೀತ ವಾದನಕಲೆಯನ್ನು ಕಲಿತು ಅಭಿನಯಕಲೆಯಲ್ಲಿಯೂ ಪ್ರೌಢಿಮೆಯನ್ನು ಸಂಪಾದಿಸಿರುವರು. ಹೇಮರೆಡ್ಡಿ ಮಲ್ಲಮ್ಮನ ನಾಟಕವು ಇಷ್ಟು ಜನಪ್ರಿಯವಾಗಬೇಕಾದರೆ ಅವರ ಸಹಜವಾದ ಮಲ್ಲಮ್ಮನ ಸಾಧ್ವೀ ಪಾತ್ರಾಭಿನಯವೇ ಮೂಲಕಾರಣವಾಗಿದೆ. ಈಗ ಅವರು ನರೇಗಲ್ಲ ಶ್ರೀ ಕುಮಾರವಿಜಯ ನಾಟಕ ಸಂಸ್ಥೆಯಲ್ಲಿಯೂ ಅದೇ ಪಾತ್ರವನ್ನು ಅಭಿನಯಿಸಿ ಜನಮನವನ್ನು ಸೂರೆಗೊಂಡಿರುವರು.

ಶ್ರೀ ಮರಿಸ್ವಾಮಿ ಮುದರಿ [ ಜಿ. ಕರ್ನೂಲ ] ಅವರು ಮುದರಿಯ ಹಿರಿಯ ಮಠದವರು. ಗ್ಗಾಚರಲ್ಲಿ ಶ್ರೀ ಗವಾಯಿಗಳವರಲ್ಲಿ ವಾದನವಿದ್ಯೆಯನ್ನು

ಸಂಪಾದಿಸಲು ಬಂದರು. ಹಾರ್ಮೋನಿಯಂ ಬಾರಿಸುವಲ್ಲಿ ಅವರದು ಎತ್ತಿದ ಕೈ. ಈಗ ಅವರು ನರೇಗಲ್ಲ ನಾಟ್ಯಸಂಸ್ಥೆಯಲ್ಲಿ ಹಾರ್ಮೋನಿಯಂ ಮಾಸ್ತರರಾಗಿ ಸೇವೆ ಮಾಡುತ್ತಿರುವರು.

ಶ್ರೀ ನರಸಿಂಹಾಚಾರ್ಯ ತಿಳಗುಳ (ತಾ. ಸಿಂದಗಿ) ಅವರು ೧೯೪೫ರಿಂದ ೧೯೫೯ರವರೆಗೆ ಶ್ರೀ ಗವಾಯಿಗಳವರಲ್ಲಿ ವಾದನ ಕಲೆಯ ವ್ಯಾಸಂಗ ಮಾಡಿಕೊಳ್ಳಲು, ಹಾರ್ಮೋನಿಯಂ ಮೊದಲಾದ ವಾದ್ಯಗಳಲ್ಲಿಯು ಕಲಾಸಂಪತ್ತನ್ನು ಗಳಿಸಿಕೊಂಡಿರುವರು. ಗದುಗಿನ 'ವಸಂತ ಕಲಾನಾಟ್ಯ ಸಂಘ'ದಲ್ಲಿ ಹಾರ್ಮೋನಿಯಂ ಶಿಕ್ಷಕರಾಗಿರುವರು.

## ಪ್ರಗತಿಯ ಪಥದಲ್ಲಿರುವ ವಿದ್ಯಾರ್ಥಿಗಳು

೧ ಹನುಮಂತಸಿಂಗ್, ಹಾನಗಲ್ಲ. ೨ ಸಂಗನಬಸವಾರ್ಯ, ಹಿಪ್ಪರಗಿ. ೩ ಜಯಚಂದ್ರ, ಎಕ್ಲಿವಾಲ. ೪ ಮಹಾಂತಸ್ವಾಮಿ, ಎಲಿವಾಳ. ೫ ಮಹಾದೇವಪ್ಪ, ಬೆಟಗೇರಿ. ೬ ಈಶ್ವರ, ಮೋರಗೇರಿ. ೭ ಈಶ್ವರ ಬ್ಯಾಹಟ್ಟಿ. ೮ ಗುರಲಿಂಗಸ್ವಾಮಿ ಬಸವಂತವಾಡಿ. ೯ ಅಖಂಡಪ್ಪ ಚಿತ್ತರಗಿ. ೧೦ ಷಣ್ಮುಖಯ್ಯ ಪಾವಸಕಟ್ಟಿ. ೧೧ ನೀಲಕಂಠಸ್ವಾಮಿ, ಸಾಲೋಟಗಿ. ೧೨ ರಂಗಪ್ಪ, ಗುಡೂರು. ೧೩ ಚಂದ್ರಶೇಖರ, ಕಬನೂರು. ೧೪ ಕಾಶೀಮಸಾಹೇಬ, ಲಕಮಾಪುರ. ೧೫ ಶೇಷಪ್ಪ ಗಬ್ಬೂರು. ೧೬ ಬಸವಂಣೆಯ್ಯ, ಬಸವನಕಟ್ಟಿ. ೧೭ ರುದ್ರಸ್ವಾಮಿ ಕರ್ಜಗಿ. ೧೮ ಬಸವರಾಜ, ಮಂಗಳೂರ. ೧೯ ಬಸವರಾಜ, ಸುಗೂರು. ೨೦ ಹನಮಂತಪ್ಪ ಎಮ್ಮಿಗನೂರ. ೨೧ ವೀರೇಶ್ವರ ಕೌಜಗೇರಿ. ೨೨ ಗೌಡಪ್ಪಗೌಡ ಗೊಬ್ಬೂರು. ೨೩ ಮರುಳಸಿದ್ದಯ್ಯ, ಗಜಗಿನಹಾಳ. ೨೪ ಶಿವಪೂಜಯ್ಯ, ಮಲ್ಲಾಬಾದಿ. ೨೫ ಅಣ್ಣಪ್ಪ, ಶಾರದಾಳ ೨೬ ಜಯಪ್ಪ, ಗಜೇಂದ್ರಗಡ ೨೭ ಪಂಚಾಕ್ಷರಿ ಮಣ್ಣೂರ ೨೮ ಹುಚ್ಚಯ್ಯಸ್ವಾಮಿ, ಕಟಗಿಹಳ್ಳಿ ೨೯ ರಾಚಪ್ಪ ಅಲಗೂರ ೩೦ ರುದ್ರಮುನಿಸ್ವಾಮಿ ಬರಮೂರು. ೩೧ ವಿಶ್ವನಾಥ ಉಡಚಾಣ. ೩೨ ರಂಗಪ್ಪ ಹಿರೇಹಾಳ. ೩೩ ಮೈಲಾರೆಪ್ಪ, ಹಿರೇಹಾಳ. ೩೪ ಶಿವನಗೌಡ, ದಂಡಗಿಹಳ್ಳಿ. ೩೫ ಉಜಿಣೆಪ್ಪ, ಹಿರೇಕೇರೂರು. ೩೬ ಶಿವಯ್ಯಸ್ವಾಮಿ, ಮಂಡಲಗೇರಿ. ೩೭ ಸೋಮಶೇಖರ, ಕುನ್ನಟಗಿ. ೩೮ ಬಸವರಾಜ, ದೇವಗಿರಿ. ೩೯ ರಾಜೇಸಾಹೇಬ. ೪೦ ಭೀಮೇಶಪ್ಪ ಹಿಪ್ಪರಗಿ ೪೧ ಹನುಮಂತಪ್ಪ, ಕಜ್ಜರಿ. ೪೨ ಶಿವಮೂರ್ತಿಸ್ವಾಮಿ, ಹಿರೇಮಲ್ಲೂರು. ೪೩ ವೀರಯ್ಯಸ್ವಾಮಿ, ಮ್ಯಾಗೇರಿ. ೪೪ ರೇವಣಪ್ಪ, ಬೊಮ್ಮನಹಳ್ಳಿ. ೪೫ ನಾಗರಾಜ ಸಿರಗೆರೆ. ೪೬ ಶಿವಪ್ಪ, ಸಿರಗೆರೆ. ೪೭ ಶಿವಪ್ಪ, ಕುಕನೂರು.

# ಶ್ರೀ ವೀರೇಶ್ವರ ಪುಣ್ಯಾಶ್ರಮದ ಕಾರ್ಯಕರ್ತರು

## ವ್ಯವಸ್ಥಾಪಕರು



ಶ್ರೀ ಅನ್ನದಾನಯ್ಯ ಸ್ವಾಮಿ ಹಿರೇಮಠ ಅವರು ಧಾರವಾಡ ಜಿಲ್ಲೆಯ ರೋಣತಾಲುಕಿನ ಸಿಡಗುಂದಿ ಕೊಪ್ಪದಲ್ಲಿ ಜನ್ಮ ತಾಳಿದರು. ಇವರನ್ನು ಚಿಕ್ಕಂದಿನಲ್ಲಿಯೇ ಸಂಗೀತ ಶಿಕ್ಷಣಕ್ಕಾಗಿ ಇವರ ತಂದೆ ಬಸವಾರ್ಯರು ಪ. ಪಂಚಾಕ್ಷರ ಗವಾಯಿಗಳವರಿಂದ ೧೯೧೧ರಲ್ಲಿ ನಿಡಗುಂದಿ ಕೊಪ್ಪದಲ್ಲಿ ಆದೇ ತಾನೆ ಸ್ಥಾಪಿತವಾದ ಸಂಗೀತಶಾಲೆಯಲ್ಲಿ ಪ್ರವೇಶಕೊಡಿಸಿದರು. ಇವರು ಸಂಗೀತ ಸಾಹಿತ್ಯಗಳ ಅಭ್ಯಾಸ ಮಾಡಿದರಲ್ಲದೆ ಶಿವಕೀರ್ತನ-ಪುರಾಣ-ಪ್ರವಚನ ಕಲೆಯಲ್ಲಿಯೂ ಪಟುಗಳಾದರು. ಇವರು ಸೊಲ್ಲಾಪುರದಲ್ಲಿ ಕೀರ್ತನ ಮಾಡಿದಾಗ ಅಲ್ಲಿಯ ನಾಗರಿಕರು ಇವರ ವಿಷಯ ವಿವೇಚನೆ-ಸಂಗೀತ ಮೊದಲಾದ ಪ್ರತಿಭೆಯುನ್ನು ಮುಕ್ತಕಂಠವಾಗಿ ಹೊಗಳಿದರು. ಇವರು ಆಯುರ್ವೇದದಲ್ಲಿಯೂ ನಿಪುಣರು. ಕಂಪಲಿಯ ಪಂ. ಅನಂತಾಚಾರ್ಯರು ಮತ್ತು ಬೆಂಗಳೂರಿನ ಪ್ರಸಿದ್ಧ ಆಯುರ್ವೇದ ಪಂಡಿತರಲ್ಲಿ ಅಭ್ಯಾಸಮಾಡಿ ನುರಿತ ವೈದ್ಯರಾಗಿಯೂ ಇರುವರು. ಅನೇಕ ರೋಗಿಗಳಿಗೆ. ಚಿಕಿತ್ಸೆ ಮಾಡಿ ಪ್ರಸಿದ್ಧಿ ಪಡೆದಿರುವರು. ಇವರು ಗುರುವರ್ಯ ಪಂ. ಪಂಚಾಕ್ಷರ ಗವಾಯಿಗಳ ಕೃಪೆಗೆ ಪಾತ್ರರಾಗಿ ೧೯೩೯ರಲ್ಲಿ ಶ್ರೀ ಕುಮಾರೇಶ್ವರ ಕೃಪಾಪೋಷಿತ ಸಂಗೀತ—ಸಾಹಿತ್ಯ ನಾಟಕಸಂಸ್ಥೆಯ ವ್ಯವಸ್ಥಾಪಕರಾಗಿ ಬಹು ಶ್ರಮವಹಿಸಿ ಸೇವೆ ಸಲ್ಲಿಸುತ್ತಿರುವರು. ಇವರೀಗ ಪೂಜ್ಯ ಗುರುವರ್ಯರ ಆಜ್ಞೆಯಂತೆ ಶ್ರೀ ಪುಟ್ಟರಾಜರಿಗೆ ನೆರವಾಗಿ ಶ್ರೀ ವೀರೇಶ್ವರ ಪುಣ್ಯಾಶ್ರಮದ ಅಭಿವೃದ್ಧಿಯ ಕಾರ್ಯಗಳನ್ನು ಮಾಡುತ್ತಿರುವರು.

# ಸಂಗೀತ ಪ್ರಾಧ್ಯಾಪಕರು



ಶ್ರೀ ಗುರುಸ್ವಾಮಿ ಕಲಕೇರಿ "ಸಂಗೀತ ವಿಶಾರದ" ಅವರು ವಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಕಲಕೇರಿ ಗ್ರಾಮದಲ್ಲಿ ೧೯೪೦ರಲ್ಲಿ ಜನಿಸಿದರು. ಕಲಕೇರಿ ಗದ್ದಿಗಿಮಠದಲ್ಲಿಯ ಪವಿತ್ರ ವಾತಾರಣದಲ್ಲಿ ಇವರು ಬೆಳೆದರು. ಪ್ರಾಥಮಿಕ ಶಿಕ್ಷಣವನ್ನು ಯಶಸ್ವಿಯಾಗಿ ಮುಗಿಸಿ ಹಿರಿಯ ಸಹೋದರ ಮಡಿವಾಳಯ್ಯನವರ ಸಹಾಯದಿಂದ ಗದುಗಿನ ಪುಣ್ಯಾಶ್ರಮಕ್ಕೆ ೧೯೫೬ರಲ್ಲಿ ಸಂಗೀತ ವಿದ್ಯೆಯನ್ನು ಪಡೆಯುವ ಲವಲವಿಕೆಯಿಂದಬಂದರು. ಇವರಿಗೆ ಸಂಗೀತವು ಬಾಲ್ಯದಿಂದಲೂ ಒಲಿದ ಕಲೆಯಾಗಿತ್ತು. ಸ್ವಾಧ್ಯಾಯನಿಷ್ಠರಾದ ಇವರು ಸಂಗೀತ-ಸಾಹಿತ್ಯಗಳಲ್ಲಿ ನೈಪುಣ್ಯ ಪಡೆದು ಗುರುಗಳ ನೆಚ್ಚಿನ ಶಿಷ್ಯರಾದರು. 'ಸಂಗೀತ ವಿಶಾರದ' ಪರೀಕ್ಷೆಯಲ್ಲಿ ವಿಶೇಷ ಯೋಗ್ಯತೆಯೊಂದಿಗೆ ಉತ್ತೀರ್ಣರಾದರು ಸಂಗೀತ ಕಚೇರಿಗಳಲ್ಲಿ ಗುರುವರ್ಯ ಶ್ರೀ ಪುಟ್ಟರಾಜರ ಸಂಗಾತಿಗಳಾಗಿ ಸಂಗೀತ ವಿದ್ಯೆಯ ಆಳವನ್ನು ಅಳವಡಿಸಿಕೊಂಡರು. ಅವರೀಗ ಗುರುಕೃಪೆಗೆ ಪಾತ್ರರಾಗಿ ವೀರೇಶ್ವರ ಪುಣ್ಯಾಶ್ರಮದ ಸಂಗೀತ-ಸಾಹಿತ್ಯ ವಿದ್ಯಾಲಯದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವರು. ಸಂಗೀತದೊಂದಿಗೆ ಕವಿತ್ವಶಕ್ತಿ ಮತ್ತು ಅಭಿನಯ ಕಲೆಯನ್ನೂ ಸಾಧಿಸಿಕೊಂಡಿರುವ ಸರಳ ಜೀವಿ ಹಾಗೂ ಉತ್ಸಾಹಿ ಗುರುಸ್ವಾಮಿಯವರಲ್ಲಿ ಕವಿತ್ವಶಕ್ತಿಯೂ ಸಹಜವಾಗಿ ಪಳಗಿ ಬಂದಿದೆ. ಅವರು 'ಜೀವನ ಕವನ' ವೆಂಬ ಕಿರುಗಾಣಿಕೆಯನ್ನು ತಮ್ಮ ಗುರುವರ್ಯರಿಗೆ ಅರ್ಪಿಸಿದ್ದಾರೆ. ಅವರು 'ಪ್ರಗತಿಯ ಪಥ' 'ಗದುಗಿನ ಗಾನಯೋಗಿ' ಚರಿತ್ರೆಗಳನ್ನೂ 'ಗೆಳೆತನ' 'ಯೌವನ' 'ಮದುವೆಯ ಮಂಟಪ' 'ಹಣಕ್ಕೆ ಮಾರಿದ ಹೆಣ' 'ಕಲಂಕಿನಿ ಪತಿವ್ರತೆ' ಮುಂತಾದ ನಾಟಕಗಳನ್ನು ರಚಿಸಿರುವರು. ತಮ್ಮ ಮೊದಲ ನಾಟಕ ಕೃತಿ 'ಗೆಳೆತನ' ವನ್ನು ಗುರುಗಳ ನಾಟ್ಯಸಂಘಕ್ಕೆ ಅರ್ಪಿಸಿದ್ದಾರೆ.

